# ತೀರಿದ ಆಸೆ

ಸೇವ ನಮಿರಾಜ ಮಲ್ಲ

ವಾಹಿನಿ ಪ್ರಕಾಶನ
ಜಯಚಾಮರಾಜ ರಸ್ತೆ, ಬೆಂಗಳೂರು-೨

ಪಾಡಿಗಾರು ವೆಂಕಟರಮಣಾಚಾರ್ಯರಿಗೆ

ಆದರ ಪೂರ್ವಕ

— **ಸೇವ ನಮಿರಾಜ ಮಲ್ಲ**

# ೧

ದುಂಡುಮಲ್ಲಿಗೆ, ಮೈಸೂರುಮಲ್ಲಿಗೆ, ಜಾಜಿ, ಸಂಪಿಗೆ, ಕೇದಿಗೆ, ಸೇವಂತಿಗೆ, ಮತ್ತು ಪಾರಿಜಾತದ ಹೂಗಳ ರಾಶಿಯ ಮುಂದೆ ಹೊನ್ನಮ್ಮ ಕುಳಿತಿದ್ದಾಳೆ. ಕೈಯಲ್ಲಿ ಬಾಳೆಯ ನಾರಿದೆ. ಅದರ ಒಂದು ತುದಿಯನ್ನು ಕಾಲಿನ ಹೆಬ್ಬೆರಳಿಗೆ ಸುತ್ತಿದ್ದಾಳೆ. ಒಂದು ಕೈಯಲ್ಲಿ ಹೂವನ್ನು ತೆಗೆದು ದಾರಕ್ಕೆ ಸೇರಿಸುವುದು, ಮತ್ತೊಂದು ಕೈಯಿಂದ ದಾರವನ್ನು ತಿರುಗಿಸಿ ಎಳೆಯುವುದು. ನಾಲ್ಕು ಮಲ್ಲಿಗೆ ಹೂಗಳ ಮಧ್ಯೆ ಒಂದು ಸಂಪಿಗೆ ಹೂ, ಸ್ವಲ್ಪ ಆಚೆ ಸೇವಂತಿಗೆಯ ಒಂದು ಹೂ—ಹೀಗೆಯೇ ಹೂಗಳೆಲ್ಲಾ ಒಂದೊಂದಾಗಿ, ಜೋಡಿ ಜೋಡಿಯಾಗಿ ಹೂಮಾಲೆಯನ್ನು ಉದ್ದುದ್ದ ಬೆಳೆಸುತ್ತಲಿವೆ. ಆಗ ಒಳಗೊಂದು ಸದ್ದಾಗುವುದು. ಬಹುಶಃ ಆ ಕಳ್ಳ ಗಂಡುಬೆಕ್ಕು. ಅವರ ಕಟಾಕ್ಷದಿಂದ ಮನೆಯೊಳಗಿನ ಯಾವ ಪಾತ್ರೆಯೂ, ಯಾವ ಆಹಾರ ಪದಾರ್ಥವೂ ಸುರಕ್ಷಿತವಿಲ್ಲ. ಒಂದರ ಮೇಲೆ ಅದು ನೆಗೆಯುವುದು, ಮತ್ತೊಂದರ ಮುಚ್ಚಳವನ್ನು ಮೂತಿಯಿಂದ ಇಲ್ಲವೇ ಕೈಗಳಿಂದ ಎತ್ತುವುದು; ಬಳಿಯಲ್ಲಿ ಬರೀ ಪಾತ್ರೆಯಿದ್ದರೂ ಅದಕ್ಕೊಮ್ಮೆ ಬಾಯಿ ಹಾಕಿ ಮೂಸಿನೋಡದೆ ನಿರ್ವಾಹವಿಲ್ಲ. ಶಬ್ದ ಕೇಳಿ ಹೊನ್ನಮ್ಮ ಕಾಲು ಮಡಚುತ್ತಿದ್ದಂತೆಯೇ ಬೆಕ್ಕು ಹೊರಗೆ ಓಡಿಹೋಯಿತು.

ಅವಳು ಅದನ್ನು ನೋಡಿ ಹಲ್ಲು ಕಡಿಯುತ್ತಾ "ನೀನು ಇನ್ನೊಮ್ಮೆ ಬಾ" ಎಂದು ಶಪಿಸಿದಳು.

ಹೂ ಪೋಣಿಸುವುದು ಮುಗಿಯದು. ಬಿಳಿ ಹೂಗಳ ಮಧ್ಯೆ ಹಳದಿ, ಇಲ್ಲವೇ ಹಳದಿ ಹೂಗಳ ಮಧ್ಯೆ ಬಿಳಿ ಹೂಗಳು ಒಳ್ಳೆಯದೋ ಎಂದು ಅವಳು ನೋಡುತ್ತಿದ್ದಾಳೆ. ಕೆಲವು ಹೂಗಳನ್ನು ಕೀಟಗಳು ಹಾಳುಮಾಡಿವೆ. ಕೆಲವರ ಕೋಮಲ ಕುಸುಮಗಳು ಹರಿದು ಹೋಗಿವೆ. ಅವನ್ನೆಲ್ಲ ಬಿಟ್ಟುಬಿಡಲು ಆಕೆಗೆ ಮನಸ್ಸು ಬಾರದು. ತನ್ನ ತಲೆ ಎಷ್ಟು ಚಿಕ್ಕದಾಗಿದ್ದರೂ ಅದರ ಮೇಲೆ ಲೋಕದಲ್ಲಿರುವ ಎಲ್ಲಾ ಹೂಗಳನ್ನೂ ಒಟ್ಟುಮಾಡಿ ಮುಡಿಸಬಹುದು, ಎಂದು ಆಕೆ ಹಲವಾರು ಸಲ ಅಂದುಕೊಂಡಿದ್ದಳು.

ಆಗಲೇ ಕೋಳಿಗಳ ಚೀರಾಟ ಆರಂಭವಾಯಿತು. ಏನು, ಸಣ್ಣವು ದೊಡ್ಡವು ಎಲ್ಲಾ ಕೇಕೇ ಎನ್ನುತ್ತ ಹಾರತೊಡಗಿದುವು. ಅಲ್ಲೇ ಮೇಲೆ ಗಿಡುಗ ಸುಳಿಯುತ್ತಿತ್ತು. ಈಗ ಆಕೆಗೆ ಹೂವಿನ ಕೆಲಸವನ್ನು ನಿಲ್ಲಿಸದೆ ಉಪಾಯವಿಲ್ಲ. ಅಲ್ಲೇ ಚಿಕ್ಕ ಚಿಕ್ಕ ಕೋಳಿ ಮರಿಗಳು ಹಲವಾರು ಇವೆ. ಅವಳು ಎದ್ದು ಅಂಗಳಕ್ಕಿಳಿಯುವಾಗಲೇ, ಗಿಡುಗ ಒಂದು ಮರಿಯ ಮೇಲೆ ಎರಗಿ ಅದನ್ನು ಕೊಂಡು ಹೋಗಿಯೇ ಬಿಟ್ಟಿತು. ಹೇಂಟೆಯೊಂದು ಅದರ ಅವಾಚನೀಯ ಧ್ವನಿಯಲ್ಲಿ ಪ್ರಲಾಪಿಸುತ್ತಿತ್ತು.

ಹೊನ್ನಮ್ಮ ಪುನಃ ಹೂವನ್ನು ನೇಯುವ ಕೆಲಸದಲ್ಲಿ ತೊಡಗಿದಳು. ಆದರೂ ಆ ಹೇಂಟೆಯ ರೌರವ ಕಿವಿಕೇಳುತ್ತಿತ್ತು: ಅದೇನು ಮಹಾ ಎಂದು ಅವಳಿಗನ್ನಿಸಿತು. ಅದಕ್ಕೆ ಇನ್ನೂ ಐದಾರು ಮರಿಗಳಿದ್ದಾವೆ. ಅವು ಆರೋಗ್ಯದಲ್ಲಿ ಪುಷ್ಟಿಯಾಗಿ ನಲಿಯುತ್ತಿವೆ. ಏನು ಒಂದು ಮರಿಯನ್ನು ಗಿಡುಗ ಅಪ್ಪಳಿಸಿಕೊಂಡು ಹೋಗಲು ಅದಕ್ಕೆ ಈ ಪ್ರಲಾಪ. ಅದೂ ಹೇಂಟೆ ತನ್ನ ಜೀವನಮಾನದಲ್ಲಿ ಹಲವಾರು ಸಂತತಿಯನ್ನಿಕ್ಕಿ ಹಲವಾರು ಮಕ್ಕಳನ್ನು ಪಡೆಯುವುದು. ಹೇಂಟೆ-

ಮೂಢತನವನ್ನೊಮ್ಮೆ ನೆನೆದು ಆಕೆ ತಿಳಿಯಾಗಿ ನಕ್ಕಳು.

ಆದರೆ ಆ ನಗುವಿನೊಡನೆಯೇ ವಿಷಾದದ ಛಾಯೆಯೂ ಒಡ ಮೂಡಿತ್ತು.

ಹೇಂಟೆ ಮನುಷ್ಯನಂತಲ್ಲ. ಅದಕ್ಕೆ ಸುಖ-ದುಃಖ ಇತ್ಯಾದಿ ಭಾವನೆಗಳ ಅರಿವು ತೀರ ಕಡಿಮೆ. ಅದಕ್ಕೆ ಮನುಷ್ಯನಂತೆ ರೋದಿಸಲು ತಿಳಿಯದು. ಕಣ್ಣೀರು ಸುರಿಸಲು ಬಾರದು. ಅದು ತಂದೆ-ತಾಯಿ-ಮಕ್ಕಳನ್ನೊಳಗೊಂಡ ಸಂಸಾರವನ್ನು ನಡೆಸುವುದಿಲ್ಲ. ಆ ಬಾಂಧವ್ಯದ ಮಾರ್ಮಿಕತೆ, ಅವರ ಮಧುರತೆ-ಯಾವುದೊಂದೂ ಹೇಂಟೆಗೆ ತಿಳಿಯದು. ಆದರೂ ಅದು ಆಲಾಪಿಸುತ್ತಿದೆ. ಪ್ರಲಾಪಿಸುತ್ತಿದೆ.

ಹೆದರಿಕೆಯಿಂದ ಹಾಗೆ ಮಾಡುತ್ತಿರಲೂ ಬಹುದು, ಬಹುಶಃ.

ಗಿಡುಗನೆಂದರೆ ಹಕ್ಕಿಗಳ ಒಂದು ರೀತಿಯ ತುಂಡರಸ-ಅವನನ್ನು ವಿರೋಧಿಸಬೇಕಾದರೆ ರಣಹದ್ದು ಬರಬೇಕಷ್ಟೆ. ಗುಬ್ಬಚ್ಚಿ, ಕೋಳಿ, ಕೋಗಿಲೆ ಮುಂತಾದುವು ಅವನನ್ನೊಮ್ಮೆ ದೃಷ್ಟಿಸಿದೊಡನೆಯೇ ಅಂಜಿಕೆಗೊಳಗಾಗುವುವು. ಎಡವುತ್ತ ತಡವುತ್ತ ಅವನ ಬಲಿಷ್ಠ ಕೊಕ್ಕಿನ ಸೀಳಿನ ನಡುವೆ ತಮ್ಮ ಕುತ್ತಿಗೆಗಳನ್ನು ಅಮುಕಿಸುವುವು.

ಅವನೇ ರಾಜ, ಅವನೇ ಅಂತ್ಯದ, ಜೀವ ತೆಗೆಯುವ ಯಮರಾಜ.

ಭರ್‍ರನೆ ಒಂದು ಗಾಳಿ ಬೀಸಿತು. ಹೂಗಳೆಲ್ಲ ಅತ್ತಿತ್ತ ಹಾರಿದವು. ಹೊನ್ನಮ್ಮ ಎದ್ದು ಪುನಃ ಅವನ್ನು ಒಟ್ಟುಗೂಡಿಸಿದಳು. ಗಾಳಿಯ ಸುಳಿಯಲ್ಲಿ ಕೆಲವು ಹೂಗಳು ಆಗಲೇ ಅಂಗಳಕ್ಕೆ ಹಾರಿಹೋಗಿದ್ದುವು. ಅವಳ ಕೈಯಲ್ಲಿದ್ದ ಕೆಲವೂ ಹಾರಲು ಯತ್ನಿಸುತ್ತಿದ್ದುವು. ಕೆಲ ಕ್ಷಣ ಅವನ್ನು ಬಾಚಿಹಿಡಿಯಲು ಆಕೆ ಯತ್ನಿಸಿದಳು. ಆದರೆ ಕೊನೆಗೆ ಹೂವನ್ನಿಟ್ಟಿದ್ದ ಇಡೀ ಬಾಳೆಯ ಎಲೆಯೇ ಹೊರಗೆ ಹಾರಿಹೋಯಿತು.

ಹೊನ್ನಮ್ಮ ಆಗ ಕೋಪದಲ್ಲಿ ಕಿಡಿಕಿಡಿಯಾದಳು. ಕೈಯಲ್ಲಿ

ಉಳಿದಿದ್ದ ಕೆಲವು ಹೂಗಳನ್ನು ಅಲ್ಲೇ ನಜ್ಜುಗುಜ್ಜು ಮಾಡಿದಳು. ಹಲ್ಲು ತತ್ತರಿಸುತ್ತಿತ್ತು. ಕೈ ನಡುಗುತ್ತಿತ್ತು. ಯಾರ ಮೇಲೆ ಕೋಪ ವೆಂದು ಅವಳಿಗೇ ತಿಳಿಯದು. ಆದರೆ ಕೋಪ ಉರಿಯುತ್ತಿತ್ತು. ಅವಳು ಅದರಿಂದಾಗಿ ನೆಲಕ್ಕೆ ಒದೆಯಬಹುದಿತ್ತು, ಗೋಡೆಗೆ ಹೊಡೆಯಬಹುದಿತ್ತು.

ಆದರೆ ಗಾಳಿ ಒಂದೇಸಮನೆ ಚಲ್ಲಾಟವಾಡುತ್ತಿತ್ತು. ಅಂಗಳ ದಲ್ಲಿ ಬಿಸಿಲ ಝಳದಲ್ಲಿ ಮಲ್ಲಿಗೆ, ಪಾರಿಜಾತ ಮೊದಲಾದ ಹೂಗಳು ಅಲ್ಲಿಂದಿಲ್ಲಿ-ಇಲ್ಲಿಂದಲ್ಲಿ ಧೂಳಿನೊಡನೆ ಬೆರೆತು ಹಾರಾಡುತ್ತಿದ್ದುವು. ಅವುಗಳ ಹಿಂದೆ ಓಡುವುದು ಅವಳಿಗೆ ಸಾಧ್ಯವಿಲ್ಲದ ಕೆಲಸ.

ಅಲ್ಲೇ ಅಂಗಳದ ಬದಿಯಲ್ಲಿದ್ದ ಮಾವಿನ ಮರಗಳು, ಹಲಸಿನ ಮರಗಳು ಎಲ್ಲ ಗಾಳಿಯ ಅಬ್ಬರಕ್ಕೆ ಅಲುಗಾಡುತ್ತಿದ್ದುವು. ಅದೇ ತೆನೆಗಾಳಿ. ಅರಳಿರುವ ಹೂಗಳೊಳಗೆ ಪರಾಗಗಳನ್ನು ತುಂಬಿಸುವ ಗರ್ಭದಾನದ ಗಾಳಿ. ಅದು ಮನುಷ್ಯರ ಮೈಗೆ ಅಪ್ಪುವಾಗ ಕೂಡಾ ಮೈ ಝುಮ್ಮೆನ್ನುವುದು. ನರಗಳು ಕಂಪಿಸುವುವು. ರೋಮಗಳು ಸೆಟೆದು ನಿಲ್ಲುವುವು. ಹೊನ್ನಮ್ಮನೂ ಆ ಪವನ ಸ್ಪರ್ಶಸುಖವನ್ನು ಅನುಭವಿಸದವಳಲ್ಲ. ಆ ಗಾಳಿ ಮಾದಕ, ವಿಲಾಸಮಯ ಗಾಳಿ. ಕೂದಲುಗಳನ್ನು, ಕಣ್ಣುಗಳನ್ನು, ಕಿವಿಗಳನ್ನು, ಮೂಗನ್ನು, ಗಲ್ಲವನ್ನು, ತುಟಿಗಳನ್ನು, ಎದೆಯನ್ನು, ಕೈಗಳನ್ನು, ಕಾಲುಗಳನ್ನು ಎಲ್ಲವನ್ನೂ ಅದು ರಭಸದಿಂದ, ಮೃದುವಾಗಿ, ತೆರೆತೆರೆಯಾಗಿ ಅಪ್ಪು ವುದು, ಆಲಂಗಿಸುವುದು, ಅಲುಗಿಸುವುದು. ಅದೇ ಗಾಳಿ ಆವೇಶದ ಕಡಲಿನ ಬಿರುಗಾಳಿ. ಮನಸ್ಸಿನ ಸುಂಟರಗಾಳಿ. ಆಸೆಯ ಅಂಕುರಕ್ಕೆ, ಉತ್ತೇಜನದ ಉಲ್ಬಣಕ್ಕೆ, ದಾಹದ ದ್ಯೋತಕಕ್ಕೆ, ಅದು ಹಿತಕಾರಿ.

ಹೊನ್ನಮ್ಮ ಹೂಮಾಲೆಯನ್ನು ಮುಡಚಿಟ್ಟು, ಒಳಗಿನಿಂದ ಕನ್ನಡಿಯನ್ನು ತಂದಳು. ಅದು ತೀರ ಹಳತಾಗಿ ಅವಳ ಪ್ರತಿಬಿಂಬ ಸರಿಯಾಗಿ ಕಾಣಿಸುತ್ತಿರಲಿಲ್ಲ. ಅದರ ಹಿಂಬದಿಯ ಪಾದರಸ

ನೀರಿನಲ್ಲಿ ತೊಯ್ದೋ, ಸಮಯದೊಡನೆ ಸವೆದೊ, ಆಗಲೇ ಕಳೆಗುಂದಿತ್ತು. ಆದರೂ ಆಕೆಗೆ ತಾನು ಹೇಗಿದ್ದೇನೆಂಬುದನ್ನು ತಿಳಿಯಲು ಕನ್ನಡಿ ಬೇಡ. ಹೂಮುಡಿಯುವಾಗ ಅದು ತಲೆಗೆ ಹೇಗೆ ಒಪ್ಪುತ್ತದೆ, ಎಲ್ಲಿ ಅದು ಓರೆಯಾಗಿದೆ, ಎಲ್ಲಿ ಅದರ ಬಣ್ಣ ಸರಿಯಾಗಿಲ್ಲ—ಇವನ್ನು ತಿಳಿಯಲು ಕನ್ನಡಿ ಬೇಕೇಬೇಕು. ಮತ್ತೆ ಹೂಮುಡಿದಾದ ನಂತರ, ಅವುಗಳ ಮಧ್ಯೆ ತನ್ನ ಮುಖ ಹೇಗೆ ಕಾಣುವುದೆಂದು ಅರೆಕ್ಷಣ ಪುನಃ ನೋಡಿಕೊಂಡರೂ ಆಯಿತು. ಅದೂ ದಿನಕ್ಕೊಂದು ಬಾರಿ, ಬಿಡುವಿದ್ದರೆ. ಕೆಲಸದ ಸಮಯದಲ್ಲಿ ದಿನಗಟ್ಟಲೆ ಅವಳು ಕನ್ನಡಿಯನ್ನು ನೋಡದಿದ್ದುದೂ ಇತ್ತು.

ಹೂಮಾಲೆ ಎಡಕಿವಿಯ ಬದಿಯಿಂದ ಇಣಿಕಿನೋಡುತ್ತಿದೆ. ಬಲಕಿವಿಯ ಹಿಂದೆ ಕೂದಲು ಮಾತ್ರ. ಛೆ! ಅದನ್ನು ಸ್ವಲ್ಪ ಈಕಡೆ ದೂಡಬೇಕು. ಈಗ ಎಡಗಡೆಯಲ್ಲಿ ಹೂವು ಕಾಣಿಸುವುದಿಲ್ಲ, ಬಲಗಡಯಲ್ಲಿ ಮಾತ್ರ ಇದೆ. ಇನ್ನೂ ಸ್ವಲ್ಪ ಮೆಲ್ಲಗೆ ಅತ್ತ ಎಳೆಯಬೇಕು. ತಲೆಯ ಮೇಲಿಂದ ಒಂದು ಸೇವಂತಿಗೆ ಹೂ ಕಣ್ಣು ಹಾಕುತ್ತಿದೆ. ಅದೇ! ಅದೇನು? ಮಾಲೆಯಿಂದ ನುಸುಳಿಬಿಟ್ಟಿದೆಯೆ? ಥೂ ಅದನ್ನು ತೆಗೆದು ಬಿಡಬೇಕು. ಎಷ್ಟು ಚಂದದ ಹೂ. ಇದ್ದುದು ಬರೇ ಎರಡು ಸೇವಂತಿಗೆ. ಒಂದು ಮಾತ್ರ ಇನ್ನು ತಲೆಯಲ್ಲಿ ಉಳಿಯಿತು. ಅದು ಓರೆಯಾಗಿ ಕಾಣಬಹುದು........ಹೂಂ. ಇನ್ನಾರು ಇವನ್ನೆಲ್ಲ ಪುನಃ ಬಿಚ್ಚಿ ಸರಿಮಾಡುವುದು! ಸೇವಂತಿಗೆಯನ್ನು ನಾಳೆಯೂ ಮುಡಿಯಬಹುದು. ಅದು ಹಾಳಾಗುವುದಿಲ್ಲ. ಬಾಡಿ ಹೋಗುವುದಿಲ್ಲ. ಹೊತ್ತಾಯಿತು. ಹೌದು. ಅನ್ನಕ್ಕೆ ನೀರಿಡಬೇಕು.

ಹೀಗೆಂದು ಯೋಚಿಸುತ್ತ ಹೊನ್ನಮ್ಮ ಅಡಿಗೆ ಮನೆಗೆ ತೆರಳಿದಳು. ಅಡಿಗೆ ಮನೆಯೆಂದರೆ ಕತ್ತಲೆಯ ಗೂಡಿನಂಥ ಸ್ಥಳ. ಬೆಳಕು ಬೀಳಲು ಸಣ್ಣದೊಂದು ಕಿಟಕಿ. ಅತ್ತಿತ್ತ ಎಲ್ಲ ಮಣ್ಣಿನ ಪಾತ್ರೆಗಳು. ಕೆಳಗೆ ಮಣ್ಣಿನ ಒಲೆ. ಮೇಲೆ ಉಪ್ಪಿನಕಾಯಿ, ಉಪ್ಪು, ಮೆಣಸು,

ಸಾಂಬಾರ ಮುಂತಾದುವನ್ನಿಡಲು ಬಿದಿರಿನ ಸಣ್ಣ ಅಟ್ಟಳಿಗೆ. ನೆಲವನ್ನು ಪಾಚಕ್ಕೊಮ್ಮೆಯಾದರೂ ಅವಳು ಸಾರಿಸದಿಲ್ಲ. ಆದರೆ ಅಲ್ಲಿ ಜಿರಳೆ ಮತ್ತು ಇಲಿಗಳಿಗೆ ಲೆಕ್ಕವಿಲ್ಲ. ಅವು ಹಗಲು ರಾತ್ರಿ ಎನ್ನದೆ ಕಟ್ಟಿಗೆಯ ಮೇಲೆ, ಪಾತ್ರೆಯಮೇಲೆ, ಆಹಾರ ಪದಾರ್ಥಗಳಮೇಲೆ ಸರಿಯುತ್ತಲೇ ಇರುವುವು.

ಹೊನ್ನಮ್ಮ ಒಲೆಯ ಬೂದಿಯನ್ನು ಬಾಯಲ್ಲಿ ಊದಿ ಕೆದಕಿದಳು. ಕೆಂಡಗಳೆಲ್ಲ ಉರಿದು ಹೋಗಿದ್ದುವು. ಪುನಃ ಒಲೆ ಉರಿಸಬೇಕು. ಕಟ್ಟಿಗೆಯಲ್ಲಿ ಗೆದ್ದಲು ಹುಳುಗಳು ಅತ್ತಿತ್ತ ಸರಿಯುತ್ತಿವೆ. ಅಲ್ಲೇ ತೆಂಗಿನ ಮರದ ತರಗೆಲೆಯಿದೆ. ಬೆಂಕಿಪೊಟ್ಟಣವನ್ನು ಹುಡುಕಿ ಚಿಮಿಣಿ ದೀಪವನ್ನು ಮೊದಲು ಉರಿಸಿದಳು. ಆಮೇಲೆ ತರಗೆಲೆಯನ್ನು ಹೊತ್ತಿಸಿ ಕಟ್ಟಿಗೆಯ ಮಧ್ಯೆ ಇಟ್ಟಳು. ಕಟ್ಟಿಗೆ ಸ್ವಲ್ಪ ಹಸಿಯಾಗಿದ್ದುದರಿಂದ ಹೊಗೆ ಏಳತೊಡಗಿತು. ಅವಳ ಕಣ್ಣುಗಳಲ್ಲಿ ನೀರುಬಂತು. ಕೈಮೈಯ್ಯಲ್ಲೆಲ್ಲ ಗೆದ್ದಲಿನ ಹುಳಗಳು ಹರಿದಾಡತೊಡಗಿದುವು.

ಕಣ್ಣನ್ನುಜ್ಜುತ್ತ ಆಕೆ ಕೊಡವನ್ನು ತೆಗೆದುಕೊಂಡು ಬಾವಿಯ ಕಡೆ ಹೋದಳು. ನೀರು ತೆಗೆಯುವ ನಾರಿನ ಹಗ್ಗ ಸವೆದು ಸವೆದು ಎಳೆಎಳೆಯಾಗಿ ಸೀಳಿಹೋಗಿತ್ತು. ಕೊಡವನ್ನು ಕೆಳಕ್ಕಿಳಿಸುವಾಗಲೇ ಹಗ್ಗದ ಒಂದು ತುಂಡು ರಾಟೆಗೆ ಸಿಕ್ಕಿಕೊಂಡಿತು. ಹೇಗೋ ಮಾಡಿ ಅವಳದನ್ನು ತೆಗೆದು ಕೊಡವನ್ನು ಕೆಳಗಿಳಿಸಿದಳು.

ಕೊಡ ಕೆಲಸಮಯದವರೆಗೆ ನೀರಿನಲೆಗಳಮೇಲೆ ಚೆಲ್ಲಾಟವಾಡಿತು. ಅವಳೆಷ್ಟು ಯತ್ನಿಸಿದರೂ ಅದರಲ್ಲಿ ನೀರು ತುಂಬಲಿಲ್ಲ. ಹಗ್ಗವನ್ನು ನಾಲ್ಕೈದುಸಲ ಹಿಡಿದೆಳೆದು ಜಗ್ಗಿದಳು. ಆದರೂ ಕೊಡ ನೀರಿನಮೇಲೆಯೇ ನಲಿಯುವುದು ವಿನಃ ಅಡ್ಡ ಬೀಳುವುದಿಲ್ಲ. ಕೊನೆಗೆ ಹೇಗೋ ಅದರಲ್ಲಿ ನೀರು ತುಂಬಿತು. ಹೊನ್ನಮ್ಮ ಹಗ್ಗವನ್ನು ಎಳೆಯತೊಡಗಿದಳು. ಆಗಲೇ 'ನಟನಟ' ಶಬ್ದವಾಯಿತು.

ರಾಟೆಯನ್ನು ಕಟ್ಟಿದ್ದ ಮರ ತುಂಬಾಗಿ ಟ್ಟಿತ್ತುವೋ ಅಲ್ಲ ರಾಟೆಯ ಹಗ್ಗ ತುಂಡಾಯಿತೋ ಎಂಬುದು ಅವಳಿಗೆ ಗೊತ್ತಾಗಲಿಲ್ಲ. ಮತ್ತೊ ಸ್ವಲ್ಪ ಸದ್ದಾಯಿತು.

ಮತ್ತೊಂದು ಕ್ಷಣದಲ್ಲೇ ಕೊಡ ಬಾವಿಯೊಳಗೆ ಬಿತ್ತು.

ಹೊನ್ನಮ್ಮನಿಗೆ ಫಕ್ಕನೆ ಏನೂ ಮಾಡಲಾಗಲಿಲ್ಲ. ಬಾವಿಗೆ ಇಣಿಕಿ ನೋಡಿದಳು. ಆದರೆ ಅವಳಿಗೆ ನೀರು ಕೂಡಾ ಸರಿಯಾಗಿ ಕಾಣಿಸದು. ಬಾವಿಯ ಒಳಗೆ ಸುತ್ತಲೂ ಹುಲ್ಲು ಸಸಿಗಳು ಬೆಳೆದಿವೆ. ತುಂಡಾದ ಹಗ್ಗ ಮೇಲೆ ನೇತಾಡುತ್ತಿತ್ತು.

ಅವಳಿಗೆ ಬಾವಿಗೆ ಇಳಿಯಲು ಸಾಧ್ಯವಿಲ್ಲ. ಅದಕ್ಕೆ ಅಂಕಣಗಳೂ ಇಲ್ಲ. ಯಾವುದೋ ಒಂದು ಕಾಲದಲ್ಲಿ ಅಗೆದ ಬಾವಿಯಾಗಿರಬೇಕದು. ಬಾವಿಯ ಮಣ್ಣು ಅನೇಕಸಲ ಒಳಗೆ ಜರಿದುಬಿದ್ದಿದೆ. ಕೊಡವನ್ನು ಬಾವಿಯಲ್ಲೇ ಬಿಟ್ಟಿರಲೂ ಸಾಧ್ಯವಿಲ್ಲ. ಆದರೆ ಅದನ್ನು ತೆಗೆಯಲು ತಸಿಯ ಮರಳಬೇಕಷ್ಟೆ.

ಹಾಗೆಯೇ ನೆನೆಸುತ್ತ ಮರಳಿ ಮನೆಗೆ ತೆರಳಿ ಒಂದು ಮಣ್ಣಿನ ಕೊಡವನ್ನು ಹಿಡಿದುಕೊಂಡು ತೋಡಿನ ಬಳಿ ಹೊರಟಳು. ತೋಡು ಅಲ್ಲೇ ತಿಮಾರು ಗದ್ದೆಯ ಬದಿಯಿಂದ ಹರಿಯುತ್ತಿತ್ತು. ಈಗ ಅದಕ್ಕೆ ಅಣೆಕಟ್ಟು ಹಾಕಿದ್ದಾರೆ. ಒಂದೆರಡು ಚಿಕ್ಕ ತೂತುಗಳಿಂದ ಮಾತ್ರ ನೀರು ಹರಿಯುತ್ತಿತ್ತು. ಆ ನೀರು ಕುಡಿಯಲು ಅಷ್ಟು ಒಳ್ಳೆಯದಲ್ಲ ನೆಂಬುದು ಅವಳಿಗೆ ಗೊತ್ತಿದ್ದುದೇ. ಆದರೆ ಈಗ ಅಡುಗೆ ಮಾಡಲು ಬೇರೆ ಉಪಾಯವಿಲ್ಲ. ಮತ್ತೊಂದು ಮನೆಗೆ ಹೋಗುವುದೆಂದರೆ ಇನ್ನೂ ದೂರ ನಡೆಯಬೇಕು. ಅಲ್ಲಿಂದ ಮರಳುವಾಗಲೇ ಕತ್ತಲಾದೀತು. ಹರಿಯುವ ನೀರು ಶುದ್ಧವೆಂದು ಹೇಳುವುದನ್ನು ಅವಳು ಕೇಳಿದ್ದಳು. ಅದರಲ್ಲೆಷ್ಟೇ ಕೊಳೆಯಿರಲಿ, ಕಲ್ಮಷವಿರಲಿ, ಎಲ್ಲವೂ ಹರಿಯುವಾಗ ಶುದ್ಧವಾಗುವುದಂತೆ.

ಅಂಗಳವನ್ನು ದಾಟಿ ಆಕೆ ಗದ್ದೆಯ ಆವರಣಕ್ಕೆ ಕಾಲಿಟ್ಟಿದ್ದ

ಳಷ್ಟೇ. ಅಲ್ಲೇ ಒಂದು ಕಪ್ಪಾದ ಕೇರೆ ಹಾವು ಸರ್ರನೆ ಸರಿದು ಹೋಯಿತು. ಆಕೆ ಕ್ಷಣಕಾಲ ಬೆರಗಾಗಿ ಅಲ್ಲೇ ನಿಂತಳು.

"ಹೊನ್ನಮ್ಮಕ್ಕ, ಮನೆಯಿಂದ ಹೊರಡುವಾಗ ಕೇರೆ ಹಾವು ನೋಡ ಸಿಕ್ಕಿದರೆ ಒಳ್ಳೆಯ ಲಕ್ಷಣ."

ಈ ಧ್ವನಿಯನ್ನು ಕೇಳಿ ಅವಳು ಅವಾಕ್ಕಾದಳು. ಅಲ್ಲೇ ತೆಂಗಿನ ಸಸಿಯ ಹೊಂಡದೊಳಗೆ ಮಾರಪ್ಪ ನಿಂತುಕೊಂಡು ನಗುತ್ತಿದ್ದ. ಅವನ ಒಂದು ಕೈಯಲ್ಲಿ ಕತ್ತಿಯಿತ್ತು. ಮತ್ತೊಂದರಲ್ಲಿ ಹುಲ್ಲಿತ್ತು. ಹೊನ್ನಮ್ಮನಿಗೆ ಸ್ವಲ್ಪ ನಾಚಿಕೆಯಾಗದಿರಲಿಲ್ಲ. ಹಳ್ಳಿಯಲ್ಲಿ ಕೇರೆ ಹಾವಿಗೆ ಬಿಟ್ಟು ಸರ್ಪನಿಗೂ ಕೂಡಾ ಹೆದರುವವರು ಕಡಿಮೆ. ಹೆದರಿದವರೂ ಇತರರಿಗೆ ಅದು ತಿಳಿಯಬಾರದು.

ಮಾರಪ್ಪ ಹೊಂಡದಿಂದ ನೆಗೆದು ಗದ್ದೆಯಲ್ಲಿ ಹರಿಯುತ್ತಿದ್ದ ಕೇರೆ ಹಾವಿನ ಹಿಂದೆ ಓಡಿದ. ಕೇರೆ ಹಾವಿನ ಮೈ ಬಿಸಿಲಿಗೆ ಫಳ ಫಳನೆ ಹೊಳೆಯುತ್ತಿತ್ತು. ಅದು ಹರಿಯುವ ವೇಗವೂ ಸಾಧಾರಣದ್ದಲ್ಲ. ಮಾರಪ್ಪ ಗದ್ದೆಯ ಮಣ್ಣು ಹಂಟೆಗಳ ಮೇಲಿಂದ ಜಿಗಿಯುತ್ತ ಜಿಗಿಯುತ್ತ ಓಡಿ, ಅದು ಒಂದು ಬಿಲವನ್ನು ಹೊಕ್ಕುತ್ತಿದ್ದಂತೆಯೇ ಅದರ ಬಾಲವನ್ನು ಹಿಡಿದು, ಅದನ್ನು ಕೈಯಲ್ಲಿ ಬೀಸುತ್ತ ಬೀಸುತ್ತ ಹೊನ್ನಮ್ಮನ ಬಳಿ ಮರಳಿದ.

ಹೊನ್ನಮ್ಮ ನಗುತ್ತಿದ್ದಳು. ಅದೇನೂ ಅಷ್ಟೊಂದು ದೊಡ್ಡ ಸಾಹಸಮಯ ಕೃತ್ಯವಲ್ಲವೆಂಬುದು ಅವಳಿಗೆ ಚೆನ್ನಾಗಿ ಗೊತ್ತಿತ್ತು. ಕೇರೆಹಾವಿಗೇನಾದರೂ ವಿಷವಿಲ್ಲ. ಅದು ಕಚ್ಚಿದರೂ ಏನೂ ಆಗದು. ಅದು ಬಾಲದಲ್ಲಿ ಮಾತ್ರ ಪರಿಣಾಮಕಾರಿಯಾಗಿ ಹೊಡೆಯಬಲ್ಲದೆಂಬ ಪ್ರತೀತಿ ಇತ್ತು. ಹಾಗೆ ಹೊಡೆದರೆ ದನಕರುಗಳ ಕಾಲು ಕೂಡಾ ಮುರಿಯುವುದಂತೆ. ಅಲ್ಲದೆ ಅದು ಒಮ್ಮೆ ಬಿಲಕ್ಕೆ ಹೊಕ್ಕಿತೆಂದರೆ ಮತ್ತೆ ಹನ್ನೆರಡು ಜೋಡು ಕೋಣಗಳನ್ನು ಅದರ ಬಾಲಕ್ಕೆ ಕಟ್ಟಿ ಎಳೆದರೂ, ಅದರ ಬಾಲವೇ ತುಂಡಾದೀತು ವಿನಃ ಅದು

ಹೊರಗೆ ಬಾರದಂತೆ. ತರುಣರನ್ನು ಕಂಡರೆ ಅದು ತನ್ನ ಬೆನ್ನನ್ನೊಮ್ಮೆ ನೇವರಿಸಬೇಕೆಂದು ಆಹ್ವಾನಿಸುವುದಂತೆ. ಇಷ್ಟೆಲ್ಲ ಹೆಸರು ವಾಸಿಯಾದ ಕೇರೆ ಹಾವನ್ನೇನೊ ಹಿಡಿಯುವವರು ಹಳ್ಳಿಯಲ್ಲಿ ಕಡಿಮೆಯಿಲ್ಲ.

ಮಾರಪ್ಪ ಅವಳ ಬಳಿಗೇ ಬಂದ. ಕೇರೆ ಹಾವು ಆಗಲೇ ಅರೆ ಜೀವವಾಗಿತ್ತು. ಅವನು ಅದನ್ನು ಬೀಸುವ ರಭಸದಲ್ಲಿ ಅದರ ಎಲುಬುಗಳೆಲ್ಲ ಮುರಿದು ಹೋಗಿರಬೇಕು ಅದು ನೋವಿನಿಂದ ನಾಲಿಗೆಯನ್ನು ಹೊರಚಾಚುತ್ತಿತ್ತು. ಕಣ್ಣುಗಳನ್ನು ಕೆಳಗೆ ಮೇಲೆ ಮಾಡುತ್ತಿತ್ತು.

"ಯ್ಯೊ ! ಇಕ್ಕಪ್ಪಾ ! ಅದನ್ನೊಮ್ಮೆ ಬಿಟ್ಟು ಬಿಡಲಾಗದೆ ? ಅದರ ಪ್ರಾಣ ಹೋಗುತ್ತಿದೆ !"

—ಹೊನ್ನಮ್ಮ ತನ್ನಷ್ಟಕ್ಕೆ ಉದ್ಗರಿಸಿದಳು.

ಮಾರಪ್ಪ ಕೇರೆ ಹಾವನ್ನು ಬಿಸಾಡಿ ಅವಳನ್ನು ನೋಡಿ ನಸುನಕ್ಕ. ಅವಳು ಮೆಲ್ಲನೆ ತೋಡಿನತ್ತ ಮುಂದರಿದಳು

"ಏನಕ್ಕ, ನೀನು ಕೊಡ ಹಿಡಿದುಕೊಂಡು ಎಲ್ಲಿ ಹೋಗುತ್ತೀ ? ನಿನ್ನ ಬಾವಿಯಲ್ಲಿ ನೀರಿಲ್ಲವೆ ?" ಎಂದು ಮಾರಪ್ಪ ನಗುತ್ತ ಚೇಷ್ಟೆ ಮಾಡಿದ.

"ಹೂಂ. ನಾನು ನೀರೆಳೆಯುತ್ತಿದ್ದಾಗ ಕೊಡ ಬಾವಿಗೆ ಬಿತ್ತು." ಹೊನ್ನಮ್ಮ ತುಸು ಸಂಕೋಚದಿಂದಲೇ ನುಡಿದಳು. "ಇನ್ನು ಅವರು ಬರಬೇಕಷ್ಟೆ. ಯಾವಾಗ ಬರುವರೋ ತಿಳಿಯದು."

"ಬಾವಿ ಅಷ್ಟು ಆಳವಿದೆಯೆ ! ಹ್ಹ !"

"ನಿನ್ನ ಚೇಷ್ಟೆ ಸಾಕು."

"ಅಲ್ಲ ನಿಜವಾಗಿಯೂ ? ಇನ್ನು ಆ ತೋಡಿನ ನೀರೇ ನಿನಗೆ ಗತಿ ?"

"ಹೂಂ."

ಮಾರಪ್ಪ ತುಸು ಹೊತ್ತು ನಿಂತು ನೋಡಿದ. ಅವಳು ಮೆಲ್ಲ ಮೆಲ್ಲನೆ ಹೆಜ್ಜೆ ಹಾಕುತ್ತಿದ್ದಳು. ಅವಳ ನಡಿಗೆಯಲ್ಲಿ ಏನೋ ಒಂದ ರೀತಿಯ ವಯ್ಯಾರ, ಮಾಧುರ್ಯ ಅವನಿಗೆ ಕಂಡುಬಂತು. ಅವನು ಫಕ್ಕನೆ ಅವಳ ಬಳಿಗೋಡಿದ.

"ಕೊಡವನ್ನು ನಾ ತೆಗೆಯಲೆ ?"

ಅವಳು ಮಾತಾಡಲಿಲ್ಲ. ಅವನಂದುದನ್ನು ಗಮನಿಸಿದಂತೆಯೂ ತೋರಲಿಲ್ಲ.

"ಕೊಡವನ್ನು ಬಾವಿಗೆ ಹಾಕಿದ್ದೀ. ಇನ್ನು ಆ ತೋಡಿನ ಪವಿತ್ರ ನೀರನ್ನು ನಿನ್ನ ಗಂಡನಿಗೆ ಕುಡಿಸುವಿ. ಒಳ್ಳೆಯ ಕೆಲಸ."

"ಆಯಿತು. ತೆಗಿ ನೋಡುವ-"

"ಬಾ"

ಇಬ್ಬರೂ ಮನೆಯ ಕಡೆಗೆ ಹೊರಟರು. ಮಾರಪ್ಪನೂ ಉಸುರೆತ್ತಲಿಲ್ಲ. ಹೊನ್ನಮ್ಮನೂ ಮಾತಾಡಲಿಲ್ಲ. ಅವಳಿಗೆ ಇದು ಅಷ್ಟೊಂದು ಹಿತಕರವಾಗಿ ಕಾಣಲಿಲ್ಲ. ಆದರೆ ಮಾರಪ್ಪನೇನೂ ಅಪರಿಚಿತನಲ್ಲ. ಚಿಕ್ಕಂದಿನಿಂದಲೂ ಹೊನ್ನಮ್ಮನ ಮನೆಗೆ ಬರುತ್ತಿದ್ದವ.

"ಮನೆಯಲ್ಲಿ ಬಿದಿರಿನ ಏಣಿ ಇಲ್ಲವೆ ?"

"ಇರಬೇಕು. ತರುತ್ತೇನೆ" ಎನ್ನುತ್ತ ಹೊನ್ನಮ್ಮ ಕೊಡವನ್ನು ಅಲ್ಲೇ ಇಟ್ಟು ಕೊಟ್ಟಿಗೆಗೆ ಹೋದಳು. ಮೇಲೆ ತೂಗು ಹಾಕಿದ ಏಣಿಯನ್ನು ಅವಳು ಎಳೆಯುವಾಗ ಅದು ಕೆಳಗೆಬಿತ್ತು. ಅದರ ಶಬ್ದವನ್ನು ಕೇಳಿ ಮಾರಪ್ಪ ಓಡಿಬಂದ.

"ಏನು ನಿನಗೇನಾದರೂ ನೋವಾಯಿತೆ, ಅಕ್ಕ? ನನ್ನನ್ನು ಕರೆಯಬಾರದಿತ್ತೆ ?"

"ಇಲ್ಲ." ಅವಳು ನಗುತ್ತ ಹೇಳಿದಳು. "ಏನೂ ಆಗಲಿಲ್ಲ ಮಾರಪ್ಪ. ಏನೋ ಹಗ್ಗ ಸಡಿಲಾಗಿದ್ದಿರಬೇಕು. ಮುಟ್ಟಿದೊಡನೆ ಕಳಚಿಬಿತ್ತು."

ಮಾರಪ್ಪ ಏಣಿಯನ್ನು ಹೆಗಲಿಗೇರಿಸಿ ಹೊರಗೆ ಬಾವಿಯಕಡೆ ನಡೆದ. ಆ ಬಾವಿಗಿಳಿಯುವುದೇನೂ ಸಾಮಾನ್ಯ ಕೆಲಸವಾಗಿರಲಿಲ್ಲ. ಅವನು ಏಣಿಗೆ ಕಾಲಿಟ್ಟೊಡನೆಯೇ ಮಣ್ಣು ಕೆಳಗೆ ಬೀಳಬಹುದು. ಏಣಿ ಜಾರಿ ಹೋಗಬಹುದು.

ಹೇಗೋ ಏಣಿಯನ್ನು ನೀರಿಗಿಳಿಸಿ ಕೆಳಗಿಳಿದನವ. ಹೊನ್ನಮ್ಮ ಬಿದಿರಿನ ಒಂದು ತುದಿಯನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಅವಳಿಗೆ ಬಿದಿರು ಕೂಡಾ ನಡುಗುತ್ತಿರುವಂತೆ ಭಾಸವಾಗುತ್ತಿತ್ತು. ಕೆಲವೊಮ್ಮೆ ಅವನು ಕೆಳಗಿಳಿಯುತ್ತಿದ್ದಾಗ ಅದು ಸ್ವಲ್ಪ ಅತ್ತಿತ್ತ ಸರಿಯುವುದು. ಕೆಲವೊಮ್ಮೆ ಮಣ್ಣಿನ ಹೆಂಟೆ ಕೆಳಗೆ ಬಿದ್ದು ಸದ್ದಾಗುವುದು. ಅವನು ನೀರಿಗಿಳಿದುದು ತಿಳಿದೊಡನೆ ಅವಳು ಕಣ್ಣು ಮುಚ್ಚಿಕೊಂಡಳು.

ಪುನಃ ಬಿದಿರು ಅಲುಗಾಡತೊಡಗಿತು. ಮಾರಪ್ಪ ಕೊಡದ ನೀರನ್ನು ಒಳಗೆ ಖಾಲಿಮಾಡುವ ಸದ್ದು ಕೇಳಿಸಿತು. ಅವಳು ಬಿದಿರನ್ನು ಗಟ್ಟಿಯಾಗಿ ಅಮುಕಿಕೊಂಡಳು. ಅವನು ಹಾವಿನಂತೆ ಬಿದಿರಿನಲ್ಲಿ ಮೆಲ್ಲಮೆಲ್ಲನೆ ಮೇಲಕ್ಕೆ ಹತ್ತುತ್ತಿದ್ದ.

ಕೊನೆಗೆ ಕೊಡ ಹೇಗಾದರೂ ಮೇಲೆ ಬಂತು. ಅವನು ಮೇಲೆ ಕೈಯಿಟ್ಟು ಮಣ್ಣನ್ನು ಅಮುಕುತ್ತಿದ್ದಂತೆಯೇ ಬಿದಿರು ಸ್ವಲ್ಪ ಜಾರಿತು. ಮಣ್ಣಿನ ಹೆಂಟೆಯೂ ಕುಸಿಯಿತು. ಆಗ ಫಕ್ಕನೆ ಹೊನ್ನಮ್ಮ ಅವನ ಕೈಯ್ಯನ್ನು ಹಿಡಿದೆಳೆದಳು. ಅವನು ಹೇಗೋ ಮತ್ತೊಂದು ಕೈಯ್ಯ ಆಧಾರದಿಂದ ಒಂದು ಕಾಲನ್ನು ಮೇಲಿಟ್ಟು ಬಾವಿಯಿಂದ ಹೊರಬಂದ.

ಆಗ ಅವನ ಗಂಡೆದೆಯೂ ಕಂಪಿಸುತ್ತಿತ್ತು. ಹೊನ್ನಮ್ಮನಿಗಂತೂ ಮಾತಾಡಲು ನಾಲಿಗೆಯೇ ಅಲುಗಾಡುತ್ತಿರಲಿಲ್ಲ.

"ಆ ಮಣ್ಣು ಬಹಳ ಹಳೆಯ ಮಣ್ಣು. ಜಾರಿಬಿಟ್ಟಿತು" ಎಂದನವ.

"ಹೌದು, ಯಾವಾಗಲೂ ಈ ಕೆಲಸ ಅಪಾಯಕರ. ಸೀಸೀಗ ಎಲ್ಲಾದರೂ ಕೆಳಗೆ ಬೀಳುತ್ತಿದ್ದರೆ ನನಗೆ ಈಗ ಅಪಕೀರ್ತಿ ಬರುತ್ತಿತ್ತಲ್ಲ!! ಅಂತೂ ಮೇಲೆ ಬಂದುಬಿಟ್ಟೆ. ಒಳ್ಳೆಯದು. ಸ್ವಲ್ಪ ವೀಳ್ಯ ಜಗಿ. ಒಳಗೆ ಬಾ. ಮತ್ತೆ ಅವರು ಬಂದಬಳಿಕ ಊಟವನ್ನು ಮಾಡಬಹುದು."

"ಹಾಯ್ ನನಗೆ ಚಳಿಯಾಗುತ್ತದೆ" ಮಾರಪ್ಪ ಆಕೆಯನ್ನೇ ನೋಡುತ್ತ ಹೇಳಿದ. "ನನ್ನ ವಸ್ತ್ರವೆಲ್ಲ ಒದ್ದೆಯಾಗಿದೆ. ಈ ವಸ್ತ್ರವನ್ನು ಹಿಂಡಿ ಬರುತ್ತೇನೆ. ನೀನು ಒಳಗೆ ಹೋಗು"

ನಿಜವಾಗಿಯೂ ಅವನು ನಡುಗುತ್ತಿದ್ದ. ಸೊಂಟಕ್ಕೆ ಸುತ್ತಿದ್ದ ಅವನ ವಸ್ತ್ರದಿಂದ ನೀರಿಳಿಯುತ್ತಿತ್ತು. ಹೊನ್ನಮ್ಮ ಅವನ ಒದ್ದೆಯಾದ ಶರೀರವನ್ನೊಮ್ಮೆ ನೋಡಿದಳು. ಆದರೆ ಅವಳು ಇನ್ನು ಅಲ್ಲಿ ನಿಲ್ಲಲಾಗದು. ಅವನು ವಸ್ತ್ರವನ್ನು ಬಿಚ್ಚಿ ನೀರನ್ನು ಹಿಂಡಿ ಮತ್ತೆ ಬರುವನು. ಆಗ ಅವನನ್ನು ಉಪಚರಿಸಬಹುದು. ಆದರೆ ಮಾರಪ್ಪನಿಗೆ ಆಗ ಅವಳು ಅಲ್ಲಿ ನಿಲ್ಲುವುದಕ್ಕೇನೂ ಅಡ್ಡಿಯಿರಲಿಲ್ಲ.

ಅವನು ಅಲ್ಲೇ ಒಂದು ಮರದ ಅಡ್ಡ ಸರಿದ. ಹೊನ್ನಮ್ಮ ಅಡುಗೆ ಮನೆಯ ಕಿಟಕಿಯಿಂದ ಅವನು ಬರುವನೇ ಎಂದು ಇಣುಕಿದಳು. ಇಲ್ಲ. ಅವನನ್ನು ವಸ್ತ್ರವನ್ನು ಹಿಂಡುತ್ತಿದ್ದಾನೆ. ಪುಷ್ಟವಾದ ಕೈಗಳೆರಡು ಅದನ್ನು ಅಮುಕಿವೆ. ಹಲ್ಲುಕಚ್ಚಿ ಹಿಂಡುತ್ತಿದ್ದಾನೆ. ಮೈಮೇಲೆ ಬಿಸಿಲಿನ ಛಾಯೆ ಹರಿದಿದೆ. ಏನು ಆಕರ್ಷಣೀಯ ದೇಹವೆಂದು ಅವಳಿಗೊಮ್ಮೆ ತೋರಿತು. ಆದರೆ ಮರುಕ್ಷಣದಲ್ಲಿ ಅವಳ ಮೈ ಜುಮ್ಮೆಂದಿತು. ಅವಳೇನಾದರೂ ಗಂಡಸಿನ ದೇಹವನ್ನು ಕಾಣದವಳಲ್ಲ. ಮದುವೆಯಾಗಿ ಇಪ್ಪತ್ತು ವರ್ಷವಾಗುತ್ತಿದೆ. ಆಕೆಯ ಗಂಡ ತಸಿಯನೇನಾದರೂ ಈ ತನಕ ಇಪ್ಪತ್ತು ವರ್ಷಗಳ ಅವಧಿಯಲ್ಲಿ ತನ್ನ ಶರೀರವನ್ನು ಸದಾ ಬಚ್ಚಿಟ್ಟಿರಲಿಲ್ಲ. ಆದರೆ ಈ ದೇಹದಲ್ಲಿ ಏನೋ ವಿಶಿಷ್ಟ ಸೊಬಗಿತ್ತು. ಚೆಲುವಿತ್ತು. ಮುಖ್ಯವಾಗಿ ಇದು

ಕದ್ದು ನೋಡುವ ದೃಶ್ಯ. ಅದೂ ನಾರಪ್ಪ ಯುವಕ, ಹಸಿ ಹಸಿ, ಬಿಸಿರಕ್ತದ ಯುವಕ. ಅವನ ಪ್ರತಿಯೊಂದು ಅಂಗಾಂಗಕ್ಕೂ ಜೀವವಿರುವಂತೆ ತೋರುತ್ತಿತ್ತು.

ನಾರಪ್ಪ ಮತ್ತೆ ಒದ್ದೆವಸ್ತ್ರವನ್ನೇ ಸೊಂಟಕ್ಕೆ ಸುತ್ತಿಕೊಂಡು ಮನೆಯ ಕಡೆಗೆ ಬಂದ. ಅವನ ತಲೆಕೂದಲುಗಳಿಂದ ಇನ್ನೂ ನೀರು ಹನಿಗಳು ಸುರಿಯುತ್ತಿದ್ದುವು. ಆದರೆ ಅವನ ಚಳಿ ಆಗಲೇ ಮಾಯವಾಗಿತ್ತು.

" ಹಂ. ಇಗೋ ಇಷ್ಟು ವೀಳ್ಯದೆಲೆ ತಿನ್ನು" ಎನ್ನುತ್ತ ಹೊನ್ನಮ್ಮ ವೀಳ್ಯದೆಲೆಯ ಚಿಕ್ಕ ಕುಕ್ಕೆಯನ್ನು ಅವನ ಮುಂದಿಟ್ಟಳು.

" ಒಹ್, ನಿನ್ನ ವೀಳ್ಯದೆಲೆಯ ಉಪಚಾರ !" ನಾರಪ್ಪ ನಗುತ್ತ ನುಡಿದ. "ಆದೀತು. ನೀನು ಅಡಿಗೆ ಮಾಡು. ನಾ ಈಗ ಮನೆಗೆ ಹೋಗುತ್ತೇನೆ."

"ಊಟದ ವೇಳೆ ಬರುವೆಯಲ್ಲ ?" ಆಕೆ ಬೇಕೋ ಬೇಡವೋ ಎಂಬ ಧ್ವನಿಯಲ್ಲಿ ಕೇಳಿದಳು. "ನಿನಗಾಗಿ ಅಕ್ಕಿ ಹಾಕಿದ್ದೇನೆ."

"ಹ್ಞೊ ಮರೆತೆ ! ಮನೆಯಲ್ಲಿ ಇಂದು ಬೆಲ್ಲದ ಕಡುಬು ಮಾಡುತ್ತಾರೆ. ನನ್ನ ಚಿಕ್ಕತಾಯಿ ಗರ್ಭಿಣಿ. ಆಕೆಗೆ ಔತಣ. ಇನ್ನೊಮ್ಮೆ ಯಾವಾಗಲಾದರೂ ಬರುತ್ತೇನೆ."

" ನಿನ್ನಿಚ್ಛೆ ಮಹಾರಾಯಾ. ನಾನು ಹೆಣ್ಣುಹೆಂಗಸು. ನನಗೆ ನಿನ್ನನ್ನು ಇಲ್ಲಿ ಕಟ್ಟಿಹಾಕಲು ಸಾಧ್ಯವಿಲ್ಲ. ಕಡುಬು ಅಲ್ಲದಿದ್ದರೆ ಕಲ್ಲನ್ನು ತಿನ್ನು".

ಆಕೆ ಅಡುಗೆಗೆ ಒಳಗೆ ಹೋಗಲೂ ಇಲ್ಲ. ನಾರಪ್ಪ ಹೊರಗೆ ಹೊರಡಲೂ ಇಲ್ಲ. ಅವನು ಮೆಲ್ಲನೆ ವೀಳ್ಯ ಜಗಿಯತೊಡಗಿದ. ಪ್ರತಿಯೊಂದು ಎಲೆಯನ್ನೂ ಆರಿಸಿ, ಮೈಗೆ ಒರಸಿ, ಸುಣ್ಣ ತಾಗಿಸಿ, ಮಡಚಿ ಬಾಯಿಗೆ ಸೇರಿಸುತ್ತಿದ್ದ.

" ಹೊಗೆಸೊಪ್ಪು ಹೆಚ್ಚು ತಿನ್ನಬೇಡ. ತಲೆ ತಿರುಗೀತು"

ಎಂದಳು ಹೊನ್ನಮ್ಮ.

"ತಲೆ ತಿರುಗಿದರೆ ನೀನಿದ್ದೀಯಲ್ಲ. ನೀನು ಕೊಟ್ಟ ವಿಷಕ್ಕೆ ನಿನ್ನದೇ ಮದ್ದು ಆಗಬೇಕು. ನೀನಂತೂ ಕದಲದೆ ನಾನು ಯಾವಾಗ ಬೀಳುವೆನೆಂಬುದನ್ನು ನೋಡಲಿಕ್ಕಾಗಿಯೇ ಹೂಮುಡಿದು ನಿಂತಿದ್ದೀ. ಹಂ!"

"ನಿನಗೆ ಉಪಚಾರ ಮಾಡುವವರು ಇನ್ನು ಬರಬೇಕಷ್ಟೆ, ಮಾರಪ್ಪ. ಆ ಸೀತುವಿನ ಮಗಳ ವಿಚಾರ ಏನಾಯಿತು? ನೀನು ಅವಳನ್ನು ಮದುವೆಯಾಗುವೆನೆಂದು ಶಪಥ ಹಾಕಿರುವೆಯಂತೆ!"

"ಹೂಂ. ಸೀತುವಿನ ಮಗಳು, ರಾಮುವಿನ ಮಗಳು. ನಿಮಗೆ ಹೆಂಗಸರಿಗೆ ಬೇರೇನೂ ಇಲ್ಲ. ಯಾರಿಗೆ ಎಲ್ಲಿ ಮದುವೆಯಾಗುತ್ತದೆ, ಯಾರು ಯಾರೊಡನೆ ಏನನ್ನು ಮಾತಾಡುತ್ತಿದ್ದಾರೆ, ಇತ್ಯಾದಿ ಸುದ್ದಿ ಸಂಗ್ರಹ ಮಾಡುವುದೇ ನಿಮಗೆ ಕೆಲಸ. ನಿಮ್ಮೆಲ್ಲರ ನಾಲಿಗೆಗಳನ್ನೂ ತುಂಡು ಮಾಡಬೇಕು."

"ಒಹ್! ಬಹಳ ಮುದುಕನಂತೆ ಮಾತಾಡುತ್ತೀಯ!" ಆಕೆ ಕೊಂಕು ಧ್ವನಿಯಲ್ಲಿ ಅಣಕಿಸಿದಳು.

"ಮುದುಕಿಯರೊಡನೆ ಮುದುಕರೇ ಮಾತಾಡಬೇಕಲ್ಲ?" ಎಂದು ಮಾರಪ್ಪ ಆಕೆಯನ್ನು ಓರೆಗಣ್ಣಿನಿಂದ ನೋಡುತ್ತ ಹೇಳಿದ.

ಹೊನ್ನಮ್ಮ ಇದನ್ನು ಕೇಳಿ ಒಳಗೆ ಹೋದಳು. ಅವಳ ಮನಸ್ಸು ಉಕ್ಕೇರಿತ್ತು. ಈ ಮಾರಪ್ಪ ಏನೆಲ್ಲ ಅಸಂಬದ್ಧ ಮಾತಾಡುತ್ತಿದ್ದಾನೆ. ಇವನಿಗೆ ಮದುವೆಯಾದರೆ ತನಗೇನು, ಆಗದಿದ್ದರೆ ಏನು? ಹೌದು, ತಾನು ಅವನೊಡನೆ ಇಷ್ಟು ಮಾತಾಡಬಾರದಿತ್ತು ಎಂದು ಅವಳಿಗೆ ತೋರಿತು.

ಮಾರಪ್ಪ ಮತ್ತೆ ಎದ್ದುನಿಂತ. ಹೊನ್ನಮ್ಮ ಒಳಗೆಯೇ ಇದ್ದಳು.

"ನಾನು ಬರಲೇ ಅಕ್ಕ? ಇನ್ನೊಂದೆರಡು ದಿನಗಳಲ್ಲಿ ಬರುತ್ತೇನೆ. ಚೆನ್ನಾಗಿ ಪಾಯಸ, ಕೋಳಿ ಎಲ್ಲ ತಯಾರಿಸು. ನನ್ನ

ಹುಲ್ಲಿನ ಕಟ್ಟು ಅಲ್ಲೇ ಇದೆ. ಪಾಪ, ಕೋಣಗಳು ಬೆಳಗಿನಿಂದ ಉಪವಾಸ ಬಿದ್ದಿವೆ. ಹೋಗುತ್ತೇನೆ."

"ಹುಂ" ಎನ್ನುತ್ತ ಹೊನ್ನಮ್ಮ ಹೊರಗೆ ಬಂದಳು. "ಪಾಯಸದ ಸಮಾರಂಭಕ್ಕೆ ನೀನೊಬ್ಬನೇ ಇರಕೂಡದು. ಎರಡು ಕಾಲಿಗೆ ನಾಲ್ಕು ಕಾಲಾಗಬೇಕು."

"ಓಹ್ ! ಏಕೆ ಇಷ್ಟು ಅಡ್ಡಿ ಮಾಡುತ್ತೀ ? ಹೀಗೆ ಕಟ್ಟಿಡುವುದು ಯಾರಿಗಾಗಿ ನೀನು ? ನೀನಂತೂ ಬಂಜೆ. ನೀನು ನಾಳೆ ಸತ್ತರೆ ನೀನು ಕೂಡಿಸಿಟ್ಟುದು ಗೆದ್ದಲಿಗೋ ಇಲಿಗೋ ಆಹಾರ....ಕೊಳೆತು ಹೋದರೂ ಕೊಟ್ಟು ಹೋಗಬಾರದು ಅಲ್ಲವೆ ?"

"ಸಾಕು ಸಾಕು–ನಿನ್ನ ಪುರಾಣ ಮುಚ್ಚು. ನನ್ನ ಕಣ್ಣೆದುರಲ್ಲಿ ಬೆಳೆದ ಹುಡುಗ ಎಷ್ಟು ಕಾನೂನು ಮಾತಾಡುತ್ತಾನೆ !" ಎಂದು ಆಕೆ ಗಡುಸಾಗಿ ನುಡಿದಳು. ಮಾರಪ್ಪ ಈಗ ಮಾತಾಡಿದುದು ಅವಳ ಅಭಿಮಾನವನ್ನು ಚುಚ್ಚಿತ್ತು. ಅವನು ತನ್ನನ್ನು ಇಷ್ಟು ಹೀಸೈಸುವ ನೆಂದು ಅವಳು ತಿಳಿದಿರಲಿಲ್ಲ.

"ಸೋಮವಾರ ಬರುತ್ತೇನೆ, ಖಂಡಿತ. ಒಳ್ಳೆಯ ಊಟ ಕೊಡು. ಇಲ್ಲವಾದರೆ ತನಿಯಣ್ಣನೊಡನೆ ದೂರು ಕೊಡುತ್ತೇನೆ."

"ಸಾಕು ಸಾಕು, ನಡಿ. ನಾನು ಮುದುಕಿಯಾಗಿದ್ದರೂ ನಿನಗೆ ನನ್ನ ಹೆದರಿಕೆ ಅಷ್ಟು ಇವೆಯಲ್ಲ ? ಇನ್ನಿಲ್ಲಿ ನಿಲ್ಲಬೇಡ."

ಮಾರಪ್ಪ ಮೆಲ್ಲನೆ ಮೆಟ್ಟಲಿಂದ ನಸುನಗುತ್ತ ಕೆಳಗಿಳಿದ. ಹೊನ್ನಮ್ಮ ಅವನು ಬೆನ್ನಮೇಲೆ ಇಳಿಬಿಟ್ಟ ಕೂದಲ ರಾಶಿಯನ್ನೇ ನೋಡುತ್ತಿದ್ದಳು. ಇವನು ಹೆಂಗಸಾಗಿದ್ದಿದ್ದರೆ ಇಷ್ಟು ಉದ್ದವಾದ ಕೂದಲಿನೊಡನೆ ಇನ್ನೂ ಚೆಲುವಾಗಿ ಕಾಣುತ್ತಿದ್ದ ಎಂದು ಅವಳಿಗನಿಸಿತು. ಬೆನ್ನಿನಲ್ಲಿ ಮಾಂಸಖಂಡಗಳು ಉಬ್ಬಿ ನಲಿಯುತ್ತಿವೆ. ದೇಹ ಸ್ವಲ್ಪ ಕಪ್ಪು ಬಣ್ಣದ್ದಿದ್ದರೂ, ಅಚ್ಚುಕಟ್ಟಾಗಿದೆ. ಕೈಕಾಲುಗಳಲ್ಲಿ ಚೇತನ ಉಕ್ಕಿ ಹರಿಯುತ್ತಿದೆ. ಅವನ ನಡಿಗೆಯಲ್ಲೇ ಒಂದು ರೀತಿಯ

ಬಿರುಸಿತ್ತು, ಲಕ್ಷಣವಿತ್ತು. ಅವನ ನಸುಗೆಂಪು ತುಟಿಗಳ ಮೇಲಿದ್ದ ಕಿರುಮೀಸೆಯನ್ನು ಅವಳಿಗೆ ನೆನೆಯದಿರಲು ಸಾಧ್ಯವಿಲ್ಲ.

ಹೌದು, ಸಮಯ ಸಾಗುತ್ತಿದೆ, ಎಲ್ಲೆಡೆಯಲ್ಲೂ ಬದಲಾವಣೆ ಯಾಗುತ್ತಿದೆ, ಎಂದಾಕೆ ನೆನೆದಳು. ಇಲ್ಲವಾದರೆ ಮಾರಪ್ಪ ನಿನ್ನೆ ಲಂಗೋಟಿ ಹುಡುಗನಾಗಿದ್ದವ. ಅವಳು ಮದುವೆಯಾಗಿ ಆ ಊರಿಗೆ ಬರುವಾಗ ಅವನು ತೊಟ್ಟಿಲ ಶಿಶು. ಎಷ್ಟು ಬೇಗ ಬೆಳೆದುಬಿಟ್ಟ. ಎಷ್ಟು ಮಾರ್ಪಾಟುಗಳನ್ನು ಹೊಂದಿದ! ಎಲ್ಲವೂ ಹೀಗೆಯೇ. ಗದ್ದೆ ಗಳಲ್ಲಿ ಬಿತ್ತಿದ್ದ ಬೆಳೆಗಳು ಫಸಲು ಬಿಡುತ್ತವೆ, ನಾಶವಾಗುತ್ತವೆ, ಪುನಃ ಫಸಲು ಬಿಡುತ್ತವೆ, ಪುನಃ ನಾಶವಾಗುತ್ತವೆ. ಬಹುಶಃ ತಾನೂ ಹಾಗೆಯೇ ಈ ಪ್ರಕೃತಿ ನಿಯಮದ ವಿಷಮ ಚಕ್ರದಲ್ಲಿ ಸಿಲುಕಿ ದವಳು, ತಾನೂ ಹಾಗೆಯೇ ಸಮಯದ ಸಾಗಾಟದೊಡನೆ ಬೆರೆತು ಆಗಾಗ ಮಾರ್ಪಾಟುಗಳನ್ನು ಹೊಂದುತ್ತೇನೆ ಎಂದಾಕೆ ಊಹಿಸಿದಳು.

ಹೊಲೆಯರ ಹುಡುಗ ಜಾನುವಾರುಗಳನ್ನು ಹಟ್ಟಿಗೆ ತಂದ. ಹೊನ್ನಮ್ಮ ಅಲ್ಲಿಗೆ ಹೋಗಿ ಬೆಳ್ಳಿ ದನದ ಹಾಲು ಕರೆದಳು. ಅವಳು ಒಳಗೆ ಬರುತ್ತಿದ್ದಾಗಲೇ ತನಿಯನೂ ಒಳಬಂದು ಕೈಯಲ್ಲಿದ್ದ ಚಮ್ಮಟಿಕೆ ಯನ್ನು ಗೋಡೆಯ ಸಂದಿನಲ್ಲಿಟ್ಟ.

ಹೊನ್ನಮ್ಮ ಬೇಗನೆ ಅಡುಗೆ ಕೋಣೆಗೆ ಹೋಗಿ ಅನ್ನ ಬೆಂದಿತೋ ಇಲ್ಲವೋ ಎಂದು ನೋಡಿದಳು. ತನಿಯ ಮಾತನಾಡದೆ ಬಾವಿಯ ಬಳಿಗೆ ಹೋದ. ಕತ್ತಲಲ್ಲೇ ಅವನು ಹೇಗೋ ಬಾವಿ ಯಿಂದ ನೀರು ತೆಗೆದು ಸ್ನಾನಮಾಡಿದ. ಅವನಿಗೆ ತುಂಬಾ ಹಸಿವಾ ಗಿತ್ತು. ಆದ್ದರಿಂದ ಮೈಯನ್ನು ಸರಿಯಾಗಿ ತಿಕ್ಕಿ ಕೊಳೆಯನ್ನು ತೊಳೆಯಲಿಲ್ಲ. ಕೆಲಸ ಮಾಡಿ ಬಂದ ದಣಿವಿನ ಪರಿಹಾರಕ್ಕೆ ಬರೇ ತಣ್ಣೀರು ಮಾತ್ರ ಸಾಕಾಗಿತ್ತು.

"ಏನೇ ಅಡಿಗೆ ಆಗಿದೆಯೇ ?" ಎಂದನವ ಒಳಗೆ ಬಂದು.

"ಆಗುತ್ತಿದೆ "ಎಂದು ಹೊನ್ನಮ್ಮ ಉತ್ತರಿಸಿದಳು.

"ಹೂಂ. ಇನ್ನೂ ಆಗುತ್ತಿದೆ, ಆಗುತ್ತಿದೆ."

"ನೀವು ಇಷ್ಟು ಬೇಗ ಬರುತ್ತೀರೆಂದು ನನಗೆ ಹೇಗೆ ಗೊತ್ತು ?"

"ನಿನಗೆ ಗೊತ್ತಾಗಲಿಕ್ಕಿಲ್ಲ. ಮನೆಯೊಳಗೆ ಕುಳಿತುಕೊಂಡರೆ ಏನೂ ಗೊತ್ತಾಗುವುದಿಲ್ಲ."

"ಹೌದು, ನೀವೊಬ್ಬರೇ ಕೆಲಸ ಮಾಡುವವರು. ಉಳಿದವರೆಲ್ಲ ದಡ್ಡರು !"

"ಮಾತು ಸಾಕು. ಹಸಿವೆಯಾಗುತ್ತಿದೆ. ನಿನ್ನ ನಾಲಿಗೆಯ ತುದಿಯನ್ನೊಂದಿಷ್ಟು ಕೊಯ್ದರೆ ಒಳ್ಳೆಯದು. ಏನು ಶೂರ್ಪನಖಿ ! ಮಾತು ಮಾತಿಗೂ ಉರಿದುಬೀಳುತ್ತೀ. ನಮ್ಮ ಅವಸ್ಥೆ ನಿನಗೆ ಹೇಗೆ ಗೊತ್ತಾಗಬೇಕು !! ದುಡಿದು ತರುವವರಿದ್ದರೆ ನಾನೂ ಇಲ್ಲಿ ಬಾಯಿ ತೆರೆದು ಬಿದ್ದುಕೊಂಡೇನು."

ಅರ್ಧಗಂಟೆಯಲ್ಲಿ ತನಿಯ ಬಟ್ಟಲ ಮುಂದೆ ಕುಳಿತ. ಹೊನ್ನಮ್ಮ ಸದ್ದಿಲ್ಲದೆ ಗಂಜಿಯನ್ನು ಬಡಿಸಿದಳು. ಬದಿಯಲ್ಲಿ ಎರಡು ಮೆಣಸು ಮತ್ತೆ ಉಪ್ಪನ್ನು ಇಟ್ಟಳು.

"ಪಲ್ಯ ಏನೂ ಇಲ್ಲವೆ ?"

"ಉಹೂಂ."

ತನಿಯ ಮತ್ತೆ ಮಾತನಾಡಲಿಲ್ಲ. ಬೆಂಕಿಯಲ್ಲಿ ಹುರಿದ ಮೆಣಸನ್ನೆ ಉಪ್ಪಿನೊಡನೆ ಸೇರಿಸಿ ಗಂಜಿಗೆ ಬೆರೆಸಿದ. ಅವನ ಹಸಿದ ನಾಲಿಗೆಗೆ ಆ ಬಿಸಿ ಗಂಜಿಯ ವಾಸನೆಯೇ ಸಾಕಾಗಿತ್ತು. ಎರಡು ಬಟ್ಟಲು ಉಂಡಾದ ಬಳಿಕ ಅವನಿಗೆ ದೊಡ್ಡ ತೇಗು ಬಂತು.

ಮತ್ತೆ ಎದ್ದು ಅವನು ಕೈ ತೊಳೆದು ವೀಳ್ಯ ಜಗಿಯಲು ಪ್ರಾರಂಭಿಸಿದ. ಹೊನ್ನಮ್ಮ ಆಗ ಊಟಕ್ಕೆ ಕುಳಿತುಕೊಂಡಳು. ಅವನ ಹಸಿವಿನೊಡನೆ ಕೋಪವೂ ಮಾಯವಾಗಿತ್ತು.

"ಏನೋ ದನ ಅಕ್ಕಚ್ಚು ಕುಡಿದ ಹಾಗೆ ನೀನು ಗಂಜಿ ಕುಡಿಯುತ್ತಿದ್ದೀಯಲ್ಲ ?" ಎಂದನವ ನಗುತ್ತ.

" ನಿಮಗೆ ಇನ್ನು ಏನೂ ತಿನ್ನದ ಜನಬೇಕು."

" ಹೌದು ನನಗೆ ಒಂದು ಜನಬೇಕು. ಖಂಡಿತವಾಗಿಯೂ ಬೇಕು."

" ಅದೇ ನಾನು ಹೇಳಿದೆನಲ್ಲ !"

" ಎಲ್ಲಿಂದಾದರೂ ಈ ಬೇಸಿಗೆ ಮುಗಿಯುವ ಒಳಗೆ ತರುತ್ತೇನೆ."

" ತನ್ನಿ. ಒಂದಲ್ಲದಿದ್ದರೆ ನೂರು ಜನರನ್ನು ತನ್ನಿ."

" ಏನು ನಿನಗೆ ನನ್ನೊಬ್ಬನೊಡನೆಯೇ ಜಗಳ ಮಾಡುವುದು ಸಾಕಾಗುವುದಿಲ್ಲವೆ ?"

" ಅದೇ ಊಟ ಮಾಡದ, ಜಗಳ ಮಾಡದ ಜನರನ್ನೇ ತನ್ನಿ."

" ಮತ್ತೆ ನೀನೇನಾದರೂ ಕೋಪದಲ್ಲಿ ಬಾವಿಗೆ ಹಾರಿದರೆ ?"

" ಏಕೆ ನನಗೆ ಮಚ್ಚೇ, ಪ್ಥ !"

ಹೊನ್ನಮ್ಮನೂ ಊಟ ಮಾಡಿ ಮುಗಿಸಿ ಪಾತ್ರೆಗಳನ್ನೆಲ್ಲ ತೊಳೆದು ಜಗಲಿಯ ಬಾಗಿಲಿನ ಬಳಿ ಬಂದು ನಿಂತುಕೊಂಡಳು. ತನಿಯ ಅವಳ ಕೈಯನ್ನು ಹಿಡಿದು ಜಗ್ಗಿ ಕುಳಿತುಕೊಳ್ಳ ಹೇಳಿದ.

" ನಿನ್ನ ತಲೆಯಲ್ಲಿ ಹೂ ಬಿಡುತ್ತದೆ ವಿನಃ ಕಾಯಿ ಯಾಗುವುದಿಲ್ಲವಲ್ಲ !"

" ನಾನೇನು ಮರವೆಂದೆಣಿಸಿರುವಿರಾ ?"

" ನಾವೆಲ್ಲ ಮರದಿಂದ ಉಂಟಾದವರೇ ?"

" ಸಾಕು ಬಿಡಿ. ನಿಮ್ಮ ಹಾಸ್ಯ ಯಾವಾಗಲೂ ಇದೆಯಲ್ಲ !"

" ಹಾಸ್ಯವೇನು ? ಆ ತೋಟಿ ನನಗಿಂತ ಹತ್ತು ವರ್ಷ ಸಣ್ಣವ. ಮೊನ್ನೆ ಮದುವೆಯಾದವ. ಇಂದು ಎರಡು ಮಕ್ಕಳ ತಂದೆ. ನಿನಗೊಂದೂ ಮಗುವಿಲ್ಲವೆಂದರೆ ?"

" ತಿರುಪತಿಗೆ ಒಂದು ಹರಕೆ ಹೇಳಿ. ನನ್ನ ತಾಯಿಯೂ ಹಾಗೆಯೇ ನನ್ನನ್ನು ಹೆತ್ತುದಂತೆ."

" ಹೂಂ. ಹರಕೆ. ನೀನು ಬಂಜೆಯಾದ್ದಕ್ಕೆ ಏನು

ಮಾಗುವುದು ? ದೇವರೇನಾದರೂ ಬಂದು ನಿನ್ನ ಹೊಟ್ಟೆಯಲ್ಲಿ ಮಗುವನ್ನು ನಿರ್ಮಿಸುವನೆ ?" ಹೊನ್ನಮ್ಮ ಅಲ್ಲಿಂದ ಎದ್ದು ಒಳಗೆ ಹೋದಳು.

" ಏ ಎಲ್ಲಿ ಓಡುತ್ತೀಯಾ ?" ಎಂದು ತನಿಯ ಕೇಳಿದ. ಆಕೆ ಮಾತಾಡಲಿಲ್ಲ.

" ಅದಕ್ಕೆ ನಾ ಹೇಳುವುದೂ, ಇನ್ನೊಂದು ಜನವನ್ನು ತರಬೇಕೆಂದು. ನೀ ಮುದುಕಿ. ನನಗೇಕೆ? ನೋಡು ನನ್ನ ತಲೆ ನರೆತಿಲ್ಲ, ಹಲ್ಲು ಹೋಗಿಲ್ಲ. ಯಾರೂ ಹೆಣ್ಣು ಕೊಟ್ಟಾರು ನನಗೆ"

" ಅದಕ್ಕೆ ನನ್ನ ಅಪ್ಪಣೆ ಬೇಕೆ? ಸಾಧ್ಯವಿದ್ದಷ್ಟು ಹಿಂದೆ ಹಾರಾಡಿದ್ದೀರಿ. ಈಗ ಸೋತಿದ್ದೀರಿ. ಅಷ್ಟೆ ಇನ್ನು ಬೇಕಾದರೆ ಪುನಃ ಆರಂಭಿಸಿ. ನಿಮ್ಮ ಇಚ್ಛೆಯನ್ನು ಎದುರಿಸಲು ನಾನೇನಾದರೂ ದೇವರೇ ? ನೀವು ಮಾತ್ರ ದಿನ ಹೋದಂತೆ ಯೌವ್ವನವನ್ನು ಹೊಂದುವವರು. ಇತರರು ಮುದುಕರಾಗುವವರು."

ತನಿಯ ಎದ್ದು ಒಳಗೆ ಹೋಗಿ ಮಲಗಿಕೊಂಡ. ಕೆಲಸದ ದಣಿವಿನಿಂದಾಗಿ ಅವನಿಗೆ ಕೂಡಲೇ ನಿದ್ದೆ ಹತ್ತಿತು.

## ೨

ತನಿಯನ ಧನಿ ನಾರಾಯಣ ತಂತ್ರಿಗಳು. ಅವನಿಗೆ ನಾಲ್ಕು ಮುಡಿ ಗದ್ದೆಯನ್ನೇ ಸಾಗುವಳಿಗೆ ಅವರು ಬಿಟ್ಟು ಕೊಟ್ಟಿದ್ದರು. ತನಿಯನಿಗೆ ಅದರ ಕೆಲಸ ವರ್ಷದಲ್ಲಿ ಹೆಚ್ಚೆಂದರೆ ನಾಲ್ಕು ತಿಂಗಳು ಮಾತ್ರ. ಉಳಿದ ಎಂಟು ತಿಂಗಳುಗಳಲ್ಲಿ ಬೇರೆ ಏನಾದರೂ ಕೆಲಸವನ್ನು ಅವನು ಮಾಡಬೇಕಾಗುತ್ತಿತ್ತು.

ಆದರೆ ಅವನಿಗೆ ಅನೇಕ ಕೆಲಸಗಳನ್ನು ಮಾಡಲು ಬರುತ್ತಿತ್ತು. ಮಣ್ಣಿನ ಇಲ್ಲವೇ ಕಲ್ಲಿನ ಗೋಡೆಯನ್ನು ಕಟ್ಟುವುದು. ಮರ ಸಿಗಿಯುವುದು, ಮರ ಕಡಿಯುವುದು, ಕಲ್ಲು ಒಡೆಯುವುದು ಇತ್ಯಾದಿ ಹಲವಾರು ಕಸಬುಗಳಲ್ಲಿ ಅವನು ನಿಪುಣ. ಈ ಕೆಲಸಗಳನ್ನೆಲ್ಲ ಅವನು ಬೇಕೆಂದೇ ಶ್ರದ್ಧೆಯಿಂದ ಕಲಿತಿದ್ದನೆಂದು ಹೇಳಲಾಗದು. ಇವೆಲ್ಲ ಕೆಲಸವಿಲ್ಲದೆ ತಿರುಗಾಡುವಾಗ ಹೊಟ್ಟೆ ತುಂಬಿಸಲಿಕ್ಕಾಗಿ ಕಲಿತವುಗಳು. ಆದರೆ ರಸ್ತೆ ಅಲ್ಲೇ ಸಮೀಪವಿದ್ದುದರಿಂದ ಅವನಿಗೆ ಜಲ್ಲಿ ಕಲ್ಲು ಒಡೆಯುವ ಕೆಲಸ ಸದಾ ಕಾದಿಟ್ಟದ್ದೇ ಆಗಿತ್ತು. ಅದರ ಉತ್ಪತ್ತಿಯೇನಾದರೂ ಹೇಳಿಕೊಳ್ಳುವಷ್ಟಿಲ್ಲ. ಬೆಳಗ್ಗೆ ಎಂಟು ಗಂಟೆಯಿಂದ ಸಂಜೆ ಆರುಗಂಟೆಯ ತನಕ ಕಲ್ಲುಗಳನ್ನು ತುಂಡು ಮಾಡಿದರೆ ಏನಾದರೂ ಹತ್ತಾಣೆ ಮಜೂರಿ ಸಿಗುತ್ತಿತ್ತು. ಬೆಳಗ್ಗೆ ಮನೆಯಲ್ಲೇ ತಂಗಳನ್ನದ ಊಟ. ಮಧ್ಯಾಹ್ನಕ್ಕೆ ಮೊನ್ನಮ್ಮ ಕಟ್ಟಿ

ಕೊಟ್ಟ ಬುತ್ತಿ. ರಾತ್ರಿ ಪುನಃ ಮನೆಯಲ್ಲೇ ಊಟ. ಮಧ್ಯೆ ಬಾಯಾರಿಕೆಗೆ ಕುಡಿಯಲು ನೀರು ಅಲ್ಲೇ ಇತ್ತು. ಎಸಕ್ಕ ಸಾಲ್ಕೈದು ಬಾರಿ ಎಲೆಯಡಿಕೆ, ಮತ್ತೆ ಯಾರಾದರೂ ಕೊಟ್ಟರೆ ಒಂದಿಷ್ಟು ನಸ್ಯ ಇಲ್ಲವೇ ಒಂದೆರಡು ಬೀಡಿ ಇವು ಅವನ ಉತ್ತೇಜನಕಾರಿಗಳು. ಹಿಂದಿನ ದಿನಗಳಲ್ಲಿ ಮನೆಗೆ ಬರುವಾಗ ದಾರಿಯಲ್ಲಿ ದುಗ್ಗ ಪೂಜಾರಿಯ ಹೆಂಡದ ಅಂಗಡಿಯಲ್ಲಿ ಕೈಯ್ಯಲ್ಲಿ ಹಣವಿದ್ದರೆ, ಒಂದಿಷ್ಟು ಹೆಂಡ ಕುಡಿದು ಬಿಡುವ. ಕೆಲವೊಮ್ಮೆ ಅದನ್ನು ಬುತ್ತಿಯ ಪಾತ್ರೆಯಲ್ಲಿ ಹಾಕಿ ಹೊನ್ನಮ್ಮನಿಗೂ ಅವನು ತಂದು ಕೊಡುವುದಿತ್ತು. ಆದರೆ ಈಗ ಅದು ಸಿಗದು.

ತನಿಯ ಇಷ್ಟೆಲ್ಲ ಉತ್ಪತ್ತಿ ಮಾಡಿದರೂ ಅವನು ವಿಶೇಷ ಹಣ ಗಳಿಸಿದ್ದನೆಂದು ಹೇಳಲಾಗದು. ಕೆಲವೊಮ್ಮೆ ಅವನ ಕೈಗೆ ಹತ್ತಿಪ್ಪತ್ತು ರೂಪಾಯಿಗಳೂ ಬರುವುದಿತ್ತು. ಆದರೆ ಹೆಚ್ಚಿನ ಸಮಯದಲ್ಲಿ ಕೈ ಬರಿದು. ರಸ್ತೆಯ ಕೆಲಸದ ಹಣಕ್ಕೂ ಕಲವು ವೇಳೆ ಮೇಸ್ತ್ರಿಗಳ ವಂಚನೆಯಿಂದಾಗಿ ಧಕ್ಕೆ ಬರುವುದಿತ್ತು. ಮತ್ತೆ ಅವನಲ್ಲಿದ್ದ ಒಂದೇ ಒಂದು ದುರ್ವ್ಯಸನವೆಂದರೆ ಜುಗಾರಿ ಆಡುವುದು ಮಾತ್ರ. ಅದೂ ಹಣ ಕೈಯ್ಯಲ್ಲಿದ್ದಾಗ. ಆ ಆಟದಲ್ಲಿ ಅವನಿಗೆ ಈತನಕ ನಾಲ್ಕು ಕಾಸು ಹೋದುದಲ್ಲದೆ, ಸಿಕ್ಕಿದುದಿಲ್ಲ.

ಆದರೆ ಅವನು ಯಾರನ್ನೂ ವಂಚಿಸಲಾರ. ಯಾರಿಗೂ ಬಯ್ಯಲಾರ. ಕೆಲವೊಮ್ಮೆ ಸ್ವಲ್ಪ ಹೆಂಡದ ಅಮಲೇರಿ ಬೇರೆಯವರೊಡನೆ ಜಗಳಾಡಿ ಅವರಿಂದಲೇ ಸಾಲ್ಕೇಟು ತಿಂದಿದ್ದನಲ್ಲದೆ, ಅವರಿಗೆ ಅವನಾಗಿ ಹೊಡೆದಿರಲಿಲ್ಲ. ಮತ್ತೆ ಇತರ ಸಮಯದಲ್ಲಿ ಎಲ್ಲಾದರೂ ಜಗಳವಾಗುವುದನ್ನು ಕಂಡರೆ ಅವನು ಅಲ್ಲಿಂದ ಪರಾರಿಯಾಗುವನು. ಆ ಗ್ರಾಮದಲ್ಲಿ ಎಷ್ಟೇ ಖೂನಿ ಕಳವುಗಳು ನಡೆಯುತ್ತಿದ್ದರೂ, ಅವನು ಈತನಕ ಪೋಲೀಸರ ಕೈಗೆ ಸಿಕ್ಕುದುದಿಲ್ಲ. ಅದೂ ತಂತ್ರಿ ಯವರ ಒಕ್ಕಲೆಂದರೆ ಬಂಗಾರದಂಥ ಗುಣ ಉಳ್ಳವರೆಂದು ಊರಲ್ಲೆಲ್ಲ

ಪ್ರತೀತಿ.

ಮಾತ್ರ ಇತ್ತೀಚೆಗೆ ಅವನಿಗೊಂದು ವ್ಯಥೆಯು ವ್ಯಾಪಿಸುತ್ತಿತ್ತು ಅದು ಮಕ್ಕಳಿಲ್ಲದ ವ್ಯಥೆ. ಅವನಿಗೆ ಮಕ್ಕಳು ಬೇಕೆಂಬ ಸ್ಪಷ್ಟವಾದ ಬಯಕೆಯಿಲ್ಲ. ಆದರೆ ತಾನು ಮುದುಕನಾಗುತ್ತಿದ್ದೇನೆ, ಹೆಂಡತಿ ಮುದುಕಿಯಾಗುತ್ತಿದ್ದಾಳೆ, ತಮ್ಮ ಅಂತ್ಯದ ದಿನಗಳಲ್ಲಿ ತಮ್ಮನ್ನು ನೋಡಿ ಕೊಳ್ಳುವವರಿಲ್ಲ ಇತ್ಯಾದಿ ಯೋಚನೆಗಳು ಈಗಾಗಲೇ ಅವನ ತಲೆಯಲ್ಲಿ ಸುಳಿಯ ತೊಡಗಿದ್ದುವು. ಕೈಯ್ಯಲ್ಲಿ ಕಬ್ಬಿಣದ ಚಮ್ಮಟಿಕೆ ಹಿಡಿದು ಹಿಡಿದು ಈಗೀಗ ಏನೂ ಬಲವಿರಲಿಲ್ಲ. ಬೆರಳುಗಳು ನಡುಗ ತೊಡಗಿದ್ದುವು. ಕಣ್ಣುಗಳ ದೃಷ್ಟಿ ಮಂದವಾಗುತ್ತಿತ್ತು. ಅಂಗೈಯ್ಯಲ್ಲೆಲ್ಲ ಕಲ್ಲುಗಳಿಂದಾದ ಗಾಯಗಳು ಉರಿಯುತ್ತಿದ್ದುವು. ಮತ್ತೆ ದೇಹವನ್ನು ಎಷ್ಟು ಬಾರಿ ತೊಳೆದುಕೊಂಡರೂ ಚರ್ಮದಿಂದ ಧೂಳು ಬಿಡುವಂತಿಲ್ಲ. ಈ ಕುಂದುತ್ತಿರುವ ಶಕ್ತಿಯನ್ನು ಗಮನಿಸುವಾಗ ತಾನು ಒಂದಲ್ಲ ಒಂದು ದಿನ ಚಾಪೆ ಹಿಡಿಯಲಿರುವನೆಂಬ ಹೆದರಿಕೆ ತನಿಯನಿಗೆ ಬಲಗೊಳ್ಳುತ್ತಿತ್ತು. ತಾನು ಚಾಪೆ ಹಿಡಿದರೆ, ಹೆಂಡತಿಯಿಂದ ಸಾಕಷ್ಟು ದುಡಿಯಲಾಗದು. ಅವಳಿಗೆ ಸಾಗುವಳಿ ಕೆಲಸವನ್ನು ಬಿಟ್ಟು ಬೇರೇನನ್ನೂ ಮಾಡ ತಿಳಿಯದು. ಆಗ ತಾವಿಬ್ಬರು ಹೇಗೆ ಬದುಕಬೇಕು ?

ಈ ಪ್ರಶ್ನೆಯನ್ನು ಮನಸಿನಲ್ಲಿಟ್ಟುಕೊಂಡೇ ತನಿಯ ತಂತ್ರಿಯವರ ಮನೆಯಲ್ಲಾದ ಹರಿಕಥೆಗೆ ಹೋದ. ಹೊನ್ನಮ್ಮನೂ ಅವನೊಡನೆ ಹೋಗಿದ್ದಳು. ಅವರಿಬ್ಬರಿಗೂ ಕನ್ನಡ ಭಾಷೆ ತಿಳಿಯದು. ಅಕ್ಷರ ಬಾರದು. ಆದರೆ ಹರಿಕಥೆ ಕನ್ನಡದಲ್ಲೇ ನಡೆಯಲಿತ್ತು.

ತಂತ್ರಿಯವರಲ್ಲಿ ತನಿಯನಿಗೆ ಸುಮ್ಮನೆ ಕುಳಿತುಕೊಳ್ಳಲು ಸಾಧ್ಯವಿರಲಿಲ್ಲ. ಅವನು ಬಂದ ಜನರಿಗೆ ಅವರವರ ಸ್ಥಾನಮಾನಕ್ಕನು ಸರಿಸಿ ಎಳನೀರನ್ನೋ, ಪಾನಕವನ್ನೋ ಕೊಡಬೇಕಾಗಿತ್ತು. ತನಿಯ ನಂತೆ ತಂತ್ರಿಯವರ ಇತರ ಒಕ್ಕಲುಗಳೂ ಅಲ್ಲಿ ಒಂದಲ್ಲ ಒಂದು

ಕೆಲಸದಲ್ಲಿ ನಿರತರಾಗಿದ್ದರು.

ರಾತ್ರಿ ಒಂಭತ್ತು ಗಂಟೆಗೆ ಒಕ್ಕಲುಗಳಿಗೂ ಊಟವಿತ್ತು. ತನಿಯನೂ ಹೊನ್ನಮ್ಮನೂ ಉಂಡರು. ತಂತ್ರಿಯವರೇ ಸ್ವತಃ ಊಟವ ಮೇಲ್ವಿಚಾರಣೆ ನಡೆಸುತ್ತಿದ್ದರು. ಆ ಕಡುಬು, ಆ ಲಡ್ಡು, ಆ ಪಾಯಸಗಳ ರುಚಿಯನ್ನು ಒಕ್ಕಲುಗಳು ತಂತ್ರಿಯವರಲ್ಲೇ ವರುಷಕ್ಕೊಂದೆರಡು ಸಲ ಸವಿಯಬೇಕಾಗಿತ್ತು. ಮತ್ತೆ ಅವರಿಗೇನಾದರೂ ಲಡ್ಡನ್ನು ಹೇಗೆ ತಯಾರಿಸುವುದು, ಅದಕ್ಕೆ ಏನೇನು ಸಾಮಾನು ಸೇರಿಸಬೇಕು, ಪಾಯಸದ ಪಾಕವನ್ನು ಹೇಗೆ ಮಾಡುವುದು ಇತ್ಯಾದಿ ಒಂದೂ ತಿಳಿಯದು. ಎಲ್ಲ ಬಿಟ್ಟು ಅವರು ತಮ್ಮ ಮನೆಯಲ್ಲಿ ಗಂಜಿ ಬೇಯಿಸುವಾಗ ಕೂಡಾ ಒಮ್ಮೊಮ್ಮೆ ಹದ ತಪ್ಪುವುದಿತ್ತು.

ಒಕ್ಕಲಿನವರ ಊಟ ಮುಗಿಯುತ್ತಿದ್ದಾಗಲೇ ಹರಿಕಥೆಯ ಸನ್ನಾಹಗಳೆಲ್ಲ ಮುಗಿದಿದ್ದುವು. ತಂತ್ರಿಯವರ ಮನೆಯ ಚಾವಡಿಯಲ್ಲೇ ಹರಿಕಥೆ ನಡೆಯಲಿತ್ತು. ಎರಡು ದೊಡ್ಡ ಕಂಚಿನ ಹಣತೆಗಳನ್ನು ಅಲ್ಲಿ ಉರಿಸಿಟ್ಟು, ಗಣಪತಿಯ ಚಿತ್ರವೊಂದನ್ನು ಅಲ್ಲಿ ಇಟ್ಟಿದ್ದರು. ತಬಲಾ ಬಾರಿಸುವವರು, ಹಾರ್ಮೋನಿಯಂ ನುಡಿಸುವವರು ಎಲ್ಲ ಆಗಲೇ ತಮ್ಮ ತಮ್ಮ ಸಾಧನಗಳನ್ನು ಸರಿಮಾಡುತ್ತಿದ್ದರು. ಹರಿದಾಸರು ಪಂಚಕಚ್ಚೆಯನ್ನು ತೊಟ್ಟು, ಉದ್ದವಾದ ರೇಷ್ಮೆಯ ನಿಲುವಂಗಿಯನ್ನು ತೊಟ್ಟು ಜರತಾರಿ ಮುಂಡಾಸನ್ನು ತಲೆಗೆ ಬಿಗಿದು, ಕೈಯಲ್ಲಿ ತಾಳಗಳನ್ನು ಹಿಡಿದುಕೊಂಡು ಕಥನಕ್ಕೆ ಅಣಿಯಾಗುತ್ತಿದ್ದರು. ಅವರ ಹಣೆಯಲ್ಲಿ ಗೋಪೀಚಂದನದ ಗೆರೆಗಳು ಬಣ್ಣ ಸ್ಪಷ್ಟವಾಗಿ ಮೂಡಿತ್ತು.

ಹಾರ್ಮೋನಿಯಂ ಸ್ವಲ್ಪ ಕಷ್ಟ ಕೂಡಲಿತ್ತು. ಹರಿದಾಸರೊಡನೆಯೇ ಒಬ್ಬ ಹಾರ್ಮೋನಿಯಂ ವಾದ್ಯಗಾರನಿದ್ದನಂತೆ: ಆದರೆ ಅವನು ಎಲ್ಲೋ ಓಡಿಹೋಗಿದ್ದುದರಿಂದ, ಅಲ್ಲೇ ಹಳ್ಳಿಯ ಈಶ್ವರ ಸೇರೆಗಾರನ ಮಗ ನಾರ್ಣಪ್ಪನನ್ನು ಕರೆಸಿದ್ದರು. ನಾರ್ಣಪ್ಪ ವಾದ್ಯ

ಬಾಲ್ಯದಲ್ಲಿ ತಂಜಾವೂರಿನಲ್ಲಿ ಕಲಿತವ. ವಿಖ್ಯಾತ ನಾದಸ್ವರ ವಿದ್ವಾನ್ ಕಲಾನಿಧಿ ವೇಲಾಯುಧಪಿಳ್ಳೆಯೇ ಅವನ ಗುರು. ಆದರೆ ಈ ಹರಿದಾಸರು ತನ್ನಷ್ಟು ಯಾರಿಗೂ ತಿಳಿಯದೆಂದು ಹೇಳಿಕೊಳ್ಳುವವರು. ಸಾಮಾನ್ಯರೇನು, ಚೌಡಯ್ಯ, ಮಣಿ ಮುಂತಾದವರು ಕೂಡಾ ಅವರ ಹಾಡಿಗೆ ಜತೆಯಾಗಿ ಮೇಳವನ್ನೊದಗಿಸಲು ಅಸಮರ್ಥರಾಗಿದ್ದರೆಂದು ಜಂಭ ಕೊಚ್ಚುತ್ತಿದ್ದರು. ನಾರ್ಣಪ್ಪ ಮೊದಲು ತಂತ್ರಿಯವರ ಮಾತಿಗೆ ಒಪ್ಪಿದನಾದರೂ ಮತ್ತೆ ಹರಿದಾಸರ ಮಾತುಗಳನ್ನು ಕೇಳಿದೊಡನೆ ಕೋಪದಿಂದ, ತನಗೆ ಹಾರ್ಮೋನಿಯಂ ಬಾರಿಸಲಾಗದೆಂದ. ಕೊನೆಗೆ ಹೇಗೋ ತಂತ್ರಿಯವರು ಅವನನ್ನು ಸಮಾಧಾನಪಡಿಸಿದ್ದರು.

ಹಾರ್ಮೋನಿಯಂ ಮತ್ತು ತಬಲಾಗಳ ಸದ್ದನ್ನು ಕೇಳಿದೊಡನೆ ಊಟಮಾಡುತ್ತಿರುವ ಒಕ್ಕಲುಗಳು ಬೇಗಬೇಗನೆ ಉಣ್ಣತೊಡಗಿದರು. ಅವರಿಗೆ ಎಲ್ಲವನ್ನೂ, ಅಂದರೆ ಗಣಪತಿ ಪೂಜೆಯನ್ನು ಕೂಡಾ, ಪ್ರಾರಂಭದಿಂದಲೇ ನೋಡಬೇಕು.

ತಂತ್ರಿಯವರೇ ಸ್ವತಃ ಒಂದು ತೆಂಗಿನಕಾಯಿಯನ್ನೊಡೆದು ಗಣಪತಿ ಪೂಜೆ ಮಾಡಿದರು. ಆರತಿ ಹಿಡಿದಾದ ಬಳಿಕ ಅದನ್ನು ಮುಟ್ಟಿ ನಮಸ್ಕರಿಸಲು ಸಭೆಯವರಿಗೆ ಕೊಟ್ಟರು. ಹರಿದಾಸರು ಒಡನೆಯೇ ಆಲಾಪನೆಯ ರಾಗವನ್ನೆಳೆಯಲು ಆರಂಭಿಸಿದರು. ಮಂಗಲಾಚರಣೆಯಾಗಿ "ಗೋವಿಂದ" ಎಂದು ಹೇಳಿದರು.

ನೆರೆದವರೂ ಅವರೊಡನೆ ದನಿಗೂಡಿಸಿದರು.

ಮತ್ತೆ ಕಥೆಯು ಆರಂಭವಾಯಿತು.

ಸಾವಿತ್ರಿಯ ಕಥೆ. ಹರಿದಾಸರು ಅದಕ್ಕೆಷ್ಟೋ ಉಪಕಥೆಗಳನ್ನು ಸೇರಿಸಿ ನಾಲ್ಕೈದು ಗಂಟೆಯವರೆಗೆ ಹೇಳಿದರು. ಮಧ್ಯದಲ್ಲಿ ಪದ್ಯಗಳೂ ಕೀರ್ತನೆಗಳೂ ಆದುವು. ತಂತ್ರಿಯವರು ಮೊದಲಿನ ಒಂದು ಗಂಟೆ ಅತ್ತಿತ್ತ ತಿರುಗಾಡುತ್ತ ಸ್ವಲ್ಪ ಕೇಳಿದರು. ಮತ್ತೆ ಕಥೆಯು

ಅಂತ್ಯವಾಗುವಾಗ ಅವರ ಮಗನು ಅವರನ್ನು ಹುಡುಕಿಕೊಂಡು ಹೋಗಿ ಮಲಗಿದ್ದಲ್ಲಿಂದ ಎಚ್ಚರಮಾಡಿ ಕರೆದು ತರಬೇಕಾಯಿತು.

ಹೊನ್ನಮ್ಮನಿಗೆ ಕಥೆಯು ಒಂದಿಷ್ಟೂ ಅರ್ಥವಾಗಲಿಲ್ಲ. ತನಿಯನಿಗೆ ಭಾಗಾಂಶ ಅರ್ಥವಾಯಿತು. ರಾಜನು ಮಾಡಿದ ವ್ರತ, ಅದರಿಂದಾಗಿ ಸಾವಿತ್ರಿ ಹುಟ್ಟಿದುದು, ಸತ್ಯವಾನ ಸತ್ತುಹೋದುದು— ಇವನ್ನೆಲ್ಲ ಅವನು ಸ್ಥೂಲವಾಗಿ ತಿಳಿದ.

ಹೊರಹೊರಡುವಾಗ ನಡುರಾತ್ರಿ ಕಳೆದಿತ್ತು. ತನಿಯ ಮನೆಯಿಂದ ಬರುವಾಗಲೇ ಎರಡು ದೊಡ್ಡ ಸೂಟಿ (ತೆಂಗಿನ ಎಲೆಯನ್ನು ಕಟ್ಟಿ ಮಾಡಿದ ಪಂಜು) ಗಳನ್ನು ಮಾಡಿ ತಂದಿದ್ದ. ಅವನು ಒಂದನ್ನು ಉರಿಸಿ ಹೊನ್ನಮ್ಮನೊಡನೆ ಮನೆಯತ್ತ ನಡೆಯತೊಡಗಿದ. ಆಕಾಶದಲ್ಲಿ ಬರೇ ನಕ್ಷತ್ರಗಳು ಮಾತ್ರ ಮಿನುಗುತ್ತಿದ್ದುವು.

"ಏನು ನಿನಗೆ ಹರಿಕಥೆ ಅರ್ಥವಾಯಿತೆ?" ಎಂದು ತನಿಯ ಕೇಳಿದ.

"ಹೂಂ" ಎಂದಳು ಹೊನ್ನಮ್ಮ.

"ಹರಿಕಥೆ ಉಪ್ಪುಪ್ಪು ಎನ್ನುವಂತಾಗಲಿಲ್ಲವಲ್ಲ?"

"ಉಪ್ಪುಪ್ಪು? ಹಾಗೆಂದರೆ?"

"ಹಾಗೆಂದರೆ ಹೇಳುತ್ತೇನೆ. ಹಿಂದೆ ಯಾರೋ ಒಬ್ಬ ಹರಿಕಥೆ ಕೇಳಲಿಕ್ಕೆಂದು ಹೋಗಿದ್ದನಂತೆ. ಅಲ್ಲಿ ಅವನಿಗೆ ನಿದ್ದೆ ಬಂದು, ಬಾಯಿ ತೆರೆದು ಅಂಗಾತ ಮಲಗಿದ್ದನಂತೆ. ಮೇಲಿನಿಂದ ಒಂದು ಬೆಕ್ಕು ಮೂತ್ರ ಸುರಿಯಿತು. ಅದು ಅವನ ಬಾಯಿಯೊಳಗೆ ಬಿತ್ತು. ಎಚ್ಚರವಾಗುವಾಗ ಬಾಯಿ ಉಪ್ಪುಪ್ಪಾಗಿತ್ತು. ಆದ್ದರಿಂದ ಅವನೊಡನೆ ಹರಿಕಥೆ ಹೇಗಿತ್ತು ಎಂದು ಯಾರೋ ಕೇಳಿದ್ದಕ್ಕೆ ಉಪ್ಪುಪ್ಪಾಗಿತ್ತೆಂದು ಉತ್ತರಿಸಿದನಂತೆ"

"ನಿಮಗೆ ಹಾಗಾಗಲಿಲ್ಲವಲ್ಲ?"

"ಅಲ್ಲ, ನಿನಗೆ ಹಾಗಾಯಿತೋ ಎಂದು ನಾ ಕೇಳಿದೆ."

"ನನಗೇನೂ ನಿದ್ದೆ ಬರಲಿಲ್ಲ. ನಿಮ್ಮ ತಮಾಷೆ."

"ನೋಡು, ಆ ಅರಸ ಒಂದು ಸುಗು ಹುಟ್ಟಲಿಕ್ಕಾಗಿ ಏನೆಲ್ಲ ಮಾಡಿದ !"

ಹೊನ್ನಮ್ಮನಿಗೆ ತುಸು ನಾಚಿಕೆಯಾಯಿತು. ಹಾಗೆಯೇ ಅಲ್ಲಿದ್ದ ಒಂದು ಹೊಂಡಕ್ಕೆ ಅವಳ ಕಾಲು ಬಿತ್ತು.

"ಏ ಮುದುಕಿ!" ಎನ್ನುತ್ತ ತನಿಯ ಅವಳ ರಟ್ಟೆಯನ್ನು ಒಡಿದು ಎಳೆದ.

"ಥೂ ! ನಾಚಿಕೆಯಿಲ್ಲವೆ ನಿಮಗೆ ?" ಎನ್ನುತ್ತ ಆಕೆ ಕೈಯನ್ನು ಸೆಳೆದುಕೊಂಡಳು.

"ನಾಚಿಕೆ ಕೆಟ್ಟವ ಊರಿಗೆ ದೊಡ್ಡವ" ಎಂದ ತನಿಯ ನಗುತ್ತ.

ಹೊನ್ನಮ್ಮ ಉತ್ತರಿಸಲಿಲ್ಲ. ತನಿಯನ ಗುಣವೇ ಹಾಗೆ. ಯಾವಾಗಲೊಮ್ಮೆ ಅವನು ತಮಾಷೆಯ ತಿಳಿ ಮಾತುಗಳನ್ನಾಡುವ ಸ್ವಭಾವದವ. ಅದೂ ಈಗೀಗ ಇಳಿವಯಸ್ಸು, ಹಾಗೂ ದುಡಿತದ ಶ್ರಮದಿಂದಾಗಿ, ಅವನಿಗೆ ಹೊನ್ನಮ್ಮನೊಡನೆ ರಸನಿಮಿಷಗಳನ್ನು ಕಳೆಯಲು ಮನಸ್ಸಿಲ್ಲ. ಮನೆಗೆ ಬಂದೊಡನೆ ನಿದ್ದೆ ತೂಕಡಿಸುವುದು.

ಅವರಿಬ್ಬರೂ ಇನ್ನು ಸ್ವಲ್ಪ ಮುಂದೆ ಹೋಗುವಾಗ ಮಾರಪ್ಪ ಹಿಂದಿನಿಂದ ಬಂದ. ತನಿಯನಿಗೆ ಮೊದಲು ಅಚ್ಚರಿಯಾದರೂ ಮತ್ತೆ ಅವನ ಗುರುತು ಹಿಡಿದಾದ ಬಳಿಕ ಮಾತಾಡಿದ.

"ಏನು ಮಾರಾಯಾ ? ನೀನೂ ಹರಿಕಥೆ ಕೇಳಲಿಕ್ಕೆ ಬಂದರೆ ಮತ್ತೆ ಎಣ್ಣೆ ಗಾಣದ ಗತಿಯೇನು ?"

"ರಾತ್ರಿಯೂ ಎಣ್ಣೆ ಬೇಕೆ ? ನೀನೇಕೆ ರಾತ್ರಿ ಕಲ್ಲು ಒಡೆಯುವ ಕೆಲಸಕ್ಕೆ ಹೋಗುವುದಿಲ್ಲ ?"

"ನಾನು ಮಾಡಿದ ಹಾಗೆಯೇ ನೀನೂ ಮಾಡಬೇಕೆ ?"

"ಇಕೋ ನನಗೆ ನಿದ್ದೆ ತೂಕಡಿಸುತ್ತದೆ. ಏನೇನು ಮಾತಾಡ ಬೇಡ. ಕೋಪ ಬಂದೀತು, ತಿಳಿಯಿತೆ ?"

"ಹ್ಹ !" ತನಿಯನೆಂದ. "ನನ್ನಿದಿರಲಿ. ಲಂಗೋಟಿ ಕಟ್ಟಲು ಕಲಿತ ಹುಡುಗನಿಗೆ ಕೋಪ ಬಂದರೇನು, ಕೋಪದಲ್ಲಿ ಬಾವಿಗೆ ಹಾರಿದರೇನು ?"

"ಆದರೂ ಈಗ ನಾನು ನಿನ್ನಷ್ಟೇ ದೊಡ್ಡವನಾಗಿದ್ದೇನಲ್ಲ ? ಸಾಕು ಸ್ವಲ್ಪ ಸೂಟಿಯನ್ನು ಚೆನ್ನಾಗಿ ಬೀಸು. ನಿನಗೆ ಮದುಮಗ ಮದುಮಗಳಿಬ್ಬರಿಗೇ ಬೆಳಕಿದ್ದರೆ ಸಾಕೆ ?"

"ನೀನೂ ಬರುವಾಗ ಮನೆಯಿಂದ ಒಂದು ಸೂಟಿ ತರಬೇಕಿತ್ತು. ಈಗ ಯಾರ್ಯಾರ ಸೂಟಿಯನ್ನು ಹಾಗೆ ಬೀಸು - ಹೀಗೆ ಬೀಸು ಎಂದು ಅಪ್ಪಣೆ ಕೊಡುತ್ತಿದ್ದೀ ನಿನ್ನ ಕಾರುಭಾರೇ !"

"ಮಾರಪ್ಪ ಎಷ್ಟೆಂದರೂ ತರುಣನಲ್ಲವೇ ?" ಹೊನ್ನಮ್ಮ ನಡುವೆ ನಗುತ್ತ ಹೇಳಿದಳು. "ಅವನಿಗೆ ಈಗ ಮೀಸೆ ಬರುವ ಕಾಲ. ದೇಶ ಕಾಣದು. ಬೆಳಕಿಲ್ಲದೆಯೂ ಅವನು ನಡೆದುಕೊಂಡು ಹೋದ್ಯಾನು."

"ಹೂಂ. ಗಂಡ ಮಾತಾಡಿ ಮುಗಿತ ಬಳಿಕ ನಿನ್ನದು ಶುರುವಾಯಿತೆ ? ಮೀಸೆ ಬರುವ ಕಾಲ ದೇಶ ಕಾಣದು, ಮೊಲೆ ಬರುವ ಕಾಲ ನೆಲ ಕಾಣದು ಎಂದೇಕೆ ನೀನು ಗಾದೆಯನ್ನು ಪೂರ್ತಿಮಾಡಲಿಲ್ಲ ? ಚಿಂತಿಲ್ಲ ಜೋಡಿ. ನಾನು ಯುವಕನಾಗಿದ್ದರೇನು ನನ್ನ ಕಣ್ಣುಗಳಲ್ಲಿ ದೀಪವಿರುವುದೆ ?"

"ನಿನಗೆ ದೀಪ ಹಚ್ಚುವವಳು ಬರಲಿದ್ದಾಳೆ ತಡೆ." ಎಂದ ತನಿಯ.

"ಅದು ಸಾಯಲಿ ತನಿಯಣ್ಣ. ನೀನು ಹೇಗೆ ಹರಿಕಥೆಯನ್ನು ಮೆಚ್ಚಿದೆಯಾ ?"

"ಹೂಂ." ತನಿಯನೆಂದ. "ನನಗೆಲ್ಲ ಅದು ಹೇಗೆ ತಿಳಿಯಬೇಕು ? ಆದರೆ ನೀನು ಬರಹ ತಿಳಿದವ. ನಿನಗೆ ಚೆನ್ನಾಗಿ ಅರ್ಥವಾಗಿರಬೇಕು"

“ಆಂ ಅರ್ಥವೇನು, ಅನರ್ಥವೇನು ? ತಂತ್ರಿಯವರು ಆ ಹರಿದಾಸರಿಗೆ ಅಷ್ಟು ಹಣ ಕೊಡುತ್ತಾರೆ. ಹರಿದಾಸರು ಅಷ್ಟು ದಮ್ಮ ಖಾಲಿ ಮಾಡುತ್ತಾರೆ. ಮತ್ತೆ ನಮಗೇಕೆ ಈ ಪುರಾಣ ಪ್ರಸಂಗಗಳು ತನಿಯಣ್ಣಾ? ಆ ಅರಸ, ಅವನು ಮಾಡಿದ ತಪಸ್ಸು, ಮದುವೆ, ಯಮರಾಯ—ಇವನ್ನೆಲ್ಲ ನಮಗೆ ಕಲ್ಪಿಸಲು ಸಾಧ್ಯವಿಲ್ಲ. ಏನೋ ಹಿಂದಿನವರು ಬರೆದಿಟ್ಟದ್ದಾರೆ. ಇವರವನ್ನು ಕಲಿತು ಹೇಳುತ್ತಾರೆ. ಅಷ್ಟೆ. ನನಗೂ ಮೂರನೆಯ ಕ್ಲಾಸಿನಲ್ಲಿ ಸಾವಿತ್ರೀ – ಸತ್ಯವಾನರ ಕಥೆಯನ್ನು ಕಲಿಯಲಿಕ್ಕಿತ್ತು. ಅಂತೂ ಈ ಹರಿಕಥೆಯ ನೆವದಿಂದಾಗಿ ನಮಗೆ ಒಂದು ಪಾಯಸದೂಟ ಸಿಕ್ಕಿದ್ದೇ ಲಾಭ.’

“ಹರಿದಾಸರ ಪದ್ಯಗಳು ಅಷ್ಟು ಒಳ್ಳೇದಿರಲಿಲ್ಲ” ಹೂನ್ನಮ್ಮನೆಂದಳು. (ಅವಳ ಇಂಗಿತದಲ್ಲಿ ಒಳ್ಳೇದಿರಲಿಲ್ಲವೆಂದರೆ ಕಿವಿಗೆ ಇಂಪಾಗಿ ಇರಲಿಲ್ಲವೆಂದು ಅರ್ಥ).

“ನಾರ್ಣಪ್ಪಣ್ಣನ ಪಾರ್ವತಿಯಮ್ಮಗೂ ಹರಿದಾಸರಿಗೂ ಆಗಾಗ ಜಗಳವಾಗುತ್ತಿತ್ತು. ಹಗಲಲ್ಲೇ ಹರಿದಾಸರು ನಾರ್ಣಪ್ಪಣ್ಣನೊಡನೆ ಏನೋ ಅಬದ್ಧ ಮಾತಾಡಿದ್ದರಂತೆ. ನಾರ್ಣಪ್ಪಣ್ಣನಿಗೆ ಏನೂ ಬಾರಿಸಲು ಬಾರದೆಂದಿದ್ದರಂತೆ.”

“ಅದು ಸಾಯಲಿ. ಸಾವಿತ್ರಿಯ ತಂದೆ ಅವಳನ್ನು ಹೇಗ ಮದುವೆ ಮಾಡಿಸಿದ ? ಮತ್ತೆ ಯಮರಾಜ ಏಕೆ ಬಂದ ?” ತನಿಯ ಕೇಳಿದ.

“ಸಾವಿತ್ರಿಯನ್ನು ಯಾರೂ ಮದುವೆಯಾಗಲು ಒಪ್ಪಲಿಲ್ಲ, ಅಷ್ಟು ಚೆಲುವೆಯಂತೆ ಅವಳು. ಕೊನೆಗೆ ಅವಳೇ ಸತ್ಯವಾನನನ್ನು ಹುಡುಕಿ ಅವನನ್ನು ಮದುವೆಯಾಗುವೆನೆಂದಳು. ಆದರೆ ಅವನಿಗೆ ಮತ್ತೆ ಒಂದೇ ವರ್ಷ ಆಯುಷ್ಯವಂತೆ. ಹೇಗೂ ಮದುವೆಯಾಯಿತು. ಒಂದು ವರ್ಷ ಕಳೆದಾಗ ಯಮ ಬಂದ. ಮತ್ತ ಸಾವಿತ್ರಿ ಅವನೊಟ್ಟಿಗೆ ಹೋದಳು. ಆಮೇಲೆ ಯಮನು ಸತ್ಯವಾನನನ್ನು ಪುನಃ

ಹೇಗೆ ಜೀವ ಮಾಡಿದನೆಂಬುದು ನನಗೆ ಅರ್ಥವಾಗಲಿಲ್ಲ."

"ನೀನಿಷ್ಟೇ ಕಲಿತುದೆ ?"

"ಆ ಹರಿದಾಸರ ಮಾತು ಯಾರಿಗೆ ಅರ್ಥವಾಗುತ್ತದೆ! ಅವರು ಎಷ್ಟು ಅಡ್ಡ ಕಥೆಗಳನ್ನು ಹೇಳುತ್ತಾರೆ! ಅದೂ ಅವರ ಕನ್ನಡ ಭಾಷೆ ನಮ್ಮೂರದ್ದು ಅಲ್ಲ. ಗಟ್ಟದಿಂದ ಬೆಲ್ಲ ಮಾಡುವ ಗೌಡರು ಬರುವರಲ್ಲ? ಅವರು 'ಹ್ಯಾಂಗಿದ್ರೀ', 'ನಿಮೇನ್ರೀ' 'ತಕ್ಕೊಳ್ರೀ' 'ಹ್ಯಾಂಗೆ ಆಯ್ತು' ಎಂದು ಮಾತಾಡುತ್ತಾರೆ. ಆ ಭಾಷೆಯೇ ಹರಿದಾಸರದ್ದು."

"ನೀನು ಸಾಲೆಯಲ್ಲಿ ಅದನ್ನು ಕಲಿಯಲಿಲ್ಲವೇ ?"

"ಹೊ. ಸಾಲೆಯ ಕನ್ನಡ ಶುದ್ಧ ಕನ್ನಡ. ಹೀಗೆ ಕನ್ನಡ ಬರೆದರೆ ಪರೀಕ್ಷೆಯಲ್ಲಿ ಸೊನ್ನೆ."

"ಇದೆಲ್ಲ ನನಗೆ ಗೊತ್ತಿಲ್ಲಪ್ಪ. ಯಾವ ಭಾಷೆ ಏನಾದರೆ ನನಗೇನು ? ಅಂತೂ ಇಂದು ನಿದ್ದೆಯಿಲ್ಲ. ನಾಳೆ ಕೆಲಸಕ್ಕೆ ಹೋಗಲು ಸಾಧ್ಯವಿಲ್ಲ."

"ಹ್ಹೊ !" ಎಂದು ನಕ್ಕ ಮಾರಪ್ಪ. "ಈಗೇನು ಮಧ್ಯರಾತ್ರಿ ಕಳೆದಿರಬಹುದು ಅಷ್ಟೆ. ರಾತ್ರಿ ಒಂದು ಜಾವದ ನಿದ್ದೆ ನಿನಗೆ ಸಾಲದೆ ?"

"ಮೈ ಕೈ ನೋಯುತ್ತಿದೆ...."

"ಹೊಟ್ಟೆತುಂಬಾ ಉಂಡೆ?"

"ಸಾಕು ನಿಮ್ಮಿಬ್ಬರ ಪುರಾಣ" ಹೊನ್ನಮ್ಮನೆಂದಳು. "ಸುಮ್ಮನೆ ಬೇಗ ನಡೆಯುವುದು ಬಿಟ್ಟು ಇಲ್ಲಿ ದಾರಿಯಲ್ಲಿ ಚರ್ಚೆ. ಆ ಸೂಟೆ ಸ್ವಲ್ಪ ಬೀಸಿ ನೋಡುವ, ಇಲ್ಲಿ ನಾಲ್ಕೈದು ಮುಳ್ಳುಗಳು ನನ್ನ ಕಾಲಿಗೆ ನಾಟಿಹೋಗಿವೆ. ಒಂದು ಬೆರಳಿಗೆ ಕಲ್ಲು ತಾಗಿ ರಕ್ತ ಸುರಿಯುತ್ತಿದೆ."

"ಓ ತನಿಯಣ್ಣಾ, ಬೇಗ ಹೋಗು. ನಿನ್ನ ಹೆಂಡತಿಗೆ ಸಮಯ ವಾಗುತ್ತದೆ. ಏನೆಲ್ಲ ಮಾತುಗಳು!" ಎಂದ ಮಾರಪ್ಪ, ಗಟ್ಟಿ

ಯಾಗಿ ನಗುತ್ತ.

"ನಿನ್ನ ಚೇಷ್ಟೆಯೇ! ಅಬ್ಬ! ಹೀಗೆ ಮಾತಾಡಲು ಎಲ್ಲಿ ಕಲಿತೆ? ನಿನಗೆ ಈಗ ಕಲ್ಲಿಗೆ ಹಾಯುವುದೋ ಮರಕ್ಕೆ ಹಾಯುವುದೋ ಎಂದು ತಿಳಿಯದು" ಹೊನ್ನಮ್ಮನೆಂದಳು.

ಆಗ ತನಿಯನಿಗೂ ಒಂದು ಮುಳ್ಳು ನಾಟಿತು. ಅವನ ಕೈಯಿಂದ ಮಾರಪ್ಪ ಸೂಟಿಯನ್ನು ತೆಗೆದುಕೊಂಡು ಕಾಲಿನ ಬಳಿ ಅದನ್ನು ಉರಿಸಿ ಹೇಗಾದರೂ ಮುಳ್ಳು ತೆಗೆದ. ಆಮೇಲೆ ತನಿಯ ಮೆಲ್ಲನೆ ನಡೆಯತೊಡಗಿದ.

ಸೂಟಿ ಹಿಡಿದುಕೊಂಡ ಮಾರಪ್ಪ ತುಸು ವೇಗವಾಗಿಯೇ ಹೆಜ್ಜೆ ಹಾಕತೊಡಗಿದ. ತನಿಯ ಅವನನ್ನು ಹಿಂಬಾಲಿಸಲಾರನಾದ.

"ಏ ಕೋಣ! ಸ್ವಲ್ಪ ನಿಧಾನ ಹೋಗೋ! ಹೆಂಗಸಿದ್ದಾಳೆಂದು ನಿನಗೆ ತಿಳಿಯದೆ?"

"ಅಕ್ಕ ನಡೆಯುತ್ತಿದ್ದಾಳೆ. ಆದರೆ ನಿನಗೆ ನಡೆಯಲಾಗುವುದಿಲ್ಲ, ಅಲ್ಲವೇ? ನಾಚಿಕೆ- ಥೂ"

"ನಿನಗೇನು ಪ್ರಾಣ ಎಳೆಯುತ್ತಿದೆಯೆ, ಮಾರಪ್ಪ?" ಎಂದು ಹೊನ್ನಮ್ಮನೂ ಕೇಳಿದಳು.

"ನನಗೆ ನಿಮಗಿಂತಲೂ ದೂರ ಹೋಗಬೇಕಲ್ಲ?"

ಮಾರಪ್ಪ ಸಂಶಯದಿಂದ ಹೇಳಿದ. ಅವನ ಇಂಗಿತದಲ್ಲಿ ಆ ರಾತ್ರಿಯನ್ನು ತನಿಯನಲ್ಲೇ ಕಳೆಯಬೇಕೆಂದಿತ್ತು. ಆದರೆ ಔಪಚಾರಿಕ ಆಮಂತ್ರಣ ಅವನಿಗೆ ಬೇಕಿತ್ತು.

"ಓ ಅಷ್ಟೇನೆ?" ತನಿಯನೆಂದ. "ಬೇಕಾದರೆ ನಮ್ಮಲ್ಲೇ ಜಗಲಿಯಲ್ಲಿ ಮಲಗಿಬಿಡು ಮಹರಾಯಾ. ನಿನಗೇನೂ ಮನೆಯಲ್ಲಿ ಗದರಿಸುವವರಿಲ್ಲವಲ್ಲ!"

"ಜಗಲಿಯಲ್ಲಿ ಮಲಗಿ ನಾನು ಚಳಿ ಹಿಡಿದು ಸಾಯಬೇಕೆ? ಒಳ್ಳೆಯ ಜನ ನೀನು."

" ಬೇಕಾದರೆ ಕಂಬಳಿ ಕೊಡುತ್ತೇನೆ ಹೊದ್ದುಕೊಳ್ಳಲಿಕ್ಕೆ."

" ಬೇಡಪ್ಪ ಅಷ್ಟು ಉಪಚಾರ. ನಾನು ಮನೆಗೇ ಹೋಗಿ ಬಿಡುತ್ತೇನೆ."

" ಓ ! ಇಂದು ರಾತ್ರಿ ಎಲ್ಲಿಗೆ ಬರುವೆನೆಂದಿದ್ದೀಯೋ ಏನೋ ! ಯಾರಿಗೆ ಗೊತ್ತು. ಎಲ್ಲಿ ಬೇಲಿಯನ್ನು ಹಾರಲಿದ್ದೀಯೋ, ಎಲ್ಲಿ ಗೋಡೆ ಏರಲಿದ್ದೀಯೋ !...."

" ಸಾಕು ಸಾಕು ನಿಮ್ಮ ಹುಚ್ಚು ಮಾತು. ಮನೆಯೊಳಗೆ ಹೋಗೋಣ" ಎನ್ನುತ್ತ ಹೊನ್ನಮ್ಮ ಮನೆಯ ಕದ ತೆರೆದು ಒಳಗೆ ಹೋದಳು.

ಮಾರಪ್ಪನಿಗೂ ಕಣ್ಣು ತೂಕಡಿಸುತ್ತಿತ್ತು. ಆದರೂ ಅವನಿಗೆ ತನಿಯನಲ್ಲಿ ಉಳಕೊಳ್ಳುವ ಇಚ್ಛೆಯಿಲ್ಲ. ಅಷ್ಟರಲ್ಲಿ ತನಿಯ ಜಗಲಿಯಲ್ಲಿ ಒಂದು ಚಾಪೆಯನ್ನು ಹಾಸಿ, ಅದರ ಮೇಲೆ ಹರಕು ಕಂಬಳಿಯೊಂದನ್ನಿಟ್ಟ.

" ನಿನಗೇನಾದರೂ ನೀರು ಬೇಕೆ ?" ಎಂದು ಹೊನ್ನಮ್ಮ ಮತ್ತೆ ಬಾಗಿಲ ಬಳಿಯಿಂದ ಕೇಳಿದಳು.

ಮಾರಪ್ಪ ಅವಳ ಮುಖವನ್ನು ನೋಡಿ ನಸುನಕ್ಕ ವಿನಃ ಅವಳ ಪ್ರಶ್ನೆಗೆ ಉತ್ತರಿಸಲಿಲ್ಲ. ಅವಳು ಹಾಗೆಂದುದು ಕೇವಲ ಉಪಚಾರಕ್ಕಾಗಿ ಎಂಬುದು ಅವನಿಗೆ ತಿಳಿದೇ ಇತ್ತು.

ಆಗ ತನಿಯ ಎಲೆಯಡಿಕೆಯ ಪೆಟ್ಟಿಗೆ ತಂದು ಅದನ್ನು ಬಿಚ್ಚಿದ. ಅವನ ಸೊಂಟದಲ್ಲೂ ಒಂದಿಷ್ಟು ಅಡಿಕೆ ತುಂಡುಗಳಿದ್ದುವು. ಅದನ್ನು ತೆಗೆದು ಪೆಟ್ಟಿಗೆಯಲ್ಲಿ ಹಾಕಿದ.

" ಏನು ತನಿಯಣ್ಣ, ಧನಿಗಳಲ್ಲಿ ಊಟ ಜೊತೆ, ಪಡಿ ಜೊತೆ ಸಿಕ್ಕಿತೋ ?" ಎಂದ ಮಾರಪ್ಪ ನಗುತ್ತ.

" ನಾನೇನು ಧನಿಗಳಲ್ಲಿಂದ ಕದ್ದು ತಂದೆನೆಂದು ಭಾವಿಸಿದೆಯಾ ಕಳ್ಳ? ಇದು ನಾನು ಹೋಗುವಾಗ ಕೊಂಡುಹೋದುದು."

"ಹಾಗೆಂದು ನಾನು ಹೇಳಿದೆನೆ? ಕಂಡದ್ದನ್ನು ಹೇಳಿದರೆ ಕೆಂಡದಂತಹ ಕೋಪವಂತೆ."

"ಹೊಂ. ಎಲೆಯಡಿಕೆ ಬೇಕಾದರೆ ತಿನ್ನು ನೋಡೋಣ. ಸುಮ್ಮನೆ ಹುಡುಗರಿಗೆ ಎಷ್ಟು ಅಧಿಕ ಪ್ರಸಂಗ!" ಎನ್ನುತ್ತ ತನಿಯ ಅಡಿಕೆ ಜಗಿಯತೊಡಗಿದ.

ಮಾರಪ್ಪನೂ ಒಂದಿಷ್ಟು ಎಲೆಯಡಿಕೆ ತೆಗೆದುಕೊಂಡು ತಿನ್ನಲು ಪ್ರಾರಂಭಿಸಿದ. ಆದರೆ ತನಿಯನನ್ನು ನೋಡುವಾಗ ಅವನಿಗೆ ನಗು ತಡೆಯಲಾಗುತ್ತಿದ್ದಿಲ್ಲ.

ಧನಿಗಳು ಸಿಪ್ಪೆ ತೆಗೆಯಲು ಅಡಿಕೆಗಳನ್ನು ತನಿಯನೊಡನೆ ಕೊಟ್ಟುದನ್ನು ಮಾರಪ್ಪನೇ ಕಂಡಿದ್ದ. ತನಿಯ ಅವುಗಳ ಸಿಪ್ಪೆ ತೆಗೆದು ಹೋಳು ಮಾಡಿ, ಒಂದು ಮುಷ್ಟಿ ಹೋಳನ್ನು ಸೊಂಟಕ್ಕೆ ಸಿಕ್ಕಿಸಿ ಕೊಳ್ಳುವುದನ್ನು ಅವನು ನೋಡಿದ್ದ. ಈಗ ಏನಾದರೂ ಅವನು ಧನಿಗಳೊಡನೆ ಈ ಕುರಿತು ದೂರು ಕೊಡಲು ಹೋಗುವುದಿಲ್ಲ. ಏಕೆಂದರೆ ಒಕ್ಕಲುಗಳ ಈ ರೀತಿಯ ವರ್ತನೆ ತೀರ ಸರ್ವಸಾಮಾನ್ಯ ವಾದುದೆಂಬುದು ಧನಿಗಳಿಗೂ ಗೊತ್ತು. ಆದರೆ ತನಿಯ ತಾನು ಕದ್ದುದನ್ನು ಒಪ್ಪಿಕೊಳ್ಳಲು ತಯಾರಿಲ್ಲ- ಅದಲ್ಲದೆ ತಾನು ಕದ್ದೆ ನೆಂದಾಗ ಅವನಿಗೆ ಒಂದು ರೀತಿಯ ವಿಲಕ್ಷಣ ಕೋಪ ಕೂಡಾ ಬಂದಿತ್ತು. ಅವನ ನಗೆ ಮಾಯವಾಗಿ ತೀರ ಸಪ್ಪಗಾಗಿ ಹೋಗಿದ್ದ, ಮತ್ತೆ.

"ಏನು ಬೆಳಗಿನ ವರೆಗೂ ಇಂದು ಜಾಗರವೇ?" ಎಂದು ಸ್ವಲ್ಪ ಸಮಯದ ಬಳಿಕ ಹೊನ್ನಮ್ಮ ತನಿಯನನ್ನು ಕೇಳಿದಳು.

"ಆಯಿತು ತನಿಯಣ್ಣ, ನಿನಗೆ ಮಲಗಲು ತಡವಾಯಿತು. ನನಗೂ ತಡವಾಗುತ್ತದೆ, ಉಳಿದವರಿಗೂ ತಡವಾಗುತ್ತದೆ" ಮಾರಪ್ಪ ನೆಂದ ಆಕಳಿಸುತ್ತ.

"ಹೊಂ," ತನಿಯ ಉದ್ಗರಿಸಿದ. "ಇದೇನು ತಡ! ಹಿಂದೆ

ಕೆಲವು ವೇಳೆ ನಾನು ರಾತ್ರಿ ಇಡೀ ಹೊಲನನ್ನು ಉತ್ತುದಿತ್ತು. ಒಮ್ಮೊಮ್ಮೆ ಮಳೆಯ ಬಾಧೆಯಿದ್ದರೆ, ರಾತ್ರಿ ಇಡೀ ಪೈರು ಕಟಾವು ಮಾಡುತ್ತಿದ್ದೆ........"

"ಹಾಗಲ್ಲ ತನಿಯಣ್ಣ, ನೀನು ಹೀಗೆಯೇ ಮಾತಾಡಿಯೂ ಕುಳಿತುಕೊಳ್ಳುವುದಿತ್ತೆ ?"

"ಓಹ್ ! ಮಾತಾಡಿಯೂ ಕುಳಿತುಕೊಳ್ಳುತ್ತಿದ್ದೆ."

"ಜುಗಾರಿ ಆಡುತ್ತಲೂ ಕುಳಿತುಕೊಳ್ಳುತ್ತಿದ್ದರು...."ಎಂದಳು ಹೊನ್ನಮ್ಮ, ಒಳಗಿಂದ.

"ಏ ! ಸಾಕು ಸಾಕು, ನಿನ್ನ ಬಾಯಿ ಮುಚ್ಚು" ಎನ್ನುತ್ತ ತನಿಯ ಹಲ್ಕಡಿದ.

ಮಾರಪ್ಪನಿಗೆ ಈ ಸನ್ನಿವೇಶದ ಯಥಾರ್ಥ ಅರಿವುಂಟಾಗಿ ಮತ್ತೆ ಅವನು ತನಿಯನನ್ನು ಕೆಣಕಲಿಲ್ಲ. ಮೆಲ್ಲನೆ ಚಾಪೆಯನ್ನು ಬಿಡಿಸಿ ಅದರಲ್ಲಿ ಮಲಗಿ ಕಂಬಳಿಯನ್ನು ಹೊದ್ದುಕೊಂಡನನ.

ತನಿಯ ಚಿಮಿಣಿ ದೀಪವನ್ನೇ ಸ್ವಲ್ಪ ಹೊತ್ತು ನೋಡುತ್ತ ನೋಡುತ್ತ ಅದನ್ನು ನಂದಿಸಿ ಮೆಲ್ಲನೆ ಎದ್ದು ಒಳಗೆ ಹೋದ.

ಮಾರಪ್ಪನಿಗೆ ಒಂದೆಡೆಯಿಂದ ತಗಣೆಗಳು ಕಚ್ಚುತ್ತಿದ್ದುವು. ಇನ್ನೊಂದೆಡೆಯಿಂದ ನುಸಿಗಳ ಹಾವಳಿ. ಕಂಬಳಿಯಲ್ಲಿದ್ದ ದೊಡ್ಡ ತೂತುಗಳಿಂದ ಅವು ಒಳಗೆ ಬಂದು ಗಾಯನ ಮಾಡುತ್ತ ಅವನನ್ನು ಚುಚ್ಚುತ್ತಿದ್ದುವು. ಅವನಿಗೆ ಅವನ್ನು ಹೊಡೆದು ಹೊಡೆದು ಸಾಕಾಯಿತು. ಎಷ್ಟು ಹೊಡೆದರೂ ಒಂದು ನುಸಿಯೂ ಕಡಿಮೆ ಯಾದಂತೆ ತೋರುತ್ತಿರಲಿಲ್ಲ.

ಒಮ್ಮೆ ಅನನು ಕಣ್ತೆರೆದು ಸುತ್ತಲೂ ನೋಡಿದ. ಎಲ್ಲಾ ಕತ್ತಲೆ. ಕೀಟಗಳ ಸದ್ದು ಮಾತ್ರ ಕೇಳಿಬರುತ್ತಿತ್ತು. ಒಮ್ಮೆ ತನ್ನ ಮನೆಗೇ ಹೊರಟುಹೋಗೋಣವೆಂದೆನಿಸಿತವನಿಗೆ. ಆದರೆ ಮನೆಗೆ ಇನ್ನು ಅರ್ಧಗಂಟೆ ಕತ್ತಲಲ್ಲೇ ದಾರಿ ತುಳಿಯಬೇಕು. ಅದಕ್ಕಿಂತ

ಬೆಳಗ್ಗೆ ಎದ್ದು ಹೋಗುವುದೇ ಲೇಸೆಂದು ಭಾವಿಸಿ ಮರಳಿ ಕಣ್ಣು ಮುಚ್ಚಿದ.

ಹಾಗೆಯೇ ಅವನಿಗೆ ತೂಕಡಿಕೆ ಹಿಡಿಯುವಾಗ ಹೊರಗಿಂದ ಏನೋ ಸದ್ದಾದಂತಾಯಿತು. ತಲೆಯನ್ನಾಡಿಸುವಾಗ ಅಂಗಳದಲ್ಲಿದ್ದ ತರಗೆಲೆಗಳ ಮೇಲೆ ಯಾರೋ ನಡೆಯುವ ಸದ್ದು ಕೇಳಿತು. ಅತ್ತ ನೋಡಿದ. ಕತ್ತಲೆಯಲ್ಲಿ ಒಂದು ಉದ್ದವಾದ ಪ್ರಾಣಿ ನಡೆಯುವಂತೆ ಕಂಡಿತವನಿಗೆ. ಅವನೆದ್ದು ಕುಳಿತಂತೆಯೇ ಅದು ಜಗಲಿಯ ಹತ್ತಿರಕ್ಕೆ ಬಂತು.

ಅದೊಂದು ದೊಡ್ಡ ಹುಲಿಯಾಗಿತ್ತು. ಮಾರಪ್ಪ ಒಮ್ಮೆಲೇ ಚೀರಿಡಲು ಯತ್ನಿಸಿದ. ಆದರೆ ಅವನ ಬಾಯಿಯಿಂದ ಸ್ವರ ಹೊರಡಲಿಲ್ಲ. ರಕ್ತವೆಲ್ಲ ಹೆಪ್ಪುಗಟ್ಟಿದಂತಾಗಿತ್ತು. ಹುಲಿ ಅತ್ತಿತ್ತ ಮೂಸಿ ಮೆಲ್ಲನೆ ದೂರ ಹೋಯಿತು. ಮತ್ತೂ ಬೊಬ್ಬೆ ಹಾಕಲು ಯತ್ನಿಸಿದ. ಆದರೆ ಮೈಯಿಡೀ ಆಗ ಬೆವರಿತ್ತು. ಬಾಯಿಯ ಪಸೆ ಆರಿಹೋಗಿತ್ತು. ಹೆದರಿಕೆಯಿಂದ ಅವನ ದೇಹ ನಡುಗುತ್ತಿತ್ತು. ಧೈರ್ಯ ಸಂಪೂರ್ಣವಾಗಿ ಕುಂದಿಹೋಗಿತ್ತು.

ಆದರೂ ಹುಲಿ ವೇಗವಾಗಿ ಹೋಗುತ್ತಿದ್ದಿಲ್ಲ. ನಾಯಿಯನ್ನು ಹುಡುಕುತ್ತಿದೆ ಬಹುಶಃ ಎಂದು ಅವನೆಣಿಸಿದ. ಅದು ಅಲ್ಲಿಂದ ಹೋಗುವವರೆಗೆ ತನ್ನ ಪ್ರಾಣ ಉಳಿದೀತೋ ಇಲ್ಲವೋ ಎಂಬುದೂ ಅವನಿಗೆ ಸಂಶಯವಾಗದಿರಲಿಲ್ಲ.

ಮತ್ತೂ ಸ್ವಲ್ಪ ಸ್ವಲ್ಪ ಸದ್ದು ಕೇಳಬರುತ್ತಿತ್ತು. ಆದರೆ ಮಾರಪ್ಪ ಮುಚ್ಚಿಕೊಂಡ ಕಣ್ಣನ್ನು ಪುನಃ ತೆರೆಯಲೇ ಇಲ್ಲ. ಹಿಂದೊಮ್ಮೆ ಅವನ ಮೇಲೆ ಕಾಡಿನಲ್ಲಿ ಹುಲಿ ನೆಗೆದಿತ್ತು. ಅವನಿಗೇನೂ ಗಾಯವಾಗದಿದ್ದರೂ, ಆ ಬಳಿಕ ಅವನು ಎಲ್ಲಾದರೂ ಹುಲಿಯ ಹೆಣವನ್ನು ತಂದರೂ ಅದರ ಬಳಿಯಿಂದೋಡಿಹೋಗುವನು. ಅಲ್ಲಿ ಮನುಷ್ಯರನ್ನು ಕೊಲ್ಲುವ ಜಾತಿಯ ಹುಲಿಗಳಿಲ್ಲವೆಂದು ಪ್ರತೀತಿ

ಯಿದ್ದರೂ, ಅಲ್ಲಿ ಸಂಚರಿಸುವ ನಾಯಿಹುಲಿಗಳೂ ಕೆಲ ಸಂದರ್ಭ ಗಳಲ್ಲಿ ಮನುಷ್ಯರ ಮೇಲೆ ಹಲ್ಲೆ ಮಾಡುತ್ತಿದ್ದುವು.

ಮತ್ತೆ ಹುಲಿ ಅಂಗಳದಿಂದ ಕೆಳಗೆ ಹಾರುವ ಶಬ್ದವನ್ನು ಕೇಳಿ ಮಾರಪ್ಪನಿಗೆ ಜೀವ ಮರಳಿದಂತಾಯಿತು. ಹಾಗೆಯೇ ಏನೇನೋ ಕಲ್ಪನೆಗಳನ್ನು ಮಾಡುತ್ತ ನಿದ್ರಿಸಲು ಯತ್ನಿಸಿದ.

ಬೆಳಗಾಗಲು ಇನ್ನೂ ತಡವಿತ್ತು.

ಮಾರಪ್ಪನಿಗೆ ಒಂದು ಕನಸು ಬಿತ್ತು: ಅಲ್ಲೇ ಕಾಡಿನೊಳಗೆ ಅವನು ತಿರುಗಾಡುತ್ತಿದ್ದಾನೆ. ಅಲ್ಲಿ ಒಂದು ದೊಡ್ಡ ಗುಹೆಯೊಳಗಿಂದ ಗರ್ಜನೆ ಕೇಳುವುದು. ಗುಹೆಯ ಬಳಿ ಹೋಗಿ ನೋಡುತ್ತಾನೆ. ಅದರ ಸುತ್ತುಮುತ್ತು ಹುಲ್ಲುಕಡ್ಡಿಗಳು ಹರಡಿವೆ. ಗುಹೆಯ ಬಾಯಿ ಬಹಳ ದೊಡ್ಡದಿದೆ. ಅವನಿಗೆ ಅದರೊಳಗೆ ಹೊಕ್ಕಿಬಿಡೋಣವೆಂದೆನಿಸಿತು. ಆದರೆ ಒಳಗಿಂದ ಹುಲಿಯ 'ಗರ್ರ್ ಗರ್ರ್' ಎಂಬ ಗರ್ಜನೆ ಕೇಳಿಸುತ್ತಿದೆ.

ಇನ್ನು ಅದನ್ನು ಹೊಡೆಯಲು ಒಂದು ದೊಡ್ಡ ಕೋಲನ್ನು ತರೋಣವೆಂದು ಅತ್ತಿತ್ತ ನೋಡಿದ. ಬಳಿಯಲ್ಲೇ ದೊಡ್ಡದಾದ ಒಂದು ಮರದ ತುಂಡಿತ್ತು. ಅದನ್ನು ಎತ್ತಲು ಯತ್ನಿಸಿದ. ಆಗಲೇ ಹುಲಿ ಗುಹೆಯ ಬಾಯಿಯಲ್ಲಿ ಬಂದು ನಿಂತು ತನ್ನ ಬಾಯಿಯನ್ನು ತೆರೆಯಿತು.

ಅದರ ಮೇಲೆ ಒಮ್ಮೆಲೇ ಏನೋ ಬೆಳಕು ಬಿದ್ದಂತಾಯಿತು. ಮಾರಪ್ಪ ಅದನ್ನು ನೋಡಿ ಮರದ ತುಂಡನ್ನು ಅಲ್ಲೇ ಬಿಟ್ಟು ಓಡ ತೊಡಗಿದ. ಓಡುತ್ತಾ ಓಡುತ್ತಾ ಕೊನೆಗೆ ದಾರಿ ಕಾಣದಾಯಿತು. ಹುಲಿಯು ಹಿಂದಿನಿಂದ ಬರುತ್ತಿತ್ತು. ಅಷ್ಟರಲ್ಲಿ ಅವನ ಎದುರಲ್ಲೇ ಗುಹೆ ಕಂಡುಬಂತು. ಅದರೊಳಗೆ ಹೊಕ್ಕಿದ. ಅದರೊಳಗೆ ಎಲ್ಲಾ ಕತ್ತಲೆ. ಹುಲಿ ಅತ್ತ ಓಡಿಬರುತ್ತಿದ್ದಂತೆಯೇ ಗುಹೆಯ ಬಾಗಿಲು ಮುಚ್ಚಿತು. ಅವನು ಚೀರಿದ.

ಕಣ್ಣು ತೆರೆದು ನೋಡುತ್ತಾನೆ, ಕತ್ತಲೆ ಇನ್ನೂ ಆಕಾಶವನ್ನು

ಆವರಿಸಿತ್ತು. ಅವನಿಗೆ ಎಚ್ಚರಿಕೆಯಾಗಿದ್ದರೂ ಹೆದರಿಕೆ ಬಿಡಲಿಲ್ಲ-ತಾನಿಲ್ಲಿ ಮಲಗಿದ್ದೇನೆ. ಇಲ್ಲಿಗೆ ಹುಲಿಯೋ ಆನೆಯೋ ಬಂದರೆ ತನ್ನನ್ನು ರಕ್ಷಿಸುವವರಿಲ್ಲ. ತನ್ನನ್ನು ಎತ್ತಿಕೊಂಡು ಹೋಗಿ ಕೊಲ್ಲ ಬಹುದು ಎಂದು ಕಲ್ಪಿಸಿದ.

ಆ ಕತ್ತಲೆಯಲ್ಲಿ ಇನ್ನೂ ಹೆಚ್ಚು ಹೆದರಿಕೆಯಾಗಬಹುದಿತ್ತು ಅವನಿಗೆ—

ಮತ್ತೆ ಅವನಿಗೆ ಪಂಚಾಂಗದಲ್ಲಿದ್ದ "ಹುಲಿ ಕಂಡರೆ ಸದ್ಧರ್ಮ ವೃದ್ಧಿ" ಎಂಬ ಸ್ವಪ್ನಫಲದ ನೆನಪಾಯಿತು.

ಆದರೆ ಆ ಗುಹೆ! ಅಂಥ ಗುಹೆಯನ್ನು ಅವನು ನಿಜಜೀವನ ದಲ್ಲೆಂದೂ ಕಂಡವನಲ್ಲ. ಏನು ಭಯಂಕರ ಅದು! ಹುಲಿಗಳು ಬಹುಶಃ ಅಂಥ ಗುಹೆಯೊಳಗೇ ವಾಸಿಸುತ್ತಿರಬಹುದು. ಸಿಂಹಗಳೂ ಅದರೊಳಗೆ ಮನೆ ಮಾಡಿಕೊಂಡಿರಬಹುದು. ಆದರೆ ಅದು ಆ ಊರಲ್ಲಿಲ್ಲದ ಗುಹೆ.

ಆದರೂ ಅದು ತೆರೆದಿದ್ದ ಬಾಯಿಯನ್ನು ಮುಚ್ಚುವುದೆಂದ ರೇನು? ಯಾವ ಗುಹೆಗೂ ಬಾಗಿಲಿಲ್ಲ. ಏನೋ ಮೃಗಗಳು ಗುಹೆಯ ಬಾಯಿಗೆ ಕಲ್ಲನ್ನಿಡುವುವಂತೆ. ಆದರೆ ಅವನು ಅಂತಹ ನಿದರ್ಶನವನ್ನು ಸ್ವತಃ ಕಂಡಿಲ್ಲ. ಸ್ವತಃ ಕಂಡವರು ಹೇಳುವುದನ್ನು ಕೂಡಾ ಕೇಳಿಲ್ಲ. ಆದರೆ ಸ್ವಪ್ನದಲ್ಲಾದರೂ ಅದನ್ನು ಹೊಕ್ಕೊಡನೆ, ಅವನ ಮನಸ್ಸಿನಲ್ಲಿ ವಿಪರೀತ ಉತ್ಸಾಹ ಉಕ್ಕೇರಿತು. ಕೈ-ಕಾಲುಗಳು ನಡುಗತೊಡಗಿದ್ದುವು. ಒಂದೆಡೆ ಓಡಿಸಿಕೊಂಡು ಬರುತ್ತಿದ್ದ ಹುಲಿಯು ಹೆದರಿಕೆಯಿದ್ದರೂ, ಇನ್ನೊಂದೆಡೆಯಿಂದ ಅದನ್ನು ಹೊಡೆದು ಹಾಕು ವಂಥ ಉದ್ರೇಕವಾಗಿತ್ತವನಿಗೆ. ಅದರೊಳಗಿನ ಕತ್ತಲೆಯಲ್ಲಿ ಒಂದು ರೀತಿಯ ಶಕ್ತಿಯಿತ್ತು, ಚೈತನ್ಯವಿತ್ತು.

ಮತ್ತೇನಾದರೂ ಪಂಚಾಂಗದಲ್ಲಿ ಗುಹೆ ಕಂಡುದರ ಬಗ್ಗೆ ಸ್ವಪ್ನಫಲವಿದ್ದುದು ಅವನಿಗೆ ನೆನಪಿರಲಿಲ್ಲ. ಬಹುಶಃ ಜನರು ಆ

ಸ್ವಪ್ನವನ್ನು ಕಾಣುವುದಿಲ್ಲವೆಂದು ನೆನೆದ.

ಆಗ ಒಳಗಿನ ಬಾಗಿಲು ಸದ್ದಾಯಿತು. ಹೊನ್ನಮ್ಮ ದೀಪ ಹಿಡಿದುಕೊಂಡು ಹೊರಗೆ ಬಂದಳು. ಮಾರಪ್ಪ ಒಮ್ಮೆಲೇ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡ. ಆದರೂ ಬೆಳಕಿನ ಛಾಯೆ ಕಣ್ಣ ರೆಪ್ಪೆಯನ್ನು ಕುಕ್ಕುತ್ತಿತ್ತು. ಅವಳು ಅವನನ್ನು ಹಾದು ಹೋಗುವಾಗ ಅವನ ಚಾಪೆಯ ಬಳಿ ಸ್ವಲ್ಪ ಹೊತ್ತು ನಿಂತಂತೆ ಅವನಿಗೆ ಭಾಸವಾಯಿತು. ಎಲ್ಲಿ ಬಿಟ್ಟು ಅವಳು ಅವನ ಕಂಬಳಿಯನ್ನು ಹಿಡಿದೆಳೆದಳೋ ಎಂದೂ ಒಮ್ಮೆ ನೆನೆಸಿದ. ಆದರೆ ಅವಳು ಮತ್ತೆ ಮೆಟ್ಟಲಿಳಿಯುವಾಗ ಆದ ಕಾಲಿನ ಸಪ್ಪಳದಿಂದ ಅವಳು ಕೆಳಗಿಳಿದಳೆಂದು ತಿಳಿದು ಮೆಲ್ಲನೆ ಕಣ್ಣು ತೆರೆದು ತಲೆಯನ್ನು ಅತ್ತ ತಿರುಗಿಸಿದ.

ಆಕೆ ಅಂಗಳದಲ್ಲಿ ದೀಪವನ್ನಿಟ್ಟು ದೂರಕ್ಕೆ ಹೋದಳು.

ಮಾರಪ್ಪನಿಗೆ ಮೈ ಥರಥರ ನಡುಗತೊಡಗಿತು. ಒಮ್ಮೆಲೇ ಎದ್ದು ಅವಳಿದ್ದಲ್ಲಿಗೆ ಹೋಗೋಣವೆಂದು ಮಲಗಿದ್ದಲ್ಲಿಂದಲೇ ತಲೆ ಎತ್ತಿದ. ಅಷ್ಟರಲ್ಲಿ ಅವಳೆಲ್ಲಾದರೂ ಬೊಬ್ಬೆ ಹಾಕಿದರೆ ತನಗೇನಾದೀತೆಂಬ ಹೆದರಿಕೆ ಅವನನ್ನು ಜಗ್ಗಿ ಹಿಡಿಯಿತು. ಹೊನ್ನಮ್ಮನಿಗೆ ಸ್ವಲ್ಪ ವಯಸ್ಸು ಇಳಿದಿರಬಹುದು. ಆದರೂ ಆಕೆಯ ಮೈಕಟ್ಟು ಇನ್ನೂ ಆಕರ್ಷಣೀಯವಾಗಿಯೇ ಉಳಿದಿತ್ತು. ಮುಖದಲ್ಲಿ ನೆರಿಗೆ ಬಿದ್ದ ಛಾಯೆಯಿರಲಿಲ್ಲ. ಕೈಕಟ್ಟೆಗಳು ಹೃಷ್ಟಪುಷ್ಟವಾಗಿದ್ದುವು. ರೂಪವೂ ಅಷ್ಟೇನೂ ಕೆಟ್ಟದ್ದಲ್ಲ. ಮಾರಪ್ಪನಿಗೆ ಈ ಚಿತ್ರಗಳು ಒಮ್ಮೆಲೇ ಹೊಳೆದು ಹಾದು ಹೋದುವು.

ಅವನು ಈತನಕ ಹೆಂಗಸರನ್ನು ಪ್ರೇಮಿಸಿದುದಿಲ್ಲ. ಅವರೊಡನೆ ದೈಹಿಕ ಸಂಪರ್ಕವನ್ನಂತೂ ಬೆಳೆಸಿದವನೇ ಅಲ್ಲ. ಎಲ್ಲೋ ಕೆರೆಗಳಲ್ಲಿ ಸ್ನಾನಮಾಡುವಾಗ ಅವನು ಹೆಂಗಸರನ್ನು ಕದ್ದು ನೋಡಿದ್ದಿತ್ತು. ಅವರು ನೀರಿಗಿಳಿಯುವಾಗ ತೇಲಾಡುತ್ತಿದ್ದ ಸೀರೆಯ ಮಧ್ಯದಿಂದ

ಅವರ ದೇಹವನ್ನು ಅಸ್ಪಷ್ಟವಾಗಿ ಕಂಡಿದ್ದ. ಒಮ್ಮೆ ಒಬ್ಬ ಹುಡುಗಿ ನೀರಲ್ಲಿ ಮುಳುಗುತ್ತಿದ್ದವಳನ್ನು ಅವನು ನೀರಿನಿಂದೆತ್ತಿ ರಕ್ಷಿಸಿಯೂ ಇದ್ದ. ಆಗ ಅವಳ ದೇಹವಿಡೀ ಅವನ ಕೈಯೊಳಗೆ ಇದ್ದರೂ, ಆವೇಶದ ಭರದಲ್ಲಿ ಅವನಿಗೊಂದೂ ಅರಿವಾಗಿರಲಿಲ್ಲ.

ಹೊನ್ನಮ್ಮ ಇನ್ನೂ ಹಿಂದಿರುಗಿರಲಿಲ್ಲ. ದೀಪ ಉರಿಯುತ್ತಲೇ ಇತ್ತು.

ಅವಳು ಹಿಂದಿರುಗುವುದನ್ನು ನಿರೀಕ್ಷಿಸುತ್ತಿದ್ದಂತೆಯೇ ಅವನ ಮನಸ್ಸಿನಲ್ಲ ಭಾವನೆಗಳ ಹುಚ್ಚು ತರಂಗಗಳು ಮುಳುಗೇಳುತ್ತಿದ್ದುವು. ಅವನು ಈತನಕ ಹೆಂಗಸು-ಗಂಡಸು ಸಂಬಂಧದ ಕುರಿತು ಎಷ್ಟೋ ಮಾತಾಡುವುದನ್ನು ಕೇಳಿದ್ದ. ಅನೇಕ ಸಲ ಅವನ ಭಾವನೆಗಳೂ ಅದನ್ನು ಕೇಳಿ ಕೆದರಿದ್ದವು. ಆ ಸಂಪರ್ಕಕ್ಕಾಗಿ ಅವನು ಹಾತೊರೆಯುತ್ತಲೂ ಇದ್ದ. ಆದರೆ ಹೊನ್ನಮ್ಮ ಏನು ಮಾಡಿಯಾಳೆಂಬ ನಂಬಿಕೆ ಅವನಿಗಿಲ್ಲ.

ಹೊನ್ನಮ್ಮ ಸೊಂಟದ ವಸ್ತ್ರವನ್ನು ಸರಿಮಾಡುತ್ತ ಮೆಲ್ಲನೆ ಹಿಂತಿರುಗಿದಳು. ಮಾರಪ್ಪ ಪುನಃ ಕಣ್ಣು ಮುಚ್ಚಿದ.

ಅವಳು ಅವನ ಚಾಪೆಯನ್ನು ಹಾದು ಹೋಗುತ್ತಿದ್ದವಳು ಅಲ್ಲಿ ಒಂದು ಕ್ಷಣ ನಿಂತಳು. ಮಾರಪ್ಪ ಸ್ವಲ್ಪ ಕಣ್ಣು ತೆರೆದ. ಅವಳು ಅವನ ಮುಖವನ್ನೇ ನೋಡುತ್ತಿದ್ದಳು!

ಮಾರಪ್ಪನಿಗೆ ಏನುಮಾಡಬೇಕೆಂದು ತೋಚದಾಯಿತು. ಮನಸ್ಸು ಅವನ ಹಿಡಿತವನ್ನು ತಪ್ಪುವುದರಲ್ಲಿತ್ತು. ಒಮ್ಮೆಲೇ ಅವನು ಕಣ್ದೆರೆದ. ಹೊನ್ನಮ್ಮ ಮುಂದಕ್ಕೆ ಕಾಲು ಹಾಕಿದಳು. ಅವನ ಬಾಯಿಯಿಂದ 'ಹೂಂ' ಎಂಬ ಸ್ವರ ಮಾತ್ರ ಹೊರಟಿತು.

"ಏನು ಮಾರಪ್ಪ ನಿದ್ರೆ ಬರೋದಿಲ್ಲವೇ?" ಎಂದಾಕೆ ಕೇಳುತ್ತ ಬಾಗಿಲಿನ ಬಳಿಗೆ ನಡೆದಳು.

"ಹೂಂ. ಏನಪ್ಪ ಈ ತಗಣೆಗಳು, ಸುಸಿಗಳು! ದೇವರಿಗೂ

ಬೇಡ, ಈ ಕಾಟ !" ಮಾರಪ್ಪನೆಂದ.

ಅಷ್ಟರಲ್ಲಿ ಬಾಗಿಲಿನ ಕದ ಮರಳಿ ಮುಚ್ಚಿತು.

ಮಾರಪ್ಪ ಚಾಪೆಯಲ್ಲಿ ಹೊರಳಾಡತೊಡಗಿದ. ಇನ್ನು ತನಗೆ ನಿದ್ದೆ ಬಾರದೆಂದು ಅವನಿಗೆ ಖಚಿತವಾಯಿತು.

ಎಲ್ಲಕ್ಕಿಂತ ಹೆಚ್ಚಿನ ಅವನ ಸಮಸ್ಯೆ ಎಂದರೆ ಹೊನ್ನಮ್ಮ ಅವನ ಚಾಪೆಯ ಬಳಿ ನಿಂತು, ನಕ್ಕುದು. ಅವಳೇಕೆ ಹಾಗೆ ವರ್ತಿಸಬೇಕು ? ಅವಳಿಗೆ ತನ್ನ ಮೇಲೆ ಮನಸ್ಸಿರುತ್ತಿದ್ದರೆ, ತನ್ನನ್ನಾಕೆ ಕರೆಯಬಹುದಿತ್ತು. ಇಲ್ಲವೆ ಮುಟ್ಟಬಹುದಿತ್ತು. ಮೆಲ್ಲಗೆ ದೀಪ ನಂದಿಸಿ ತನ್ನ ಬಳಿಯಲ್ಲಿ ಇರಬಹುದಿತ್ತು. ಮತ್ತೇಕೆ ಅವಳು ಸುಮ್ಮನೆ ದಿಟ್ಟಿಸಬೇಕು ? ಅದೂ ಅವಳದೇನಾದರೂ ತೀರಾ ನಿರಾಸಕ್ತ, ನಿರ್ಮೋಹೀ ದೃಷ್ಟಿಯಲ್ಲ. ಅವಳ ಕಣ್ಣುಗಳಲ್ಲಿ ಏನೋ ಜಿಜ್ಞಾಸೆ ಹೊಳೆಯುತ್ತಿತ್ತು. ಮುಖದಲ್ಲಿ ಲವಲವಿಕೆಯ ಛಾಯೆಯಿತ್ತು. ಅವಳೇನಾದರೂ ತನಗೆ ತಗಣೆಗಳು ಕಚ್ಚಿಯುತ್ತವೋ ಇಲ್ಲವೇ ಸೊಳ್ಳೆಗಳು ಬಾಧಿಸುತ್ತವೋ ಎಂದು ಪರಿಶೀಲಿಸಿ ನೋಡುವ ಸಂಭವವಿಲ್ಲ.

ಅದೂ ತಾನು ಹೆಡ್ಡ. ಸಂಪೂರ್ಣ ಹೆಡ್ಡ. ಆಕೆ ಹಾಗೆ ನೋಡುತ್ತಿದ್ದಾಗಲೇ ಅವಳ ಕೈಯ್ಯಲ್ಲಿದ್ದ ದೀಪವನ್ನು ನಂದಿಸಿಬಿಡಬಹುದಿತ್ತು. ಮತ್ತೆ ಅವಳು ಗಲಭೆ ಎಬ್ಬಿಸುವುದು ಹೇಗೆ ? ಒಂದು ವೇಳೆ ಗಲಭೆ ಮಾಡಿದರೂ ಅವಳಿಗೇ ಅಪಮಾನ. ಮತ್ತೆ ಶಕ್ತಿಯಲ್ಲಂತೂ ಅವಳಿಗೆ ತನ್ನನ್ನು ನೂಕಿಕೊಂಡು ಹೋಗುವಷ್ಟು ತ್ರಾಣವಿಲ್ಲ. ಹೇಗಾದರೂ ಅವಳನ್ನು ಹಿಡಿದು ಬಗ್ಗಿಸಬಹುದಿತ್ತು.

ಈ ಹುಚ್ಚು ಭಾವನೆಗಳ ರೌರವವು ಮಾರಪ್ಪನ ಮನಸ್ಸಿನೊಳಗೆ ನೊಳಗುತ್ತಿದ್ದಾಗಲೇ ಮೊದಲನೆಯ ಜಾವದ ಕೋಳಿ ಕೂಗಿತು. ಸೊಳ್ಳೆಗಳ ಬಾಧೆ ಆಗ ಕಡಿಮೆಯಾಗುತ್ತ ಬಂದಿದ್ದರೂ ತಗಣೆಗಳು ಇನ್ನೂ ಒಂದೇಸಮನೆ ತಮ್ಮ ರಕ್ತಸಂಗ್ರಹಣ ಕೆಲಸವನ್ನು ನಡೆಸುತ್ತಲೇ ಇದ್ದುವು. ಚಾಪೆಯ ಮೇಲೆ ಕಂಬಳಿಯನ್ನು ಹಾಸಬಹು

ದೆಂದರೆ ಚಳಿಯು ಕಾಟಬೇರೆ. ಹೇಗೋ ಕಂಬಳಿಯನ್ನು ಹೊದ್ದು ಕೊಂಡು ಎದ್ದು ಚಾಪೆಯನ್ನು ಮಡಚಿಟ್ಟು, ಅಲ್ಲೇ ಬದಿಯಲ್ಲಿ ಕುಳಿತುಕೊಂಡ.

ಇನ್ನೂ ದಾರಿ ಕಾಣುತ್ತಿರಲಿಲ್ಲ. ಮನೆಯಲ್ಲಿ ಎತ್ತುಗಳಿಗೆ ಅಕ್ಕಚ್ಚು ಕುಡಿಸುವ ಕಾಲವಾಯಿತು. ಇಂದು ತನ್ನನ್ನು ಮನೆಯಲ್ಲಿ ಶಪಿಸದಿರಲಿಕ್ಕಿಲ್ಲವೆಂದು ನೆನೆದ. ಆದರೆ ಆಗಲೇ ಹೊರಟರೆ ಎಲ್ಲಾ ದರೂ ಹುಲಿ ದಾರಿಯಲ್ಲಿರಬಹುದೋ ಇಲ್ಲವೇ ಹಾವುಗಳು ಇರ ಬಹುದೋ ಎಂಬ ಹೆದರಿಕೆ ಅವನಿಗೆ ವಿಪರೀತವಿತ್ತು.

ಸ್ವಲ್ಪ ಸಮಯವಾದ ಬಳಿಕ ತನಿಯು ಎದ್ದು ಹೊರಗೆ ಬಂದು,

"ಏನೋ ಮಾರಪ್ಪ, ನಿನಗೆ ನಿದ್ದೆ ಬರುವುದಿಲ್ಲ, ಅಲ್ಲವೇ ?" ಎಂದು ಕೇಳಿದ, ನಗುತ್ತ.

"ಹಾಂ. ನೀನೊಂದು ಮೆಣಸಿನ ಚಾಪೆ ಕೊಡಬಹುದಿತ್ತು ಮಹರಾಯಾ, ಇದರ ಬದಲು. ಏನು ತಗಣೆಗಳು !"

"ಎಲ್ಲ ಗೊತ್ತಿದೆ ನನಗೆ. ನಿನ್ನ ಹಾಗೆ ಇದ್ದಾಗ ನನಗೂ ನಿನ್ನಂತೆಯೇ ನಿದ್ದೆ ಬರುತ್ತಿದ್ದಿಲ್ಲ."

"ಸಾಕು ತಮಾಷೆ. ನೀನು ಒಳ್ಳೆಯ ಮನುಷ್ಯ. ರಾತ್ರೆ ಒಂದು ಹುಲಿ ಬಂದು ನನ್ನನ್ನು ತಿಂದುಬಿಡಬಹುದಿತ್ತು. ಏನೋ ಅಂಗಳದಿಂದಲೇ ಹಿಂದಕ್ಕೆ ಹೋಯಿತು-"

"ಓಹ್ ! ನಿನ್ನಂಥ ಜವ್ವನಿಗನಿಗೆ ಹುಲಿಗಳ ಹೆದರಿಕೆ. ಹುಲಿ ಹಿಡಿದರೂ ನಿನಗಾಗಿ ಅಳಲು ಹೆಂಡತಿ ಮಕ್ಕಳಿಲ್ಲ."

"ಆಯಿತು ಮಹರಾಯಾ, ನಿನ್ನನ್ನಾದರೂ ಹುಲಿ ಕೊಂಡು ಹೋದರೆ, ನಿನ್ನನ್ನು ಬೇಡಿ ಹಿಂದೆ ತರಲು ನಿನ್ನ ಹೆಂಡತಿಯಿದ್ದಾಳೆ, ಹರಿಕಥೆಯ ಸಾವಿತ್ರಿಯಂತೆ....ಹೂಂ. ಸಾಕು ನಿನ್ನ ಉಪಚಾರ. ನಾನು ಮನೆಗೆ ಹೋಗಿಬಿಡುತ್ತೇನೆ" ಎಂದು ಮಾರಪ್ಪ ಕಂಬಳಿಯನ್ನು ಅಲ್ಲೇ ಹಾಕಿ ಹೊರಟ.

“ಇನ್ನು ದಾರಿತಪ್ಪಿ ಬೇರೆಯವರ ಮನೆಗೆ ಹೋದೀಯ” ಎಂದು ತನಿಯ ಗಹಗಹಿಸಿ ನಕ್ಕ.

“ಯಾರ ಮನೆಯೂ ಆದೀತು. ನಿನ್ನ ಮನೆ ಮಾತ್ರ ಇನ್ನು ನನಗೆ ಬೇಡಪ್ಪ” ಎಂದು ಮಾರಪ್ಪ ಉತ್ತರಿಸುತ್ತ ಅಂಗಳವನ್ನು ದಾಟಿ ಹೋಗಿಯೇ ಬಿಟ್ಟ.

## ೩

ಕೆಲವು ದಿನಗಳು ಕಳೆದ ಬಳಿಕ ತನಿಯನಲ್ಲಿಗೆ ಅವನ ತಂಗಿ ಸೀತು ಬಂದಳು. ಅವಳ ಗಂಡನ ಮನೆ, ಬೆಳತಂಗಡಿ ದಾಟಿ ಮತ್ತು ಹತ್ತು ಮೈಲು ದೂರದ ಬಂಗಾಡಿಯಲ್ಲಿ. ಬರುವಾಗ ಅವಳ ಎಂಟು ವರ್ಷ ಪ್ರಾಯದ ಮಗ ಚಿನ್ನುವೂ ಅವಳೊಡನೆ ಬಂದಿದ್ದ. ಎರಡು ಮೂರು ವರ್ಷಕ್ಕೊಮ್ಮೆ ಅವಳು ಹಾಗೆ ಬರುವುದು ವಾಡಿಕೆಯಾಗಿತ್ತು. ಅಂತೆಯೇ ತನಿಯನೂ ಮಳೆಗಾಲದ ಬೇಸಾಯ ಮುಗಿದೊಡನೆ ಒಮ್ಮೊಮ್ಮೆ ಅವಳಲ್ಲಿಗೆ ಹೋಗಿಬರುವುದಿತ್ತು.

ಅಂದರೆ ಅವರೊಳಗೇನಾದರೂ ಅಷ್ಟೊಂದು ಗಾಢವಾದ ಪ್ರೇಮವಿತ್ತೆಂದು ಹೇಳಲಾಗದು. ಚಿಕ್ಕಂದಿನಲ್ಲೇನೋ ಅವರಿಬ್ಬರೂ ಒಟ್ಟಿಗೆ ಆಡುತ್ತ ನಲಿಯುತ್ತ ದಿನಗಳೆದಿದ್ದರು. ಆ ಬಳಿಕ ಸೀತುವಿನ ದಾರಿ ಬೇರೆಯಾಯಿತು, ತನಿಯನದು ಬೇರೆಯಾಯಿತು. ಮತ್ತೆ ಅವರು ಒಬ್ಬರಿಗೊಬ್ಬರು ಕಾಣಸಿಗುವುದೆಂದರೆ ಏನಾದರೂ ಮದುವೆ-ಮುಂಜಿಗಳಲ್ಲಿ ಇಲ್ಲವೇ ಅಂತ-ಆಯನಗಳಲ್ಲಿ. ಹೀಗೆ ವರ್ಷಕ್ಕೊಮ್ಮೆಯೋ ಎರಡು ವರ್ಷಕ್ಕೊಮ್ಮೆಯೋ ನೆಂಟರ ಹಾಗೆ ಹೋದರೆ, ನಾಲ್ಕೈದು ದಿನಗಳಿಗಿಂತ ಹೆಚ್ಚಿಗೆ ಉಳಕೊಳ್ಳಲಾರರು. ತನಿಯನಿಗಂತೂ ಮನೆಯಲ್ಲಿ ಹೆಂಡತಿಯೊಬ್ಬಳೇ ಎನ್ನುವ ಒಳ್ಳೆಯ ನೆವನವೂ

ಇತ್ತು. ಮತ್ತೆ ಹಾಗೆ ಹೋದರೂ, ನಡೆಯುವ ಆಯಾಸವೊಂದಲ್ಲದೆ ಬೇರೇನೂ ಪರಿಣಾಮವಿಲ್ಲ. ಏನೋ ಮೊದಲನೆಯ ದಿನ ನೆಂಟ ರೆಂದು ನಲಿಯುವರು. ಒಳ್ಳೆಯ ಪದಾರ್ಥಗಳನ್ನು ಮಾಡುವರು. ಒಂದು ಜೋಳಿಯನ್ನು ಕೊಡುವ್ಯುವರು. ಮತ್ತೆ ಮರುದಿನದಿಂದ ಎಂದಿನಂತೆಯೇ ಉಪಚಾರ ನಾಗುವುದು. ಏನೆಂದರೂ ವಿರಾಮ ಇಲ್ಲಿಯೂ ಸಿಗದು. ಅಲ್ಲಿ ಅವರೇನಾದರೂ ಕೆಲಸ ಮಾಡುತ್ತಿದ್ದರೆ ಅವರಿಗೆ ಸಹಾಯ ಮಾಡಬೇಕು. ಇಲ್ಲದೇ ಸುಮ್ಮನೆ ಮನೆಯಲ್ಲೇ ಕುಳಿತುಕೊಂಡರೂ ಹಗಲಲ್ಲಿ ಮನೆಯಲ್ಲಿ ಯಾರೊಡನೆಯೂ ಮಾತಾ ಡಲು ಸಾಧ್ಯವಿಲ್ಲ. ಅವರೆಲ್ಲ ಕೆಲಸಕ್ಕೋ ಪೇಟೆಗೋ ಹೋಗಿ ಬಿಡುವರು.

ಸೀತು ಬಂದ ದಿನ ತನಿಯನಲ್ಲೂ ಉಪಚಾರ ನಡೆಯಿತು. ಹೊನ್ನಮ್ಮ ಒಂದು ಕೋಳಿ ಮರಿಯನ್ನು ಕೊಂದಳು. ಅತ್ತಿಗೆಗೆ ಮತ್ತು ಅಳಿಯನಿಗೆ ಚೆನ್ನಾಗಿ ಬಡಿಸಿ ಗಂಡನಿಗೂ ಹಾಕಿದಳು. ಅಂದು ರಾತ್ರಿಯಿಡೀ ಬಂಗಾಡಿಯ ಸುದ್ದಿಯೇ, ಅವರಲ್ಲಿನ ಬಾಯಿಯಲ್ಲೂ. ಸೀತುವಿನ ಮಗಳಿಗೆ ಮಾತು ಬಂದಿದೆಯಂತೆ. ಅದೇ ಎಂಟನೆ ಮದುವೆ ಯಾಗಲು ಸೀತುವಿನ ಗಂಡನ ಅಕ್ಕ ಸತ್ತುದರಿಂದಾಗಿ ಸಾಧ್ಯವಿಲ್ಲ ವಂತೆ. ಬಂಗಾಡಿಯ ರಥೋತ್ಸವ ಎಂದಿನಂತೆ ಸಂಭ್ರಮದಿಂದಲೇ ನಡೆಯಿತಂತೆ. ಕುದುರೆಮುಖಕ್ಕೆ ಎಂದಿನಂತ ಎತ್ತುಗಳನ್ನು ಮಳೆಗಾಲದಲ್ಲಿ ಕೊಂಡುಹೋಗುವುದಿಲ್ಲವಂತೆ.

ಬದಲಾಗಿ ಹೊನ್ನಮ್ಮನೂ ಅವಳ ಊರ ಸುದ್ದಿ ಸಮಾಚಾರ ಗಳನ್ನು ಹೇಳಿದಳು. ಊರ ದೇವಸ್ಥಾನದ ರಥೋತ್ಸವ, ಧನಿಗಳಲ್ಲಾದ ಉಪನಯನ, ಹರಿಕಥೆ ಇತ್ಯಾದಿಗಳ ಸುದ್ದಿಗಳನ್ನು ಅವಳು ವರ್ಣಿಸಿ ದಳು. ತನಿಯನೂ ಅವರ ಮಾತುಕಥಗಳಲ್ಲಿ ಸ್ವಲ್ಪ ಭಾಗವಹಿಸಿದ.

ಮರುದಿನ ತನಿಯನೆದ್ದು ತಂಗಳನ್ನ ಉಂಡು ರಸ್ತೆಯ ಕೆಲಸಕ್ಕೆ ಹೋದ. ಸೀತುವಿನ ಮಗನೂ ಅವನನ್ನು ಗದ್ದೆಯ ಅಂಚಿನವರೆಗೆ

ಹಿಂಬಾಲಿಸಿದ. ತನಿಯ ಅವನನ್ನು ಅಲ್ಲಿಂದ ಹಿಂದೆ ಹೋಗಹೇಳಿ ತಾನು ಮುಂದರಿದ. ಅವನಿಗೆ ಆಗಲೇ ಕೆಲಸಕ್ಕೆ ಸಮಯವಾಗಿತ್ತು.

ಸೀತುವಿನ ಮಗ ಚಿನ್ನು ಮರಳಿ ಮನೆಗೆ ಬಂದವ ಮನೆಯೊಳಗೆ ಅಡ್ಡಾಡುತ್ತಿದ್ದ. ಕೊನೆಗೆ ಹಟ್ಟಿಯ ಬಳಿ ಹೋದ. ಅಲ್ಲಿದ್ದ ಕೋಣಗಳನ್ನು ಕಂಡು ಅವನ ಮೈ ಪುಳಕವಾಯಿತು. ಅವುಗಳ ಮುಖವನ್ನು ಸವರಿದ. ಕೊಂಬುಗಳನ್ನು ಮುಟ್ಟಿದ. ಅಷ್ಟರಲ್ಲಿ ಒಂದು ಕೋಣ ಕೋಪದಿಂದ ಬುಸುಗುಟ್ಟಿ ಅವನನ್ನು ಹಾಯಲು ಮುಂದೆ ನೆಗೆಯಿತು. ಚಿನ್ನು ಹಿಂದೆ ಹಾರಿದರೂ ಅದರ ಮುಸುಡಿ ಅವನ ಕಾಲಿಗೆ ತಗಲಿತು. ಅವನು ಒಂದು ಕೋಲನ್ನು ತಂದು ಅದಕ್ಕೆರಡು ಹೊಡೆದ.

ಹೊನ್ನಮ್ಮ ಪೆಟ್ಟು ಹೊಡೆದ ಶಬ್ದವನ್ನು ಕೇಳಿ ಒಳಗಿನಿಂದ ಇಣಕಿ ನೋಡಿದಳು. ಅವಳಿಗೆ ಆಗ ಸ್ವಲ್ಪ ಕೋಪ ಬಂತು. ಆದರೆ ಚಿನ್ನುವಿಗೆ ಬಯ್ಯಲು ಅವಳಿಗೆ ಮನಸ್ಸಾಗಲಿಲ್ಲ. ಬದಲಾಗಿ ಸೀತುವಿನೊಡನೆ ಚಿನ್ನುವನ್ನು ಮನೆಗೆ ಕರೆಯಲು ಹೇಳಿದಳು. ಸೀತು ಕರೆದಳು.

ಚಿನ್ನುವಿಗೆ ಇದರಿಂದ ಅಸಮಾಧಾನವಾಯಿತು. ಆದರೂ ತಾಯಿ ಕರೆದಾಗ ಅವನು ಒಳಗೆ ಹೋಗದಿರಲಿಲ್ಲ. ಎತ್ತು ಕೋಣ ಗಳೆಂದರೆ ಅವನಿಗೆ ಬಹಳ ಹುಚ್ಚು. ಅವನ ಮನೆಯಲ್ಲಿ ದಿನಕ್ಕೆ ಮೂರು ನಾಲ್ಕು ಬಾರಿ ಹಟ್ಟಿಗೆ ಅವನು ಹೋಗದಿಲ್ಲ. ಅಲ್ಲಿ ಕರುಗಳನ್ನು ಹೊರಗೆ ಬಿಟ್ಟು ಅವನ್ನು ಬಾಲ ಹಿಡಿದು ಓಡಿಸುತ್ತಿದ್ದ. ಹಾಗೆಯೇ ದೊಡ್ಡ ಕೋಣಗಳ ಮೂಗಿನ ಹಗ್ಗವನ್ನು ಹಿಡಿದು ಜಗ್ಗುವ ಕರುಗಳಿಗೆ ಹೆಸರಿಡುವವ ಅವನೇ. ಹಾಗೆಯೇ ಮಾವನ ಕೋಣಗಳನ್ನು ನೋಡಿಯೂ ಮೊದಲು ಅವನಿಗೆ ಬಹಳ ಸಂತೋಷ ವಾಗಿತ್ತು. ಅವುಗಳಿಗೂ ನಾಲ್ಕು ಪೆಟ್ಟು ಹೊಡೆದು ಹಿಂದೆ ಮುಂದೆ ನಡೆಸಬೇಕೆಂದಿದ್ದ. ಅವುಗಳ ಗರ್ವವನ್ನು ಪರೀಕ್ಷಿಸಬೇಕೆಂದಿದ್ದ.

ಈಗ ಹೊನ್ನಮ್ಮ ಮೆಲ್ಲನೆ ತನ್ನ ತಾಯಿಯ ಬಳಿ ದೂರು ಕೊಟ್ಟದ್ದೂ ಅವನಿಗೆ ಕೇಳಿತ್ತು.

ಹಾಗೆ ಅವನು ಹಟ್ಟಿಯಿಂದ ಹೋದವ ಬಂದು ಮರದಡಿಯಲ್ಲಿ ಕುಳಿತ ಸೀತು ಎಷ್ಟು ಕರೆದರೂ ಅವನಲ್ಲಿಂದ ಕದಲಲಿಲ್ಲ. ಬಿಸಿಲು ಒಂದೇ ಸವನೆ ಹೆಚ್ಚುತ್ತಲಿತ್ತು. ಅವನ ಮುಖದಲ್ಲಿ ಬೆವರಿನ ಬಿಂದುಗಳು ಹರಿಯ ತೊಡಗಿದ್ದುವು. ಆದರೂ ಅವನು ಮುಚ್ಚಿದ್ದ ತನ್ನ ಬಾಯಿಯನ್ನು ತೆರೆಯಲಿಲ್ಲ.

ಹೊನ್ನಮ್ಮ ಮಧ್ಯಾಹ್ನದ ಅಡುಗೆ ಮುಗಿಸಿ ಅವನ ಬಳಿ ಹೋದಳು. ಆದರೆ ಅವನು ಅವಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ನಿಜವಾಗಿ, ಅವಳಿಗೆ ತನ್ನ ಮೇಲೂ ಅವನು ಕೋಪಿಸಿಕೊಂಡಿದ್ದನೆಂಬ ಅರಿವಿಲ್ಲ. ಊಟಕ್ಕಾಯಿತು, ಒಳಗೆ ಬರಬೇಕೆಂದು ಹೇಳಿದಳು. ಅವನು ಮಾತನಾಡದಿದ್ದುದನ್ನು ಕಂಡು ಸಲುಗೆಯಿಂದ ಅವನ ಕೈಗಳನ್ನು ಹಿಡಿದೆಳೆದಳು. ಆದರೂ ಚಿನ್ನು ಏಳಲಿಲ್ಲ.

ಹೊನ್ನಮ್ಮನಿಗೆ ಅಷ್ಟರಲ್ಲೇ ಸಾಕೋ ಸಾಕಾಯಿತು. ಈ ಚಿಕ್ಕ ಮಕ್ಕಳಿಗೂ ಏನು ಛಲ! ಎಷ್ಟು ಹಠ! ಎಂದು ಶಪಿಸಿದಳು. ಅವನು ಬೆಳಗ್ಗೆ ಕೋಣಗಳಿಗೆ ಹೊಡೆಯುತ್ತಿದ್ದ ದೃಶ್ಯ ಅವಳ ಕಣ್ಣ ಮುಂದೆ ಇತ್ತು. ಅವಳು ಅದನ್ನು ಮರೆಯಲಾರದಾದಳು.

ಅವಳು ಹಿಂದೆ ಬರುತ್ತಿದ್ದಾಗ ಸೀತು ಮನೆಯಿಂದ ಕೆಳಗಿಳಿದಳು. ಅವಳ ಕೈಯ್ಯಲ್ಲೊಂದು ಚಿಕ್ಕ ಬೆತ್ತವಿತ್ತು.

"ಏನು ಅತ್ತಿಗೆ!" ಹೊನ್ನಮ್ಮ ಉದ್ಗರಿಸಿದಳು. "ಈ ಚಿಕ್ಕ ಮಕ್ಕಳಿಗೂ ಏನು ಹಠ! ನಾನು ಅವನನ್ನು ಬಾ ಎಂದು ಕಾಲೊಂದು ಹಿಡಿಯಲಿಲ್ಲ. ಇನ್ನು ನೀನೇ ಆಗಬೇಕಷ್ಟೆ."

"ಅವನಿಗೆ ಹಠ ಅಲ್ಲ, ಅವನ ಬೆನ್ನು ತುರಿಸುತ್ತದೆ. ಪೆಟ್ಟು ಬೀಳದೆ ಬಹಳ ಸಮಯವಾಯಿತು. ಈಗ ಅವನಿಗೆ ಬುದ್ಧಿ ಕಲಿಸುತ್ತೇನೆ."

ಎನ್ನುತ್ತ ಸೀತು ಮುಂದರಿದಳು. ಆದರೆ ಚಿನ್ನು ಅವಳನ್ನು ಕಂಡು ಏಳಲಿಲ್ಲ.

ಸೀತು ಹೋದನಳೇ ಚಿನ್ನುವಿಗೆ ಎರಡು ಪೆಟ್ಟನ್ನು ಕೊಟ್ಟಳು. ಅವನ ಕಣ್ಣಿನಲ್ಲಿ ನೀರು ಬಂತು ವಿನಃ ಅವನು ಅಳಲಿಲ್ಲ. ಅವನು ಎದ್ದು ಹೋಗಲೂ ಇಲ್ಲ.

" ಹಂ ! ನಿನ್ನ ಗರ್ವವೇ ! ಹೋದಲ್ಲಿಯೂ ನಿನ್ನ ಛಲ ! ನಿನ್ನ ಭೂತ ಬಿಡಿಸದಿರಲಾರೆ "

ರಪ್. ರಪ್. ರಪ್. ರಪ್........

" ನಾನೇನಾದರೂ ಕೋಣಗಳನ್ನು ಕದ್ದುಕೊಂಡು ಹೋಗಲು ಅಣಿ ಮಾಡಲಿಲ್ಲ," ಕೊನೆಗೆ ಚಿನ್ನು ಅತ್ತ.

ರಪ್. ರಪ್....

" ಇಗೋ ಸುಮ್ಮಗೆ ನನಗೆ ಹೊಡೆಯಬೇಡ. ನೀನು ಯಾರ ಯಾರ ಮಾತನ್ನು ಕೇಳಿ ಹೀಗೆ ಮಾಡುತ್ತೀಯಾ? ನಾನು ಮನೆಯಲ್ಲೇ ಇದ್ದು ಬಿಡುತ್ತಿದ್ದೆ. ಅಯ್ಯೋ ನೋವಾಗುತ್ತದೆ !"

ರಪ್ ರಪ್ ರಪ್....

"ಆಯಿತಪ್ಪ, ನಾ ಮನೆಗೇ ಹೋಗಿಬಿಡ್ತೇನೆ. ಹೊಡೀಬೇಡ. ನೋವಾಗ್ತದೆ. ಹಾಯ್ ಹಾಯ್...."

ರಪ್ ರಪ್ ರಪ್....

"ಅಯ್ಯೋ ಅಯ್ಯೋ"

"ಒಳ್ಳೆಯ ಮಾತಿನಲ್ಲಿ ಮನೆಗೆ ಬಂದು ಊಟಮಾಡು. ನಿನಗೆ ಕೋಣಗಳೇನೂ ಕಡಿಮೆಯಾಗಿಲ್ಲ."

"ನಾ ಅತ್ತೆಯಿದ್ದಲ್ಲಿ ಊಟ ಮಾಡಲಾರೆ."

"ಥೂ ಬಾಯಿಮುಚ್ಚು !"

ರಪ್ ರಪ್ ರಪ್....

"ಅಯ್ಯೋ ಅಯ್ಯೋ"

ರಪ್ ರಪ್....

"ಆಯಿತಪ್ಪ. ಊಟ ಮಾಡ್ತೇನೆ. ನೀನೊಮ್ಮೆ ಹೊಡಿಯೋ ದನ್ನು ನಿಲ್ಲಿಸಿಬಿಡು. ನನ್ಗೆ ಜೀವವಿಲ್ಲವೆ ?"

ರಪ್....

ಸೀತು ಚಿನ್ನುವನ್ನು ಕಿವಿಯಲ್ಲಿ ಹಿಡಿದು ಎಳೆದುಕೊಂಡು ಮನೆ ಯೊಳಗೆ ಹೋದಳು. ಹೊನ್ನಮ್ಮ ಜಗಲಿಯಲ್ಲಿ ನಿಂತುಕೊಂಡು ನಸುನಗುತ್ತಿದ್ದಳು. ಸೀತು ಅವಳನ್ನೊಮ್ಮೆ ನೋಡಿದಳು.

ಚಿನ್ನು ಬಿಕ್ಕಿ ಬಿಕ್ಕಿ ಅಳತೊಡಗಿದ. ಅದೂ ಅತ್ತೆಯ ನಗು ವನ್ನು ನೋಡಿಯಂತೂ ಅವನ ಕೂಗು ಉಲ್ಬಣಗೊಂಡಿತು. ಚಿನ್ನು ಕೈಕಾಲುಗಳಲ್ಲಿ ಬೆತ್ತದ ಹೊಡೆತದಿಂದ ಉರಿಯುತ್ತಿದ್ದುವು. ಸೀತು ಬಡಿಸಿದ್ದನ್ನು ಕಣ್ಣೀರು ಸುರಿಸುತ್ತಲೇ ಅವನು ಊಟಮಾಡಿದ.

"ಹ್ಹ !" ಹೊನ್ನಮ್ಮ ಉದ್ಗರಿಸಿದಳು. "ಸುಮ್ಮನೆ ಊಟ ಮಾಡುವುದನ್ನು ಬಿಟ್ಟು ಇಷ್ಟೆಲ್ಲ ಮಾಡಿದನಲ್ಲ !"

"ಅವನಿಗೆ ಹಾಗೆಯೇ. ಸಿಕ್ಕುವ ಮರ್ಯಾದೆ ಸಿಗಲೇಬೇಕು."

ಸೀತು ಹೀಗೆಂದು ನಕ್ಕಳು. ಆದರೆ ಸ್ವಲ್ಪ ಸಮಯದಲ್ಲೇ ಅವಳ ಕಣ್ಣುಗಳು ಚಿನ್ನುವಿನ ಬೆನ್ನಿನ ಮೇಲೆ ಹರಿದುವು. ಅದರ ಮೇಲಿದ್ದ ಗಾಯಗಳನ್ನು ನೋಡಿ ಅವಳಿಗೆ ಒಳಗಿಂದೊಳಗೇ ಕನಿಕರ ವಾಯಿತು. ಎಷ್ಟೆಂದರೂ ಆತನೇನೂ ಅಂಥ ಹಿರಿದಾದ ತಪ್ಪನ್ನು ಮಾಡಿರಲಿಲ್ಲ. ಏನೋ ಕೋಣಗಳ ಮೇಲಿನ ಪ್ರೀತಿಯಿಂದ ಅವುಗಳ ಬಳಿಗೆ ಹೋಗಿರಬಹುದು. ಅವುಗಳಿಗೆ ಎರಡು ಹೊಡೆದಿರಲೂ ಬಹುದು. ಆದರೆ ಅಷ್ಟರಲ್ಲೇ ಕೋಣಗಳೇನೂ ಸತ್ತುಹೋಗ ಲಾರವು. ಕೋಣಗಳಿಗೆ ಪೆಟ್ಟಿನ ಬಲವೆಂಬ ಗಾದೆಯೇ ಇದೆ. ಹೀಗೆಂದು ಸೀತು ಮತ್ತೆ ನೆನೆದಳು.

ಹೊನ್ನಮ್ಮ ಇನ್ನೂ ನಗುತ್ತಲೇ ಇದ್ದಳು.

"ಬಹಳ ನೋವಾಗುತ್ತದೆಯೇ !" ಎಂದಳಾಕೆ.

ಸೀತು ಮಾತಾಡಲಿಲ್ಲ. ಹೌದು, ಆಕೆ ಯೋಚಿಸಿದಳು. ಚಿನ್ನುವಿಗೆ ಬೆತ್ತದ ಪೆಟ್ಟುಗಳು ವಿಪರೀತವಾಗಿವೆ. ಕೆಲವು ಕಡೆ ರಕ್ತವೂ ಜಿನುಗುತ್ತಿತ್ತು. ಅವನ ಅಪರಾಧಕ್ಕೆ ತಕ್ಕ ಶಿಕ್ಷೆಯಲ್ಲ ಇದು.

'ಆದರೂ ಹೊನ್ನಮ್ಮ ಇನ್ನೂ ನಗುತ್ತಲೇ ಇರಬೇಕೆ? ಅವಳಿಗೇಕೆ ಇಷ್ಟು ಆನಂದ? ಆ ಮುದಿ ಕೋಣಗಳಿಗೆ ಎರಡು ಹೊಡೆದುದನ್ನು ನೋಡಿ ಅಷ್ಟು ಕನಿಕರ ಸೂಚಿಸಿದವಳು, ಈಗ ಇಂಥ ಬಂಗಾರದಂಥ ಹುಡುಗನಿಗೆ ಪೆಟ್ಟು ಬಿದ್ದುದನ್ನು ಕಂಡು ಅವಳೀಗ ನಗಬೇಕೆ? ಇಲ್ಲೇನೂ ತಮಾಷೆಯಿಲ್ಲ. ಮಗುವಿಗೆ ನೋವಾಗಿದೆ. ಅದೂ ಬಹಳ ಹೆಚ್ಚು ನೋವಾಗಿದೆ. ಇದರಿಂದ ಯಾರಿಗೂ ಕನಿಕರವಾಗಬೇಕು. ಈ ಹೊನ್ನಮ್ಮನದು ಎಂಥ ಹೃದಯ! ಏನೋ ನೆವ ಹುಡುಕಿ, ತನ್ನನ್ನು ಅವನಿಗೆ ಹೊಡೆದು ಹಿಂಸಿಸಲು ಪ್ರೇರೇಪಿಸಿದಳು. ತಾನು ಅವನಿಗೆ ಮನೆಯಲ್ಲಿ ಕೂಡಾ ಹೊಡೆದವಳಲ್ಲ....

'ಎಂಥ ಮುದ್ದು ಮಗ! ಕಣ್ಣುಗಳು ಅತ್ತು ಅತ್ತು ಕೆಂಪಾಗಿವೆ. ಇನ್ನೂ ಕಣ್ಣೀರು ಮುಖದಲ್ಲಿ ಹರಿಯುತ್ತಿದೆ. ಆದರೆ ಥೂ! ಆಕೆ ಇನ್ನೂ ನಗುತ್ತಿದ್ದಾಳೆ, ಅವನಿಗೆ ನೋವಾದುದು ಅವಳಿಗೆಷ್ಟು ಸಂತೋಷವನ್ನುಂಟುಮಾಡಿದೆ! ಅವನ ಅವಸ್ಥೆಯನ್ನು ಕಂಡು ಕಲ್ಲು ಕೂಡಾ ಕಣ್ಣೀರಿಟ್ಟೀತು!....

'ಹೌದು, ಅವಳಿಗೆ ಮಕ್ಕಳ ಮನಸ್ಸು ಹೇಗೆ ತಿಳಿಯಬೇಕು. ಅವಳಿಗೆ ಒಂದಾದರೂ ಮಗುವಿದೆಯೆ? ಅವಳೇ ಒಂದು ಮಗು. ತನಗೆ ಮಕ್ಕಳಿಲ್ಲದಿದ್ದರೂ, ಇತರರ ಮಕ್ಕಳನ್ನಾದರೂ ಪ್ರೀತಿಸಬಾರದೆ? ಅವಳಿಗಿನ್ನೂ ಅಂಥ ಅಂತಃಕರಣ ಮೂಡಿಲ್ಲ. ಅವಳು ಮಗುವನ್ನು ತನ್ನ ಹೊಟ್ಟೆಯಲ್ಲಿ ಹೊತ್ತು ಸಾಕಿಸಲಹಿದ್ದರೆ ಹೀಗೆ ಮಾಡುತ್ತಿದ್ದಿಲ್ಲ. ಎಂಥ ಹೆಂಗಸು!' ಎಂದು ಸೀತು ಯೋಚಿಸಿದಳು.

ಚಿನ್ನುವಿನ ಊಟ ಮುಗಿಯಿತು. ಅವನು ಹೊರಗೆ ಹೋಗಿ ಜಗಲಿಯಲ್ಲಿ ಮಲಗಿಕೊಂಡ.

ಹೊನ್ನಮ್ಮ ಮತ್ತೆ ಅತ್ತಿಗೆಯೊಡನೆ ಊಟ ಮಾಡಿದಳು. ಸೀತುವಿಗೆ ಅವಳೊಡನೆ ಹೆಚ್ಚು ಮಾತನಾಡಲಾಗಲಿಲ್ಲ. ಆದರೂ ಮಾತಿಗೆ ಮಾತು ಬೆಳೆಯುತ್ತ ಚಿನ್ನುವಿನ ಸುದ್ದಿಯೂ ಬಂತು. ಸೀತು ಅವನು ಬಹಳ ಒಳ್ಳೆಯವನೆಂದಳು.

"ಎಷ್ಟೆಂದರೂ ಚಿಕ್ಕಮಕ್ಕಳಿಗೆ ನಾವು ಹೆಚ್ಚಿಗೆ ಸಲಿಗೆ ಕೊಡಬಾರದು ಅತ್ತಿಗೆ. ಮತ್ತೆ ಅವು ತಲೆಗೆ ಹತ್ತುತ್ತವೆ" ಎಂದಳು ಹೊನ್ನಮ್ಮ.

"ಒಹ್! ನನಗೆ ಇವನೇನಾದರೂ ಒಬ್ಬನೇ ಮಗನಲ್ಲ, ಮಕ್ಕಳನ್ನು ಸಾಕಿ ಸಲಹಲಿಕ್ಕೆ ನನಗೆ ಗೊತ್ತಿರುವಾಗ ಅವರನ್ನು ಹೇಗೆ ನಡೆಸಿಕೊಳ್ಳಬೇಕೆಂಬುದೂ ನನಗೆ ಗೊತ್ತಿಲ್ಲದಿರಲಿಕ್ಕಿಲ್ಲ."

"ಅಲ್ಲ, ನಾನು ಹೀಗೆ ಹೇಳಿದೆ. ನನ್ನ ತಮ್ಮನೊಬ್ಬ ಹೇಳುವವರು ಕೇಳುವವರು ಇಲ್ಲದೆ ಬೆಳೆದು ಎಲ್ಲಿಗೋ ಹೋಗಿದ್ದಾನೆ."

"ಹೂಂ. ಹೋಗುವವರು ಹೋಗುತ್ತಾರೆ, ಇರುವವರು ಇರುತ್ತಾರೆ. ಅವರವರ ಹಣೆಯಲ್ಲಿ ಬರೆದುದಕ್ಕೆ ನಮ್ಮಿಂದ ಏನು ಮಾಡಲಾದೀತು? ನಮ್ಮ ಕೆಲಸ ನಾವು ಮಾಡಿದರಾಯಿತು."

"ಅಲ್ಲ ಮಕ್ಕಳಿಗೆ ಹೆಚ್ಚು ಸಲಿಗೆ ಕೊಡುವುದು...."

"ನನಗೆ ಗೊತ್ತಿದೆಯೆಂದೆನಲ್ಲ?" ಸೀತು ಕೋಪದಲ್ಲಿ ಊಟದ ಬಟ್ಟಲನ್ನು ದೂರಕ್ಕೆ ದೂಡಿದಳು. "ಒಂದಲ್ಲ, ಎರಡಲ್ಲ, ಮೂರು ಮಕ್ಕಳನ್ನು ನಾನು ಸಾಕಿ ಬೆಳೆಸಿದ್ದೇನೆ. ಅವರನ್ನು ಹೇಗೆ ಪ್ರೀತಿಸಬೇಕೆಂದು ಯಾರೂ ಹೇಳಿಕೊಟ್ಟಿಲ್ಲ. ನೀನು ಅದನ್ನು ವಿವರಿಸುವ ಅಗತ್ಯವೂ ಇಲ್ಲ. ನೀನೆಷ್ಟು ಮಕ್ಕಳನ್ನು ಸಲಹಿದ್ದೀ ಎಂದು ನನಗೆ ಗೊತ್ತಿರದಿದ್ದರಲ್ಲವೆ?"

ಒಮ್ಮೆಯೇ ಹೊನ್ನಮ್ಮನಿಗೆ ಈ ಸಂಭಾಷಣೆಯು ವಿರಸ ಧಾಟಿಯನ್ನು ಕಂಡು ದಂಗು ಬಡೆದಂತಾಯಿತು. ಅವಳು ನಿಜವಾಗಿಯೂ ಚಿನ್ನುವನ್ನಾಗಲೀ ಸೀತುವನ್ನಾಗಲೀ ದ್ವೇಷಿಸಿ ಮಾತಾಡಿರಲಿಲ್ಲ.

ಚಿನ್ನು ಕೋಣಗಳಿಗೆ ಹೊಡೆದುದಕ್ಕಾಗಿ ಮಾತ್ರ ಅವಳಿಗೆ ಅವನ ಮೇಲೆ ತುಸು ಕೋಪವಿತ್ತು. ಅದಾದ ಬಳಿಕ ಅವನು ಮನೆಯೊಳಗೆ ಬಾರದೆ ಹೊರಗೆ ಕುಳಿತುಕೊಂಡಿದ್ದಾಗ ಅವನ ಛಲವನ್ನು ಕಂಡು ಆಕೆಗೆ ತುಸು ಜಿಗುಪ್ಸೆ ಹುಟ್ಟಿತ್ತು. ಮತ್ತೆ ಸೀತು ಅವನಿಗೆ ಪೆಟ್ಟು ಕೊಟ್ಟಾಗ ಅವಳಿಗೆ ಒಂದು ರೀತಿಯ ಸಂತೋಷ, ಸಂತೋಷ ಕ್ಕಿಂತಲೂ ಹೆಚ್ಚಿಗೆ ತಮಾಷೆಯಾಗಿತ್ತು. ಆಮೇಲೆಯೂ ಅವಳು ಸೀತುವಿನೊಡನೆ ಸರಸವಾಗಿಯೇ ಸಂಭಾಷಿಸುತ್ತಿದ್ದಳು. ಆದರೆ ಒಮ್ಮೆಲೇ ಸೀತು ಕೋಪವನ್ನು ತಾಳಿದುದು ಅವಳಿಗೆ ಅರ್ಥವಾಗ ಲಿಲ್ಲ. ಅವಳೇನೂ ಅಂಥ ಉದ್ರೇಕಿಸುವ ಮಾತುಗಳನ್ನು ಮನಸ್ಸಿನಲ್ಲಿ ಕೂಡಾ ನೆನೆಸಿರಲಿಲ್ಲ.

ಆಕೆಗೆ ಫಕ್ಕನೆ ಉತ್ತರ ಕೊಡಲಾಗಲಿಲ್ಲ. ಬದಲಾಗಿ ಅವಳು ಅಳತೊಡಗಿದಳು.

ಇಬ್ಬರ ಊಟವೂ ಅಲ್ಲಿಗೆ ಮುಗಿಯಿತು. ಬಟ್ಟಲಲ್ಲಿ ಉಳಿದ ಅನ್ನವನ್ನು ಹೊರಗೆ ಅಕ್ಕಚ್ಚಿನ ಮರಿಗೆಗೆ ಇಬ್ಬರೂ ಬಿಸುಟರು. ಸೀತು ಜಗಲಿಯಲ್ಲಿ ಒಂದು ಮೂಲೆಯಲ್ಲಿ ಗೋಡೆಗೆ ಒರಗಿ ಕುಳಿತು ಕೊಂಡಳು. ಹೊನ್ನಮ್ಮ ಅಡುಗೆಯ ಕೋಣೆಯಲ್ಲಿ ಕುಳಿತಳು. ಚಿನ್ನು ಅಲ್ಲೇ ನಿದ್ದೆ ಹೋದ.

ಹೊನ್ನಮ್ಮನ ಮನಸ್ಸು ಉಲ್ಬಣಗೊಂಡಿತ್ತು. ತನಗೆ ಮಕ್ಕಳು ಇಲ್ಲದುದು ಒಂದು ರೀತಿಯ ಶಾಪವೇ ಎಂದು ಅವಳು ಬಹಳ ಸಮಯ ದಿಂದೀಚೆ ತಿಳಿದಿದ್ದಳು. ಹಿಂದೇನೋ ತಾರುಣ್ಯದಲ್ಲಿರುವಾಗ ಮಕ್ಕಳನ್ನು ಹೆತ್ತರೆ ದೇಹ ಕ್ಷೀಣಿಸುವುದು, ಮೈಯ ಒಂಪು ಹಾಳಾಗು ವುದು, ತಲೆಕೂದಲು ಬೆಳ್ಳಗಾಗುವುದು, ಮೊಲೆ ಜೋತು ಬೀಳುವುದು —ಇತ್ಯಾದಿ ಭಾವನೆಗಳು ಅವಳಲ್ಲಿದ್ದುವು. ಆದರೆ ಈ ದೇಹ ಎಷ್ಟೇ ಆರೋಗ್ಯಕರವಾಗಿ, ಪುಷ್ಟಿಯಾಗಿ ಉಳಿದರೂ ಮಕ್ಕಳಿಲ್ಲದಿದ್ದರೆ, ಇಡೀ ಜೀವನವೇ ಒಂದು ಬಾಳೆಮರದಂತಾದೀತೆಂಬ ವಿವೇಕ ಮತ್ತೆ

ತವಳಲ್ಲಿ ಮೂಡಿತ್ತು. ಎಷ್ಟೋ ಹರಿಕೆ ಹೇಳಿಯಾಯಿತು. ಎಷ್ಟೋ ಔಷಧಿಗಳನ್ನು ಸೇವಿಸಿಯಾಯಿತು. ಎಷ್ಟೋ ದೇವಸ್ಥಾನಗಳಿಗೆ ಹೋಗಿಯಾಯಿತು. ಈಗ ಅವಳ ವಯಸ್ಸು ಇಳಿಮುಖವಾಗಿತ್ತು. ಇನ್ನು ಹತ್ತು-ಹದಿನೈದು ವರ್ಷಗಳಲ್ಲಿ ಅವಳು ತೀರ ಮುದುಕಿಯಾಗು ವಳು. ಮಕ್ಕಳಾಗುವುದಾದರೆ ಅಷ್ಟರೊಳಗಾಗಬೇಕು. ಅದೂ ಈ ತನಕ ಮಕ್ಕಳಿಲ್ಲದವಳು ಇನ್ನು ಮುಂದೆಯಾದರೂ ಮಕ್ಕಳನ್ನು ಹಡೆದಾಳೆಂದು ಹೇಳಲಾಗದು.

'ಒಂದು ಮಗುವಿರುತ್ತಿದ್ದರೆ ಎಷ್ಟು ಒಳ್ಳೆಯದಿತ್ತು!' ಅವಳು ಯೋಚಿಸಿದಳು. 'ಹಾಗಿರುತ್ತಿದ್ದರೆ ಸಿಕ್ಕಿದವರು ನನ್ನನ್ನು ಹೀಗೆ ಜರೆಯುಲಿಕ್ಕಿತ್ತೆ? ನನಗೆ ಮಕ್ಕಳಿಲ್ಲವೆಂದು ಹೀಯಾಳಿಸಲಿಕ್ಕಿತ್ತೆ? ಇಲ್ಲ. ಬಹುಶಃ ನಾನು ಮಕ್ಕಳನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದೆ. ಅವುಗಳ ಮೇಲೆ ನನಗೆ ಹೆಚ್ಚು ಸಹನೆ ಇರುತ್ತಿತ್ತು. ನನ್ನ ಬಂಜೆತನ ಹೊಟ್ಟೆಯದು ಮಾತ್ರವಲ್ಲ, ಹೃದಯದ್ದು ಕೂಡಾ ಆಗಿದೆ. ಮಕ್ಕಳಿರುತ್ತಿದ್ದರೆ ನಾನು ಮುದುಕಿಯಾಗುವಾಗ ಅವರ ಪೈಕಿ ಯಾರೊಬ್ಬರಲ್ಲಾದರೂ ಜೀವಿಸಬಹುದಿತ್ತು. ಈಗ ನನ್ನ ಗಂಡ ಸತ್ತರೆ, ಯಾರೂ ನನ್ನನ್ನು ಕೇಳುವವರಿಲ್ಲ.

'ಸರ್ಪವನ್ನು ಕೊಂದರೆ ಮಕ್ಕಳಾಗದಂತೆ. ಹಾಗೆಯೇ ತೆಂಗಿನ ಮರವನ್ನು ಕಡಿದರೂ ಮಕ್ಕಳಾಗದಂತೆ. ತಾನು ಈ ಎರಡು ಅಪರಾಧವನ್ನೂ ಮಾಡಿಲ್ಲ. ತನ್ನ ಗಂಡನೂ ತನಗೆ ತಿಳಿದ ಹಾಗೆ ಅವನ್ನು ಮಾಡಿಲ್ಲ.'

ಹೀಗೆಲ್ಲ ಯೋಚಿಸುತ್ತಿರುವಾಗಲೇ ಆಕೆಗೆ ಹೊರಗಿನಿಂದ ಗಂಡಸು ಮಾತಾಡುವ ಸದ್ದು ಕೇಳಿತು. ಹೊರ ಬಂದು ನೋಡುವಾಗ ಅದು ನಾರಪ್ಪನೆಂದು ತಿಳಿಯಿತು.

"ಏನು, ನೆಂಟರನ್ನು ಉಪಚರಿಸುವುದರಲ್ಲೇ ಮಗ್ನಳಾಗಿದ್ದೀಯು. ಹೊರಗೆ ಯಾರು ಬಂದರೂ ಗೊಡವೆಯಿಲ್ಲ!" ಎಂದ ನಾರಪ್ಪ.

"ಹೂಂ. ಕುಳಿತುಕೋ" ಎಂದಳು ಹೊನ್ನಮ್ಮ.

"ಹಾಗೆ ಕುಳಿತುಕೊಳ್ಳಲಿಕ್ಕೆ ನನಗೆ ಸಮಯವಿಲ್ಲ. ಕಟ್ಟಿಗೆ ತರಲು ಹೊರಟವ ಇಲ್ಲಿ ತನಿಯಣ್ಣನಿದ್ದಾನೋ ಎಂದು ನೋಡಲು ಬಂದೆ. ಅಷ್ಟೆ."

"ಚಿಂತಿಲ್ಲ. ಇದು ಅತ್ತಿಗೆ, ನಿನಗೆ ಗೊತ್ತಿರಬೇಕಲ್ಲ? ನಿನ್ನೆ ಚಿನ್ನುವಿನೊಡನೆ ಬಂದಿದ್ದಾರೆ."

ಸೀತುವಿಗೆ ಎಚ್ಚರವಾಗುವಂತಿರಲಿಲ್ಲ. ಚಿನ್ನು ಅಲ್ಲಿಂದೆದ್ದು ಹೊರಗೆ ಹೋದ.

"ಚಿಂತಿಲ್ಲ," ಮಾರಪ್ಪನೆಂದ "ತನಿಯಣ್ಣನ ಹಾಗೇ ಇದ್ದಾನೆ. ಮಾವನಿಗೂ ಅಳಿಯನಿಗೂ ಜತೆ ಸರಿಯಾಗಲಿಕ್ಕೆ ನೀನೊಬ್ಬ ಮಗಳನ್ನು ಕರು ಹಾಕಿದ್ದರೆ ಬಹಳ ಒಳ್ಳೆಯದಾಗುತ್ತಿತ್ತು."

"ಕರು ಹಾಕಲಿಕ್ಕೆ ನಾನೇನು ಎಮ್ಮೆಯೆ?"

"ಹಂ. ಹಾಗೆಂದೆನೇ ನಾನು. ಎಮ್ಮೆ ಮಾತ್ರ ಕರು ಹಾಕುವುದೆ?"

"ಮನುಷ್ಯರು ಹಾಕೋದಿಲ್ಲ."

"ಎಲ್ಲ ನಿನಗೆ ಹೇಗೆ ಗೊತ್ತಪ್ಪ? ನೀನು ನಮ್ಮ ಹಾಗೆಯೇ!"

"ಅಂದರೆ?"

"ಕರು ಹಾಕದವಳು."

"ಥೂ ಅಬದ್ಧ! ನಿನ್ನ ಮುಸುಡು ಸುಡಲಿಕ್ಕೆ!" ಮತ್ತೆ ಮೆಲ್ಲನೆ ಅಲ್ಲಿ ಆಕೆ ಅತ್ತಿಗೆಯ ಕಡೆ ಬೆರಳು ತೋರಿಸಿದಳು.

"ಕೋಪ ಮಾಡಬೇಡ ಅಕ್ಕಾ."

"ನಿನ್ನ ಕೊರವರ ಆಟ ಯಾರಿಗೆ ತಿಳಿಯದು?"

"ಸಾಕು. ಸ್ವಲ್ಪ ವೀಳ್ಯದೆಲೆ ಕೊಡು."

"ಹೂಂ. ಹೊಗೆಸೊಪ್ಪು ಇಲ್ಲವೆಂದು ಕಾಣುತ್ತದೆ. ಅಡಿಕೆ ಸಿಪ್ಪೆ ತೆಗೆಯಬೇಕಷ್ಟೆ."

"ಹಾಗೆ ನಿನ್ನ ಹತ್ತಿರ ಇಲ್ಲದ್ದು ನನ್ನೊಡನೆ ಇದೆ. ಇದ್ದುದನ್ನು ತಾ."

"ಹಾಗಾದರೆ ನಿನ್ನ ಹತ್ತಿರ ಇದ್ದುದನ್ನೇ ತಿನ್ನಬಹುದಲ್ಲ ?"

"ಅದನ್ನು ತಿನ್ನಲಿಕ್ಕೆ ನಿನ್ನ ಹತ್ತಿರ ಇದ್ದುದೂ ಸ್ವಲ್ಪ ಬೇಕು."

ಹೊನ್ನಮ್ಮ ನಗುತ್ತ ಒಳಗೆ ಹೋಗಿ ಎರಡು ಎಲೆ, ಒಂದಿಷ್ಟು ಸುಣ್ಣ, ಎರಡು ಹೋಳು ಅಡಿಕೆ, ಒಂದು ತುಂಡು ಹೊಗೆಸೊಪ್ಪು ಇವನ್ನೆಲ್ಲ ತಂದು ಅವನ ಕೈಗಿತ್ತಳು. ಅವನು ಅಲ್ಲೇ ಕುಳಿತುಕೊಂಡು ಅಡಿಕೆಯನ್ನು ಜಗಿಯುತ್ತ, ಎಲೆಗಳಿಗೆ ಸುಣ್ಣ ಸವರಿ, ಅವನ್ನು ಮಡಚಿ ಮೆಲ್ಲನೆ ಬಾಯಿಗೆ ಹಾಕಿಕೊಂಡ. ಮತ್ತೆ ಹೊಗೆಸೊಪ್ಪಿಗೆ ಉಳಿದ ಸುಣ್ಣವನ್ನು ಸವರಿ ತೆಗೆದ.

"ಹೊಗೆಸೊಪ್ಪು ಬಹಳ ಕಠಿನವಿದೆ. ಹೆಚ್ಚು ತಿನ್ನಬೇಡ" ಎಂದಳು ಹೊನ್ನಮ್ಮ.

"ಹಾಂ. ಅದಕ್ಕೇನು ? ನಾನು ತಿನ್ನುವ ಹೊಗೆಸೊಪ್ಪು ನೋಡಿದೆಯಾ ? ಇದನ್ನು ತಿಂದರೆ ನೆಲದಲ್ಲೇ ಬೀಳಬೇಕು ಮತ್ತೆ !"

"ಮತ್ತೆ ಯಾರಾದರೂ ಆಕಾಶದಲ್ಲಿ ಇಲ್ಲವೇ ನೀರಿನಲ್ಲಿ ಬೀಳುವರೆ ?"

ಮಾರಪ್ಪ ಹೊಗೆಸೊಪ್ಪಿನ ಎಸಳನ್ನು ಸೊಂಟದಿಂದ ತೆಗೆದು, ಅದರ ಹ್ಯೊಗೆಯನ್ನು ಸವರಿ ಬಿಡಿಸುತ್ತ, ಅದರಿಂದ ಒಂದು ತುಂಡು ತೆಗೆದು ಹೊನ್ನಮ್ಮನಿಗೆ ಕೊಟ್ಟ. ಆಗ ಸೀತು ಮಲಗಿದ್ದವಳು ಗೋಡೆಯ ಕಡೆ ಹೊರಳಿದುದನ್ನು ನೋಡಿ ಇಬ್ಬರಿಗೂ ತುಸು ಸಂಕೋಚವಾಯಿತು.

"ನಾನಿನ್ನು ಬರುತ್ತೇನೆ. ಸಮಯವಾಯಿತು. ನಿಮಗೆ ಹೆಂಗಸರಿಗೇನು, ಮನೆಯಲ್ಲಿ ಕುಳಿತು ಹೇನು ಕುಟ್ಟುವ ಕೆಲಸವೊಂದಲ್ಲದೆ ಬೇರೇನಿಲ್ಲ."

ಹೀಗೆಂದು ಹೇಳಿ ಮಾರಪ್ಪ ಹೊರಟ. ಅವನಿಗೆ ಬಹಳ

ನಿರಾಶೆಯಾಗಿತ್ತು. ಬರುವಾಗ ಹೊನ್ನಮ್ಮ ಒಬ್ಬಳೇ ಇರಬಹುದೆಂದು ನಿರೀಕ್ಷಿಸಿದ್ದ.

ಹೊನ್ನಮ್ಮ ಅವನು ಹೋಗುತ್ತಿದ್ದುದನ್ನೇ ಕೆಲಕಾಲ ನೋಡಿದಳು. ಅವನು ಹೋದ ಬಳಿಕ ಅವಳ ಮನಸ್ಸಿನಲ್ಲಿ ತುಸು ಕಳವಳವಾಯಿತು. ತಾನು ಹೀಗೆಲ್ಲ ಏನೇನೋ ಯೋಚಿಸುತ್ತಿರುವುದು ಸರಿಯಲ್ಲ, ಇನ್ನೀಗೆ ತಾನು ನೆನೆಯಬಾರದೆಂದುಕೊಂಡಳು. ತನಿಯನೇನೂ ಪೂರ್ಣ ಮುದುಕನಾಗಿಲ್ಲ. ಏನೋ ಕೆಲವು ಹಲ್ಲುಗಳು ಹೋಗಿರಬಹುದು. ಗಡ್ಡ ಮೀಸೆಗಳು ಬಿಳಿಯಾಗುತ್ತಿರ ಬಹುದು. ಆದರೆ ಅಷ್ಟಕ್ಕೇ ಅವನ ಪ್ರಾಣ ಪೂರ್ಣ ಕುಂದಿ ಹೋಗಿಲ್ಲ. ಅವನ ತೋಳುಗಳಲ್ಲಿ ಇನ್ನೂ ಸ್ನಾಯುಗಳು ನವಿಯು ತ್ತಲೇ ಇವೆ. ಎದೆಯಲ್ಲಿ ಎಲುಬುಗಳು ಕಾಣಿಸುವುದಿಲ್ಲ. ಮುಖದ ಮೇಲೆ ಅಷ್ಟು ನೆರಿಗೆಗಳು ಬಿದ್ದಂತೆ ಕಾಣುವುದಿಲ್ಲ.

ಅವನಿಂದ ಇನ್ನು ತನಗೆ ಮಕ್ಕಳಾಗಬಹುದು, ಬಹುಶಃ ಎಂದು ಹೊನ್ನಮ್ಮ ನೆನೆದಳು.

ಆದರೆ ಈ ಹುಡುಗ ಮಾರಪ್ಪ ಈಗ ತಾನೇ ಮದುವೆ ಯಾಗಲಿರುವವ. ಈ ಒಳಗೇ ಬಹುಶಃ ಹೆಣ್ಣು ನಿಶ್ಚಯವಾಗಿರಲೂ ಬಹುದು. ತನ್ನೊಡನೆ ಏನೋ ತಮಾಷೆಗೆ ಮಾತಾಡುತ್ತಿರಬಹುದು. ತನ್ನ ಮೇಲೆ ಅವನ ಮನಸ್ಸು ಹರಿದಿರಲಿಕ್ಕಿಲ್ಲ. ತನಗೆ ಮಕ್ಕಳಾಗಿಲ್ಲ ವೆಂದು ಎಲ್ಲರೂ ತಮಾಷೆ ಮಾಡುತ್ತಲೇ ಇದ್ದಾರೆ. ಅಷ್ಟರಿಂದ ಮಾತ್ರಕ್ಕೆ ತಾನು ಅವರ ಮಾತುಗಳನ್ನು ತಪ್ಪು ತಿಳಿದುಕೊಳ್ಳ ಬಾರದು. ಮಕ್ಕಳಾಗದವಳ ಯೌವನ ಬೇಗನೇ ಇಳಿದು ಹೋಗುವುದಿಲ್ಲವೆಂದೂ ಅವರ ಅಭಿಪ್ರಾಯವಿರಬಹುದು. ಇಲ್ಲವೇ ತನಗೆ ಮದುವೆಯಾಗಿ ಇಷ್ಟು ವರ್ಷಗಳು ಸಂದರೂ ಮಕ್ಕಳಾಗ ದಿರಲು ಏನೋ ದೈಹಿಕ ತೊಡಕುಂಟೆಂತ ಅವರು ಭಾವಿಸಿರಲೂ ಬಹುದು.

ಅವಳು ಮಾರಪ್ಪನೆಂಬುದನ್ನು ಪುನಃ ನೆನೆಯುತ್ತ,

‘ಕರು ಹಾಕಲಿಲ್ಲವಂತೆ! ಹಂ. ಹುಡುಗ ಮಾತನ್ನು ಬಹಳ ಸುಂದರಿಸಿದ್ದಾನೆ! ಅದೂ ಅತ್ತಿಗೆ ಏನಾದರೂ ಕೇಳಿದರೆ, ಏನೇನೋ ನೆನೆಯದಿರಲಿಕ್ಕಿಲ್ಲ. ಅವಳು ಏನೇನು ಅರ್ಥಮಾಡಿಕೊಂಡಳೋ ಏನೋ!’

ಹೀಗೆ ನೆನೆಯುತ್ತಿದ್ದಾಗಲೇ, ಸೀತೆ ಮಲಗಿದ್ದಲ್ಲಿಂದ ಎದ್ದು ಮೈ ನೇವರಿಸುತ್ತ, ಹೊರಗೆ ಹೋದಳು. ಅವಳು ಹೊನ್ನಮ್ಮನನ್ನು ನೋಡಲೂ ಇಲ್ಲ. ಚಿನ್ನ ಆಗಲೇ ಹೊರಗಿನಿಂದ ಒಳಗೆ ಬಂದ. ಆದರೆ ಅವನು ಹೊನ್ನಮ್ಮನೊಡನೆ ಮಾತಾಡಲಿಲ್ಲ.

“ಏನೋ ನಿನಗೆ ಹಸಿವೆ ಆಗುತ್ತದೆಯೆ?” ಎಂದು ಹೊನ್ನಮ್ಮ ಕೇಳಿದಳು.

ಅವನು ಉತ್ತರಿಸಲಿಲ್ಲ.

“ಏನು ನಿನಗೆ ನನ್ನ ಮೇಲೆ ಕೋಪವೆ? ನಿನಗೆ ಹೊಡೆದದ್ದು ನಿನ್ನ ತಾಯಿ” ಎಂದು ಆಕೆ ಅವನ ಬಳಿ ಬಂದು ಕೊರಳ ಮೇಲೆ ಕೈ ಹಾಕಿ ಹೇಳಿದಳು.

ಅವನ ಮುಖದಲ್ಲಿ ಆಗ ನಗುವಿನ ಛಾಯೆಯಿತ್ತು. ಆದರೆ ಅವನು ಮಾತಾಡಲಿಲ್ಲ.

“ನಿನ್ನ ಬಾಯಿಗೆ ಬೀಗ ಮುದ್ರೆಯಾಗಿದೆಯೆ?” ಎನ್ನುತ್ತ ಹೊನ್ನಮ್ಮ ಅವನ ಭುಜವನ್ನು ಹಿಡಿದು ಅಲ್ಲಾಡಿಸಿದಳು.

“ಹೂಂ ಊಂ.... ಹೋಗಿ .... ನಿಮಗೆ ಬೇಡ” ಎಂದನವ ಮುಖವನ್ನು ಮುದುಡಿಸುತ್ತ.

“ಸ್ವಲ್ಪ ಕೊಡು ಆಗಲಿ” ಎಂದಳಾಕೆ ನಗುತ್ತ.

ಅವನು ಆಕೆಯ ಕೈಯಿಂದ ತಪ್ಪಿಸಿಕೊಳ್ಳಲು ಹೆಣಗಾಡಿದ. ಆದರೆ ಅವಳು ಅವನ ಭುಜವನ್ನು ಬಿಟ್ಟು ತೋಳುಗಳಲ್ಲಿ ಹಿಡಿದುಕೊಂಡಳು. ಅವನು ಮತ್ತೂ ಒದ್ದಾಡಿ ಒದ್ದಾಡಿ ಕಡೆಗೆ ಸುಮ್ಮನಾದ.

"ಈಗ ನೀವು ನನ್ನೊಡ್ನೆ ಆಡ್ತೀರಿ. ಆಗ ಕೋಣದ ಹತ್ರ ನಿಂತವ್ಹಕ್ಕೆ ತಾಯಿಯ ಹತ್ರ ದೂರು ಹೇಳಿ ನನ್ಗೆ ಹೊಡೆಸಿದ್ರಿ ನಿಮ್ಮದು ಭಾರೀ ಕೋಣಗಳೆಂದು ತೋರ್ತದೆ."

"ನಾ ದೂರು ಹೇಳಿಲ್ಲಪ್ಪ" ಹೊನ್ನಮ್ಮ ಅವಾಕ್ಕಾಗಿ ನುಡಿದಳು. ತಾನು ಸೀತುವಿನೊಡನೆ ಹೇಳಿದ್ದು ಅವನಿಗೂ ಕೇಳಿರಬಹುದೆಂದು ಅವಳು ಭಾವಿಸಿರಲಿಲ್ಲ. "ನಿನ್ನ ತಾಯಿಯೇ ನೋಡಿ ಬೈದದ್ದು."

"ಸುಳ್ಯೇಕೆ? ನಾ ಕೇಳ್ಲಿಲ್ವೆ 'ಅತ್ತಿಗೆ ನಿಮ್ಮ ಮಗ ನೋಡಿ ಕೋಣಗಳಿಗೆ ಎಷ್ಟು ದೊಡ್ಡ ಬೆತ್ತದಿಂದ ಹೊಡೀತಾನೆ. ಅವು ಅವನಿಗೆ ಹಾಯಬಹುದು' ಎಂದು ನೀವು ತಾಯಿಯೊಡನೆ ಹೇಳಿದ್ದನ್ನ?"

"ಆದರೆ ನಿನಗೂ ಹೊಡೀಬೇಕೆಂದು ನಾ ಅವರೊಡನೆ ಹೇಳಿದ್ದೇನೆಯೆ?"

"ಹೌದು, ನೀವಲ್ಲದಿದ್ದರೆ ತಾಯಿ ನನಗೆ ಹೊಡೀತಿದ್ದಿಲ್ಲ."

"ಅದಕ್ಕೆ ಈಗ ನಿನಗೆ ತಿನ್ನಲಿಕ್ಕೆ ಕೊಡುತ್ತೇನೆ, ಬಾ."

ಎನ್ನುತ್ತ ಅವನನ್ನು ಹಿಡಿದುಕೊಂಡು ಒಳಗೆ ಕೊಂಡುಹೋಗಿ ಒಂದಿಷ್ಟು ಅವಲಕ್ಕಿ ಮತ್ತು ಬೆಲ್ಲವನ್ನು ಕೊಟ್ಟಳು. ಅವನು ಮೆಲ್ಲನೆ ತಿನ್ನಲು ಪ್ರಾರಂಭಿಸಿದ.

ಆಗ ಸೀತು ಹೊರಗೆ ಹೋಗಿದ್ದವಳು ಜಗಲಿಗೆ ಬಂದಳು. ಒಳಗೆ ಚಿನ್ನು ಅವಲಕ್ಕಿ ತಿನ್ನುವುದು ಅವಳಿಗೆ ಕಾಣುತ್ತಿತ್ತು. ಹೊನ್ನಮ್ಮ ಆಕೆಯನ್ನು ಒಳಗೆ ಕರೆದಳು. ಆಕೆ ತನಗೇನೂ ಬೇಡವೆಂದಳು.

ಹೊನ್ನಮ್ಮನಿಗೆ ಆಗ ಅವಳೊಡನೆ ತನ್ನ ತಪ್ಪನ್ನೊಪ್ಪಿಕೊಳ್ಳಲೂ ಆಗಲಿಲ್ಲ. ಅವಳಿಗೇಕೆ ತನ್ನ ಮೇಲೆ ಸಿಟ್ಟು? ಅವಳು ನೆಂಟರಂತೆ ಬಂದವಳು. ಇದು ತನ್ನ ಮನೆ. ಇಲ್ಲ ತನ್ನ ಮೇಲೆ ಅವಳೇಕೆ ಕೋಪಗೊಳ್ಳಬೇಕು? ತಾನೇನಾದರೂ ಅವಳ ಮಗನಿಗೆ ಹೊಡೆದಿಲ್ಲ.

ಅವಳಿಗೆ ಬೈದಿಲ್ಲ.

"ಇಲ್ಲಿ ಬನ್ನಿ ಅತ್ತಿಗೆ. ಒಂದಿಷ್ಟು ಅವಲಕ್ಕಿ ತಿನ್ನಿ" ಎಂದು ಪುನಃ ಅವಳು ಕೇಳಿಕೊಂಡಳು, ಯೋಚನೆಗಳ ಮಧ್ಯೆ.

"ಊಹೂಂ" ಸೀತು ಮುಖ ತಿರುಗಿಸಿದಳು. "ನನಗೆ ಹಸಿವಿಲ್ಲ. ನನಗೇನೂ ಬೇಡ."

"ನೀವು ಊಟ ಕೂಡಾ ಪೂರ್ಣ ಮಾಡಿಲ್ಲ."

"ನನಗೇನೂ ಬೇಡ."

ಹೊನ್ನಮ್ಮ ಯೋಚಿಸಿದಳು, 'ಬಹುಶಃ, ಇವಳಿಗೆ ದೊಡ್ಡಸ್ತಿಕೆ ಯಾಗಿರಬೇಕು. ಇವಳ ಮನೆಯಲ್ಲಿ ಬೇಕಾದಷ್ಟು ಇದೆಯೆಂದು ಎಲ್ಲರೂ ಹೇಳುತ್ತಿದ್ದರು. ಈಗ ತಾನು ದರಿದ್ರಳು, ಅದೂ ಮಕ್ಕಳಿಲ್ಲದ ದರಿದ್ರಳು. ತನ್ನ ಉಪಚಾರವನ್ನು ಈಕೆ ಬಯಸಳು. ಈಕೆಗೆ ತನ್ನ ಮೇಲಿನ ತಿರಸ್ಕಾರ ಬುದ್ಧಿಯನ್ನು ಪ್ರದರ್ಶಿಸಲೂ ಒಳ್ಳೆಯ ನೆವವೂ ಈಗ ಸಿಕ್ಕಿತು.'

ಚಿನ್ನು ಅವಲಕ್ಕಿ ಬೆಲ್ಲ ತಿಂದು ಸ್ವಲ್ಪ ನೀರು ಕುಡಿದು ಹೊರಗೆ ತೇಗುತ್ತ ಬಂದ.

"ಹೂಂ, ನಿನಗೆ ಹೊಲೆಯರು ಕೊಟ್ಟರೂ ಬೇಡವೆಂದಿಲ್ಲ. ಹೊಟ್ಟೆಬಾಕ. ನಾಚಿಕೆಯಿಲ್ಲದವ. ತಿನ್ನಲಿಕ್ಕಾಗಿಯೋ ಹುಟ್ಟಿದ್ದೀಯಾ ನೀನು ?"

ಎಂದು ಸೀತು ಸಿಡಿದು ಮಾತಾಡಿದಳು.

ಹೊನ್ನಮ್ಮನಿಗೆ ಇದನ್ನು ಕೇಳಿ ಅಳು ಬಂತು.

"ಅಲ್ಲ ಅತ್ತಿಗೆ ಮಕ್ಕಳಲ್ಲವೆ? ಒಂದಿಷ್ಟು ತಿನ್ನಲಿಕ್ಕೆ ಕೊಟ್ಟೆ. ಇದೂ ನಿಮ್ಮದಲ್ಲವೆ? ಮಗುವಿಗೆ ಹಾಗೆ ಹೇಳಬೇಡಿ."

"ನಿನ್ನ ಮಗನಿಗೆ ನಾ ಬಯ್ದಿಲ್ಲ" ಸೀತು ಕೋಪದಲ್ಲೇ ಹೇಳಿದಳು. "ನನ್ನ ಮಗನಿಗೆ ನಾನು ಬಯ್ಯುವಾಗ ಬುದ್ಧಿ ಹೇಳಲಿಕ್ಕೆ ನೀನು ಯಾರು ?"

ಹೊನ್ನಮ್ಮ ಮತ್ತೂ ಅತ್ತಳು.

ಸಂಜೆಯಾಗುತ್ತ ಬರುತ್ತಿತ್ತು. ಅಂದಿನ ಹೂಗಳನ್ನು ಹೊನ್ನಮ್ಮ ನೇಯಲಿಲ್ಲ. ಅವು ಅಲ್ಲೇ ಬಾಡತೊಡಗಿದ್ದವು. ಸೀತಾ ಹೇಳಿದ ಪ್ರತಿಯೊಂದು ಮಾತೂ ಅವಳಿಗೆ ಮುಳ್ಳಿನಿಂದ ಚುಚ್ಚಿದಂತಾಗುತ್ತಿತ್ತು. ಆದರೆ ಗುಡಾಣದ ಬಾಯಿಯನ್ನು ಮುಚ್ಚಬಹುದು, ಮನುಷ್ಯನ ಬಾಯಿಯನ್ನು ಬಿಗಿಯಲಾದೀತೆ? ಎಷ್ಟು ಅವಹೇಳನ, ಎಷ್ಟು ಮೂದಲಿಕೆ! ಕೇವಲ ಅರ್ಧದಿನದಲ್ಲೇ ಅವಳ ಮನಸ್ಸಿನ ಪರಿಸ್ಥಿತಿ ಪೂರ್ಣ ಬದಲಾಯಿಸಿಹೋಗಿತ್ತು.

ಅವಳ ಗಂಡ ಕೂಡಾ ಹೀಗೆ ಮನಸ್ಸನ್ನು ಹಿಂಸಿಸುವ ಮಾತುಗಳನ್ನಾಡುತ್ತಿರಲಿಲ್ಲ.

ಮತ್ತೆ ಮೆಲ್ಲನೆ ಎದ್ದು ರಾತ್ರಿಯ ಅಡುಗೆಗೆ ನೀರು ತಂದಳು. ಆಕೆ ಅಕ್ಕಿಯನ್ನು ತೊಳೆಯುತ್ತಿದ್ದಾಗ ಚಿನ್ನು ಅವಳ ಬಳಿ ಬಂದು ನಿಂತುಕೊಂಡ. ಅವಳು ಒಮ್ಮೆ ಅವನನ್ನು ನೋಡಿದಳು. ಮನಸ್ಸು ಉಕ್ಕಿ ಬಂತು. ಹುಡುಗ ಚೆಲುವಿದ್ದ, ಅವನ ಮನಸಿನ ಕೋಪ ಆ ಒಂದು ಮುಷ್ಟಿ ಅವಲಕ್ಕಿಯಲ್ಲಿಯೇ ಮಾಯವಾಗಿತ್ತು. ಈಗ ಅವನ ಮುಖದಲ್ಲಿ ನಸುನಗು ಮಿಂಚುತ್ತಿತ್ತು.

"ಏನತ್ತೆ, ನೀ ಮಾತಾಡೋದಿಲ್ಲ? ಕೋಪವೆ?" ಎಂದು ಅವನಾಗಿ ಕೇಳಿದ.

"ಏಕೆ ಮಾತಾಡೋದು ಮಗೂ? ಕೋಪ ನನಗೇಕೆ? ನಿನ್ನ ಮಾವ ಬರುವಾಗ ಊಟ ತಯಾರಾಗಬೇಕು. ಅದಕ್ಕೆ ಅಡುಗೆ ಮಾಡುತ್ತಿದ್ದೇನೆ."

ಹೀಗೆನ್ನುವಾಗ ಹೊನ್ನಮ್ಮನಿಗೆ ಅವನನ್ನೊಮ್ಮೆ ಅಪ್ಪಿ ಹಿಡಿದು ಮುದ್ದಿಸಬೇಕೆಂದಾಯಿತು. ಆದರೆ ಅಷ್ಟರಲ್ಲೇ ಸೀತಾ ದೂರದಿಂದ ಹೇಳಿದಳು.

"ನಮಗೆ ಅಡುಗೆ ಮಾಡುವುದು ಬೇಡ. ನಾವು ಇಂದು

ಹೋಗುತ್ತೇವೆ" ಎಂದು.

"ಅವರು ಬಾರದೆ ಹೋಗುತ್ತೀರಾ?" ಎಂದು ಹೊನ್ನಮ್ಮ ಮುಖದಲ್ಲಿ ಕೇಳಿದಳು.

"ಬರಲಿ ಬಾರದಿರಲಿ ನಾವು ಹೋಗಿ ಬರುತ್ತೇವಲ್ಲ.'

ಆಗ ಚಿನ್ನು ನಗುತ್ತ

"ನಾ ಊಟ ಮಾಡ್ತೇನೆ ಅತ್ತೆ. ನನಗೆ ಅನ್ನ ಮಾಡು" ಎಂದ.

ಸೀತುವಿಗೆ ಒಮ್ಮೆಲೇ ಅವನನ್ನು ಹಿಡಿದು ನೆಲಕ್ಕಪ್ಪಳಿಸಿಬಿಡಬೇಕೆಂದು ತೋರಿತು. ಆದರೆ ಮತ್ತೆ ಅವಳು ಮಾತಾಡಲಿಲ್ಲ.

ಹೊನ್ನಮ್ಮ ಕೋಣಗಳಿಗೆ ಒಂದಿಷ್ಟು ಹುಲ್ಲು ಕೊಯ್ದು ತರಲು ಹೊರಗೆ ಹೋದಳು. ಚಿನ್ನುವೂ ಸೀತುವನ್ನು ಕಣ್ಣುತಪ್ಪಿಸಿಕೊಂಡು ಬೇರೊಂದು ದಾರಿಯಿಂದ ಅವಳಿದ್ದಲ್ಲಿಗೆ ಹೋದ. ಹೊನ್ನಮ್ಮನಿಗೆ ಅವನನ್ನು ಕಂಡು ಅತ್ಯಂತ ಸಂತೋಷವಾಯಿತು. ಕೊಯ್ಯುತ್ತಿದ್ದ ಹುಲ್ಲನ್ನು ಅಲ್ಲೇ ಬಿಟ್ಟು ಎದ್ದು, ಚಿನ್ನುವನ್ನೆತ್ತಿ ಸೊಂಟದಮೇಲಿರಿಸಿ ಅವನ ಮುಖಕ್ಕೆ ಮುದ್ದಿಟ್ಟಳು. ಅವನು ಅವಳ ಕುತ್ತಿಗೆಯನ್ನು ಅಮುಕಿ ಹಿಡಿದು ಮರಳಿ ಅವಳಿಗೆ ಮುದ್ದಿಟ್ಟ.

"ನೀನು ಇಲ್ಲೇ ಇದ್ದುಬಿಡು ಆಗದೆ?" ಎಂದಳಾಕೆ ಅವನ ಉಬ್ಬಿದ ದವಡೆಗಳನ್ನು ಕೈಯಿಂದ ಹಿಚುಕುತ್ತ.

"ತಾಯಿ ಗದರಿಸಿಯಾಳು" ಎಂದನವ.

"ನಿನಗೆ ತಿನ್ನಲಿಕ್ಕೆ ಅವಲಕ್ಕಿ ಬೆಲ್ಲ ಎಲ್ಲ ಕೊಡುತ್ತೇನೆ. ಇಲ್ಲೇ ಇರು. ಮಾವ ಒಳ್ಳೆಯ ಅಂಗವಸ್ತ್ರಗಳನ್ನು ತಂದುಕೊಡುತ್ತಾರೆ."

"ಊಹೂಂ. ನನಗೆ ಸಾಲೆಗೆ ಹೋಗಬೇಕು" ಎನ್ನುತ್ತ ಅವಳ ಸೊಂಟದಿಂದ ಚಿನ್ನು ಕೆಳಗೆ ಹಾರಿದ.

"ಇಲ್ಲೇ ಸಾಲೆಯಿದೆಯಲ್ಲ?"

"ಅದಾಗದು."

"ಆಯಿತು. ನಾ ಬಿಡಬೇಕಲ್ಲ?"

"ನೋಡೋಣ. ನನ್ನಪ್ಪ ಬಂದು ನಿನಗೆಲ್ಲ ಹೊಡೆದು ನನ್ನನ್ನು ಊರಿಗೆ ಕೊಂಡುಹೋಗದಿರರು."

"ಆಯಿತು ಅವರೇ ಬರಲಿ."

ಎನ್ನುತ್ತ ಹೊನ್ನಮ್ಮ ಪುನಃ ಹುಲ್ಲುಕೊಯ್ಯಲು ಪ್ರಾರಂಭಿಸಿದಳು.

ಆಗ ಅವಳಲ್ಲಿ ಅವರ್ಣನೀಯ ಅನುಭವವಾಗತೊಡಗಿತ್ತು. ಚಿನ್ನುವೇನಾದರೂ ಚಿಕ್ಕ ಶಿಶುವಲ್ಲ. ಹತ್ತು ವರ್ಷದ ಸಮೀಪವಿರಬಹುದು ಅವನ ವಯಸ್ಸು. ಆದರೂ ಅವನನ್ನೊಮ್ಮೆ ಸೊಂಟಕ್ಕೇರಿಸಿ ಅವನ ದೇಹದ ಭಾರವನ್ನು ಹೊರುವಾಗ ಹೊನ್ನಮ್ಮನಿಗೆ ಮಹಾ ಆನಂದವಾಗಿತ್ತು. ಮತ್ತೆ ಅವನು ಆಕೆಯ ಕುತ್ತಿಗೆಯನ್ನಪ್ಪುವಾಗ ಅವನ ನುಣುಪಾದ ತೋಳುಗಳ ಸ್ಪರ್ಶವು ಅವಳಲ್ಲಿ ಮಮತಾಭಾವವನ್ನು ಉದ್ರೇಕಿಸಿತ್ತು. ಅವನ ಸಣ್ಣ ಧ್ವನಿಯ ಮೋಹಕ ಮಾತುಗಳಿಗೆ ಮಾರುಹೋದಳು. ಬಹುಶಃ ಅವನನ್ನವಳು ಸಾಯುವತನಕವೂ ಸೊಂಟದಲ್ಲಿಟ್ಟುಕೊಂಡೇ ಇದ್ದರೂ ಅವನು ಭಾರವಾಗಿ ಕಾಣಲಿಕ್ಕಿಲ್ಲ. ಅವಳಿಗೆ ಅದರಿಂದ ಕಷ್ಟವಾಗಲಿಕ್ಕಿಲ್ಲ.

ಅವಳ ಕರುಳು ಆಗ ಕೂಗುತ್ತಿತ್ತು. ಕಣ್ಣು ನಲಿಯುತ್ತಿತ್ತು. ತನ್ನ ಶೂನ್ಯ ಸಂಸಾರದ ಭೀಕರ ಚಿತ್ರ ಅವಳ ಮುಂದಿತ್ತು.

ಚಿನ್ನು ಮತ್ತೆ ಅವಳು ಹುಲ್ಲು ಕೊಯ್ಯುವಾಗ ಅವಳೊಡನೆ ಎಷ್ಟೋ ಆಟಗಳನ್ನಾಡಿದ. ಮಾತುಗಳನ್ನಾಡಿದ. ಹತ್ತಾರು ಸಲ ಹಿಂದಿನಿಂದ ಬಂದು ಅವಳ ಕಣ್ಣುಗಳನ್ನು ಅಪ್ಪಿಹಿಡಿದು, ಯಾರೆಂದು ಹೇಳದೆ ಬಿಡೆನೆಂದ. ಒಮ್ಮೆ ಅವಳ ಕೂದಲನ್ನು ಹಿಡಿದೆಳೆದ. ಮತ್ತೊಮ್ಮೆ ಅವಳು ಕೊಯಿದು ಇಟ್ಟಿದ್ದ ಹುಲ್ಲನ್ನು ಎತ್ತಿಕೊಂಡು ಹೋಗಿ ಗದ್ದೆಯಲ್ಲಿ ಬಿಸುಟ. ಪುನಃ ಅದನ್ನು ಹೆಕ್ಕಿ ತಂದು ಅವಳ ಕೈಯಲ್ಲಿದ್ದ ಕತ್ತಿಯನ್ನು ಎಳೆದುಕೊಂಡು ಓಡಿಹೋದ. ಅವಳು ಅವನ ಬೆನ್ನಟ್ಟುವಾಗ ಅಡ್ಡಾದಿಡ್ಡಿಯಾಗಿ ಗದ್ದೆಯಲ್ಲಿ ಓಡಿ, ಒಂದೆರಡು

ಕಡೆ ಬಿದ್ದು ಕೊನೆಗೆ ಅವಳ ಕೈಗೆ ಸಿಕ್ಕಿದ. ಬಳಿಕ ಒಂದು ಸಣ್ಣ ಮರವನ್ನೇರಿದವ ಅವಳೆಷ್ಟೆಂದರೂ ಇಳಿಯಲಿಕ್ಕೆ ಕೇಳಲೇ ಇಲ್ಲ. ಬದಲಾಗಿ ಅವಳ ಮೇಲೆ ಉಗುಳಿದ. ಮರದ ಎಲೆಗಳನ್ನು ಮತ್ತು ಪುಟ್ಟ ಕೊಂಬೆಗಳನ್ನು ಕೈಯಿಂದ ಕಿತ್ತು ಅವಳ ಮೇಲೆ ಅವುಗಳ ಮಳೆಗರೆದ. ಮರದಿಂದ ಇಳಿದವನು ಓಡಿಬಂದು ಅವಳ ಹೆಗಲ ಮೇಲೆ ಕುಳಿತು ತನ್ನನ್ನು ಹೊರಬೇಕೆಂದು ಅವಳ ಕಿವಿ ಹಿಂಡಿದ. ಇಷ್ಟಾದರೂ ಹೊನ್ನಮ್ಮನಿಗೆ ಸಂತೋಷವೇ ಆಯಿತು ಹೊರತು ಒಂದಿಷ್ಟೂ ಕೋಪ ಬರಲಿಲ್ಲ. ಅವನ ತಂಟೆಯಿಂದಾಗಿ ಅವಳ ಹುಲ್ಲು ಕೊಯ್ಯುವ ಕೆಲಸ ಸ್ವಲ್ಪ ಹಿಂದೆ ಬಿತ್ತು. ಕೊನೆಗೆ ಅವನನ್ನು ಕೈಕಾಲುಗಳಿಂದ ಹಿಡಿದೆತ್ತಿ ಕೆಳಗೆ ಹಾಕುವೆನೆಂದು ಬೆದರಿಸಿದಳು. ಆದರೆ ಅವನು ಅವಳ ಮುಖದ ಮೇಲೆ ಕೈಯಾಡಿಸಿ, ಮೈಮೇಲೆ ಸ್ವಲ್ಪ ಪರಚಿದ. ಅವಳ ತಲೆಗೆ ಎರಡೂ ಕೈಗಳಿಂದಲೂ ಮೃದುವಾಗಿ ಹೊಡೆದ.

ಹೊನ್ನಮ್ಮನೂ ಚಿನ್ನುವೂ ಮನೆಗೆ ಹಿಂದಿರುಗುವಾಗ ಕತ್ತಲಾಗುತ್ತಿತ್ತು. ತನಿಯ ಕೆಲಸದಿಂದ ಬಂದವ ಸೀತುವಿನೊಡನೆ ಏನೋ ಮಾತಾಡುತ್ತಿದ್ದ. ಹೊನ್ನಮ್ಮನನ್ನು ಕಂಡೊಡನೆ ಅವರ ಸಂಭಾಷಣೆ ನಿಂತಿತು. ಚಿನ್ನು ಹೋದವನೇ ಮಾವನ ತೊಡೆಗಳನ್ನೇರಿ ಕುಳಿತುಕೊಂಡ. ಹೊನ್ನಮ್ಮ ಮತ್ತೆ ಹೊರಗೆ ಹೋಗಿ ಜಾನುವಾರುಗಳಿಗೆ ಅಕ್ಕಚ್ಚನ್ನು ಕೊಟ್ಟು ಹುಲ್ಲುಹಾಕುವ ಕೆಲಸದಲ್ಲಿ ನಿರತಳಾದಳು.

ಆದರೆ ಅವಳಿಗೆ ಒಳಗಿಂದ ಮಾತಾಡುತ್ತಿರುವುದು ಕೇಳಬರುತ್ತಿತ್ತು. ಸೀತು ಹೇಳುತ್ತಿದ್ದಳು :

"ಒಳ್ಳೆಯ ಗುಣದವಳು. ಗಂಡ ಸಾಯುವಾಗ ಅವಳಿಗೆ ಮೈನೆರೆದಿರಲಿಲ್ಲವಂತೆ. ನೋಡುವಾಗಲೂ ಚೆಂತಿಲ್ಲ. ಕುತ್ತಿಗೆಯಲ್ಲಿ ಕಿವಿಯಲ್ಲಿ ಮತ್ತು ಕೈಯಲ್ಲಿ ಸ್ವಲ್ಪ ಚಿನ್ನವೂ ಇದೆ...."

"ಆದರೂ ಈ ಮುದುಕ ಮದುವೆಯಾದನೆಂದರೆ ನೋಡುವವರು ಏನೆಂದಾರು ?" ತನಿಯ ಹೇಳುತ್ತಿದ್ದ.

"ಹೊಂ. ಅವರು (ಗಂಡ) ನಿನಗೆ ಹೇಳಲು ನನ್ನೊಡನೆ ಹೇಳಿದ್ದಾರೆ. ಅವರು ಮಾತಾಡಿಯೂ ಆಗಿದೆಯಂತೆ. ಇನ್ನು ನಿನ್ನ ಇಚ್ಛೆ."

"ಈ ವರ್ಷ ಆಗಲಿಕ್ಕಿಲ್ಲ."

"ಅದಕ್ಕೇನು? ಖರ್ಚು ಏನೂ ಇಲ್ಲ. ನೀನೆರಡು ಸೀರೆ ತಂದು ಊರ ನಾಲ್ಕೈದು ಜನರಿಗೆ ಹೇಳಿದರಾಯಿತು."

ತನಿಯ ಮತ್ತೆ ಗುಟ್ಟಿನಲ್ಲಿ ಏನೋ ಹೇಳುತ್ತಿದ್ದ.

ಮತ್ತೆ ಹೊನ್ನಮ್ಮ ಒಳಗೆ ಹೋಗಿ ಪಲ್ಯ ತಯಾರಿಸ ತೊಡಗಿದಳು. ತನಿಯ ಕೆಲಸ ಬಿಟ್ಟು ಬರುವಾಗ ಸ್ವಲ್ಪ ಒಣ ಮೀನನ್ನು ಹನ್ಮಾದೆ ಬ್ಯಾರಿಯ ಅಂಗಡಿಯಿಂದ ತಂದಿದ್ದ. ಅದನ್ನು ಬೇಯಿಸುವಾಗ ಅದರ ಪರಿಮಳ ಒಲೆಯ ಹೊಗೆಯೊಡನೆ ಸೇರಿ ಮನೆಯನ್ನಿಡೀ ಅವರಿಸಿತು.

"ಹ್ಹ! ಒಳ್ಳೆಯ ಮೀನು. ಹೇಗೆ ಪರಿಮಳ ಬರುತ್ತದೆ!" ಎಂದ ತನಿಯ ಮೂಗನ್ನು ತಿಕ್ಕಿಕೊಳ್ಳುತ್ತ.

"ಈ ಒಣಮೀನು ಹಾಗೆಯೇ" ಸೀತುವೆಂದಳು "ನಮ್ಮಲ್ಲಿ ಯಾವಾಗಲೂ ಹಸಿಮೀನನ್ನೇ ಅಡಿಗೆ ಮಾಡುವ ಪದ್ಧತಿ."

"ಆದರೆ ಇಲ್ಲಿ ನದಿಯಿಲ್ಲವಲ್ಲ!"

"ಅದು ಹೌದು. ನಮಗೆ ನದಿಯಲ್ಲಿ ಬೇಕಾದಷ್ಟು ಸಿಗುತ್ತವೆ."

"ನಾನೂ ಮೀನು ಹಿಡಿಯಬಲ್ಲೆ ಮಾವ" ಎಂದ ಚಿನ್ನು.

"ಆದರೆ ಇಲ್ಲಿಗೆ ಒಂದನ್ನೂ ನೀನು ತರಲಿಲ್ಲವಲ್ಲ!" ಎಂದಳು ಹೊನ್ನಮ್ಮ ಒಳಗಿನಿಂದ.

"ನೀವು ತರಲಿಕ್ಕೆ ಹೇಳಲಿಲ್ಲ" ಎಂದು ಚಿನ್ನು ಉತ್ತರಿಸಿದ.

"ಅದಕ್ಕೇ ನಿನಗೆ ಒಣಕಲು ಮೀನು" ಎಂದಳವಳು ಬಾಗಿಲಿಗೆ ಬಂದು ನಗುತ್ತ.

ಚಿನ್ನು ಅವಳ ಬಳಿಗೆ ಓಡಿಹೋಗಿ ಕೈಹಿಡಿದು, "ನಾನು ಒಣ ಮೀನನ್ನು ತಿನ್ನಬಲ್ಲೆ. ಅದರ ಚಟ್ನಿ ಮಾಡಿ" ಎಂದ.

"ಆಯಿತು ಮಗೂ" ಎನ್ನುತ್ತ ಹೊನ್ನಮ್ಮ ಅವನನ್ನು ಎತ್ತಿಕೊಂಡಳು. ಅವನು ಅವಳ ಮುಖವನ್ನು ನೋಡಿ ನಕ್ಕ.

ತನಿಯನಿಗೂ ನಗುಬಂತು.

"ಅತ್ತೆಯೊಡನೆ ತುಂಬಾ ಸಲಿಗೆ ಬೆಳೆಸಿದ್ದೀಯಾ! ನಿನಗೊಂದು ಹೆಣ್ಣನ್ನು ಕೊಡಬೇಕೆಂದು ಅವಳೊಡನೆ ಹೇಳು" ಎಂದನವ.

"ನಿನ್ನ ಮಾವನೊಡನೆಂಯೇ ಕೇಳು" ಎಂದಳು ಹೊನ್ನಮ್ಮ.

ಸೀತು ಹೊರಗೆ ಅಂಗಳದ ಕತ್ತಲೆಯನ್ನೇ ನೋಡುತ್ತಿದ್ದಳು ಏನೂ ಮಾತಾಡಲಿಲ್ಲ.

ರಾತ್ರಿ ಹೊನ್ನಮ್ಮ ಅವರನ್ನು ಒಳಗೆ ಊಟಕ್ಕೆ ಕರೆದಳು. ಮೂವರೂ ಊಟ ಮಾಡಿದರು. ಸೀತು ಮಾತ್ರ ಹೊನ್ನಮ್ಮನೊಡನೆ ಏನೂ ಮಾತನಾಡಲಿಲ್ಲ. ಆದರೆ ಅವಳು ಉಂಡ ಅನ್ನದ ಪ್ರಮಾಣ ಕಡಿಮೆಯಿರಲಿಲ್ಲ.

ಊಟವಾದ ಬಳಿಕ ಹೊನ್ನಮ್ಮ ಸೀತುವಿಗೂ ಚಿನ್ನುವಿಗೂ ಹೊರಗೆ ಚಾಪೆ ಹಾಕಿದಳು.

"ನೀವೆಲ್ಲಿ ಮಲಗುತ್ತೀರಿ ಅತ್ತೆ?" ಎಂದು ಚಿನ್ನು ಕೇಳಿದ.

ಸೀತು ಆಗ ಕೋಪದಿಂದ ಅವನಿಗೊಂದು ಹೊಡೆದಳು.

ಹೊನ್ನಮ್ಮ ಓಡಿಬಂದು ಚಿನ್ನುವನ್ನು ಎಳೆದುಕೊಂಡು ಒಳಗೆ ಹೋಗಿ ಒಂದಿಷ್ಟು ತಾಳೆಯ ಬೆಲ್ಲವನ್ನು ತಿನ್ನಲಿಕ್ಕೆ ಕೊಟ್ಟು ಸಮಾಧಾನಪಡಿಸಿದಳು. ಅವನು ಅವಳೊಡನೆಯೇ ಮಲಗುವೆನೆಂದ. ಆಗ ಸೀತು ಅವನನ್ನು ಒಳಗಿಂದ ಕರೆದು ಅವನಿಗೆ ಅಲ್ಲಿಯೇ ಮಲಗಬೇಕೆಂದು ಗದರಿಸಿದಳು. ಅವನು ಕಣ್ಣೀರು ಸುರಿಸುತ್ತ ಚಾಪೆಯಲ್ಲಿ ಉರುಳಿಕೊಂಡ.

ತನಿಯ ತಂಗಿಯೊಡನೆ ಮತ್ತೂ ಊರಿನ ಸುದ್ದಿ ಮಾತಾಡಿದ. ಅಂದು ಅವನಿಗೆ ನಿದ್ದೆ ಹತ್ತುತ್ತಿದ್ದಿಲ್ಲ. ಕೆಲಸ ಮಾಡುವಾಗ ಮೇಸ್ತ್ರಿ ಎಲ್ಲಿಯೋ ಹೋದ್ದರಿಂದ ಅವನೂ ಅವನ ಸಂಗಡಿಗರೂ

ಹೆಚ್ಚು ಕಡಮೆ ಮಾತಾಡುತ್ತಲೇ ಸಮಯ ಕಳೆದಿದ್ದರು. ಸಂಜೆಯೂ ಅವನು ನೆಂಟರ ನೆವ ಹೇಳಿ ಬೇಗನೆ ಮನೆಗೆ ಬಂದಿದ್ದ. ಸೀತುವಿಗೆ ನಿದ್ದೆ ಬರುತ್ತಿದ್ದರೂ ಅವಳು ಆಕಳಿಸುತ್ತ, ಆಕಳಿಸುತ್ತ ಮಾತಾಡುತ್ತಿದ್ದಳು.

ಹೊನ್ನಮ್ಮ ಒಳಗೆಯೇ ಮಲಗಿ ಬಿಟ್ಟಳು. ಅಣ್ಣ ತಂಗಿಯರು ಯಾವಾಗ ಮಾತು ಮುಗಿಸಿ ಮಲಗಿದರೆಂದು ಅವಳಿಗೆ ತಿಳಿಯಲಿಲ್ಲ.

# ೪

ಸೀತು ಬಂಗಾಡಿಗೆ ಹೋಗಿ ಒಂದುವಾರ ಕಳೆದಿದ್ದರೂ, ತನಿಯ ಹೊನ್ನಮ್ಮನೊಡನೆ ಮತ್ತೆ ಮಾತಾಡಿರಲಿಲ್ಲ. ಅವನು ದಿನಾಲೂ ಬೆಳಗ್ಗೆ ಎದ್ದು ಬುತ್ತಿ ಹಿಡಿದುಕೊಂಡು ಕೆಲಸಕ್ಕೆ ಹೋಗುವನು. ಕತ್ತಲೆಗೆ ಬರುವನು. ಒಳಗೆ ಹೋಗಿ ಬಟ್ಟಲನ್ನಿಟ್ಟು ಕುಳಿತುಕೊಳ್ಳುವನು. ಹೊನ್ನಮ್ಮ ಬೇಕಾದುದನ್ನು ಬಡಿಸುವಳು. ಮತ್ತೆ ಅವನು ಹೊರಗೆ ಹೋಗಿ ಮಲಗಿಕೊಳ್ಳುವನು. ಎಲ್ಲಿ ಬಿಟ್ಟು ವೀಳ್ಯದೆಲೆಯನ್ನು ಕೂಡಾ ಅವನು ಅವಳೊಡನೆ ಕೇಳಲಾರ.

ಇದು ಹೊನ್ನಮ್ಮನಿಗೆ ತೀರ ವಿಚಿತ್ರವೆನಿಸಿತು. ತೀರ ಅಸ್ವಾಭಾವಿಕವಾಗಿ ತೋರಿತು. ತನಿಯ ಒಮ್ಮೊಮ್ಮೆ ಹೀಗೆ ಯಾವುದೋ ಅಲ್ಲಸಲ್ಲದ ನೆಪದಲ್ಲಿ ಮಾತು ಬಿಡುವುದಿತ್ತು. ಆದರೆ ಇಷ್ಟು ದೀರ್ಘ ಅವಧಿಯಲ್ಲಿ ಮಾತಾಡದಿರಲಾರ. ಅದೂ ಈ ಸಲ ಅವಳೇನೂ ಅವನೊಡನೆ ಜಗಳ ಮಾಡಿರಲಿಲ್ಲ. ಅವನೂ ಅವಳೊಡನೆ ಏನೊಂದೂ ಬಿರುಸಿನ ಮಾತನ್ನಾಡಿದ್ದಿಲ್ಲ. ಇದು ಅತ್ತಿಗೆಯ ದುರ್ಬೋಧನೆಯ ದೆಸೆಯಿಂದಲೇ ಆಗಿರಬೇಕೆಂದು ಅವಳಿಗೆ ಖಚಿತವಾಯಿತು.

ಹಾಗೆಯೇ ಒಂದು ರಾತ್ರೆ ಪಲ್ಯಕ್ಕೆ ಅವಳು ಬೇಕೆಂದೇ ಉಪ್ಪು

ಹಾಕಲಿಲ್ಲ. ಮೆಣಸು ಹೆಚ್ಚು ಸೇರಿಸಿದಳು. ಆಗಲಾದರೂ ಮಾತಾಡುವನೋ ನೋಡೋಣವೆಂದು ಆಕೆ ಬಗೆದಳು.

ತನಿಯ ಅದನ್ನುಣ್ಣುವಾಗ ಊಟದ ಬಟ್ಟಲನ್ನು ಅವಳ ಮೇಲೆ ಎಸೆದ. ಅನ್ನ ಪಲ್ಯಗಳೆಲ್ಲ ಅಡುಗೆ ಕೋಣೆಯಲ್ಲಿ ಅಲ್ಲಲ್ಲಿ ಬಿದ್ದುವು. ಹಾಗೆ ಮಾಡಿದವನೇ ತನಿಯ ಹೊರಗೆ ಹೋಗಿ ಮುಖ ತೊಳೆದು ಕೊಂಡು ಜಗಲಿಯಲ್ಲಿ ಕುಳಿತ.

ಹೊನ್ನಮ್ಮ ಹೊರಗೆ ಬಂದು,

"ನಿಮಗೇನು ಈಗ ಮೌನ? ನಾನೇನು ಮಾಡಿದ್ದೇನೆ? ನನ್ನನ್ನೇಕೆ ಹೀಗೆ ಹಿಂಸಿಸುತ್ತೀರಿ?" ಎಂದು ಕೇಳಿದಳು.

ತನಿಯ ಉಸುರೆತ್ತಲಿಲ್ಲ.

"ನಿಮಗೆ ನನ್ನ ಮೇಲೆ ಕೋಪವಿದ್ದರೆ ಅದನ್ನು ಮನಸಿನಲ್ಲಿಟ್ಟು ಕೊಳ್ಳುವುದಕ್ಕಿಂತ ನನ್ನೊಡನೆ ಹೇಳುವುದೇ ಮೇಲಲ್ಲವೆ?"

"ನೀನು ಅಷ್ಟೆಲ್ಲ ನನಗೆ ಹೇಳಿಕೊಡುವುದು ಬೇಡ" ತನಿಯ ಗುಡುಗಿದ. "ನನ್ನ ತಂಗಿ ವರ್ಷಕ್ಕೊಮ್ಮೆ ಬರುವವಳು ಬಂದುದು ನಿನಗಾಗಲಿಲ್ಲವಲ್ಲ! ನೀನು ಅವಳನ್ನು ಅವಮಾನ ಮಾಡಿದೆ. ನಾನು ನಿನಗೆ ಇಷ್ಟು ಸಮಯ ಅನ್ನ ಹಾಕಿದ್ದಕ್ಕೆ ನೀನು ತೋರಿಸಿದ ಉಪಕಾರ ಇದು!"

"ಹಾಗೋ? ಹಾಗೆಂದು ಮೊದಲೇ ಹೇಳಬಹುದಿತ್ತಲ್ಲ? ಅವರಿರುವಾಗಲೇ ಹೇಳಿದ್ದರೆ ಇನ್ನೂ ಉತ್ತಮವಿತ್ತು. ನಾನೇನು ಅವರಿಗೆ ಅವಮಾನ ಮಾಡಿದೆನೆಂದು ದೇವರೇ ನೋಡಬೇಕು. ನಾನೊಂದು ಮಾತು ಕೂಡಾ ಅವರಿಗೆ ಕಠಿನವಾಗಿ ಆಡಿಲ್ಲ. ಬದಲಾಗಿ ಅವರೇ ನೀನು ಮಕ್ಕಳಿಲ್ಲದವಳು, ಮಕ್ಕಳನ್ನು ಪ್ರೀತಿಸಲಿಕ್ಕೆ ತಿಳಿಯದವಳು–ಹೀಗೆಲ್ಲ ನನ್ನನ್ನು ಮೂದಲಿಸಿದರು. ನನಗೇನು? ನನ್ನ ಪಾಪ ಕರ್ಮದಿಂದಾಗಿ ಎಲ್ಲರೂ ನನ್ನನ್ನು ಕಸಕ್ಕೆ ಸರಿಯಾಗಿ ಕಾಣುವಂತಾಗಿದೆ. ಜರೆಯುವಂತಾಗಿದೆ. ಇನ್ನು ನೀವೂ ಹೀಗೆ

ಮಾಡಿದರೆ ನನಗೆ ಮರಣವೊಂದೇ ಬಾಕಿ"

ಎನ್ನುತ್ತ ಹೊನ್ನಮ್ಮ ಗಟ್ಟಿಯಾಗಿ ಅತ್ತು ಬಿಟ್ಟಳು.

"ಅದೇ ನನಗೇನು? ನಿನ್ನ ಪಾಪ ನಿನಗೇ. ಇಲ್ಲವಾದರೆ ನನ್ನ ಅಳಿಯನನ್ನು ಹಾಗೆ ನೋಯಿಸಲಿಕ್ಕೆ ಬಿಡುತ್ತಿದ್ದಿಯಾ? ಕಣ್ಣಲ್ಲಿ ರಕ್ತವಿಲ್ಲದವರ ಹಾಗೆ ವರ್ತಿಸುತ್ತಿದ್ದೀ."

"ಹಾಂ. ಅಮ್ಮಾ ಹೇಳಿದರೆ? ನಾನೇನೂ ಅವರಿಗೆ ಹೊಡೆಯಲು ಹೇಳಿರಲಿಲ್ಲ. ಕೋಣಗಳು ಎಲ್ಲಿಯಾದರೂ ಹಾಯ್ದಾವು ಎಂದಿದ್ದೆನಷ್ಟೆ. ಆದರೆ ಚಿನ್ನು ನನ್ನೊಡನೆ ನಲಿಯುತ್ತಿದ್ದಿಲ್ಲವೆ? ಎಲ್ಲ ಬಿಟ್ಟು ಇಲ್ಲೇ ನಿಲ್ಲುವೆನೆಂದು ಕೂಡಾ ಹೇಳಿದ."

"ಹಾಗಾದರೆ ನನ್ನ ತಂಗಿಯೇ ತಪ್ಪುಗಾರಳೆ?"

"ನಾನು ಯಾರನ್ನೂ ತಪ್ಪುಗಾರರೆನ್ನಲಾರೆ. ನನಗೇನು ಅವರು ಮಾಡಿದ್ದಾರೆ? ಮಕ್ಕಳಿಗೆ ಹೆಚ್ಚಿಗೆ ಸಲಿಗೆ ಕೊಡಕೂಡದೆಂದ ಕೂಡಲೇ ಅವರಿಗೆ ಕೋಪ ಬಂದಿರಬೇಕು. ಯಾರಾದರೂ ತಾವಾಗಿ ಕೋಪಗೊಂಡರೆ ಏನು ಮಾಡಬಹುದು? ಎಲ್ಲ ಬಿಟ್ಟು ಉಣ್ಣುವಲ್ಲಿಂದ ಅನ್ನವನ್ನು ಕೂಡಾ ಬಿಟ್ಟು ಎದ್ದರು."

"ಹೌದು ಮುಂಡೇ, ಮಕ್ಕಳ ಮೇಲಿನ ವ್ಯಾಮೋಹ ನಿನಗೆ ಹೇಗೆ ತಿಳಿಯಬೇಕು? ನೀನು ಮಕ್ಕಳಿಲ್ಲದವಳು...."

ಹೊನ್ನಮ್ಮ ಬಿಕ್ಕಿಬಿಕ್ಕಿ ಅಳತೊಡಗಿದಳು.

"ಅದು ನನ್ನ ತಪ್ಪೆ?" ಅವಳೆಂದಳು. "ನಾನೇನಾದರೂ ನನಗೆ ಮಕ್ಕಳಾಗಬಾರದೆಂದು ಹರಿಕೆ ಹೇಳಿಕೊಂಡಿಲ್ಲ. ಅದಕ್ಕಾಗಿಯೇ ಚಿನ್ನುವನ್ನು ಇಲ್ಲೇ ಇರಲು ಹೇಳಿದೆ...."

"ಗೊತ್ತುಂಟು ನಾಯಿ ನಿನ್ನ ಹಣೆ ಬರಹ. ನಿನಗೆ ಮಕ್ಕಳು! ಯಾಕೆ ಮಕ್ಕಳು? ಈಗೊಂದು ಪಲ್ಯ ಮಾಡಿದ್ದೀ, ಅದರಲ್ಲಿ ಉಪ್ಪಿನ ಜಾಲೆಯಿಲ್ಲ. ನಾನೇನು ಜೀವವಲ್ಲವೆ? ಹಗಲಿಡೀ ದುಡಿದು ಬಂದುದಕ್ಕೆ ಇದು ನಿನ್ನ ಉಪಚಾರ. ನಿನಗೆ ತಂದು ಹಾಕಿದುದನ್ನು

ತಿಂದು ಕೊಬ್ಬು ಬೆಳೆದಿದೆ. ಮರಕ್ಕೆ ಹಾಯುವನೋ, ಕಲ್ಲಿಗೆ ಹಾಯುವನೋ ಎಂದು ತಿಳಿಯದಾಗಿದೆ. ನಿನ್ನ ಸೊಕ್ಕನ್ನೆಲ್ಲ ಇಳಿಸದೆ ಬಿಟ್ಟರೆ ನಾನು ಯಾರಿಗೆ ಹುಟ್ಟಿದವನೆಂತ ಕೇಳು!"

"ಅಯ್ಯೋ!" ಹೊನ್ನಮ್ಮ ಕಿವಿಗಳನ್ನು ಮುಚ್ಚಿಕೊಂಡು ರೋದಿಸಿದಳು. "ಅಯ್ಯೋ! ನೀವೇಕೆ ಹೀಗೆ ಹೇಳುತ್ತೀರಿ. ನಿನ್ನೆ ಮೊನ್ನೆ ನಾನು ಇಲ್ಲಿ ಬಂದವಳಲ್ಲ. ಇಷ್ಟು ವರ್ಷವೂ ನಾನು ದುಡಿಯದೆಯೇ ತಿಂದೆನೆ? ನನ್ನ ಸೊಕ್ಕೆನ್ನುತ್ತೀರಿ, ಕೊಬ್ಬೆನ್ನುತ್ತೀರಿ. ಚಿಂತೆಯಿಲ್ಲ. ಅದಕ್ಕೇ ನಿಮ್ಮ ತಂಗಿ ಇನ್ನೊಂದು ಮದುವೆಯ ಪ್ರಸ್ತಾಪವೆತ್ತಿದುದಾಗಿರಬೇಕು. ನೀವು ಇನ್ನೊಂದು ಮದುವೆ ಯಾದೊಡನೆ ನಾನು ನನ್ನ ಜೀವನವನ್ನು ಕಳೆದುಕೊಳ್ಳದಿರಲಾರೆ."

"ಜೀವ ಕಳೆದುಕೊಂಡರೆ ಒಳ್ಳೆಯದಾಯಿತು" ಎಂದ ತಸಿಯ.

ಹೊನ್ನಮ್ಮ ಬಳಿಕ ಒಳಗೆ ಹೋಗಿ ಅಳುತ್ತ ನೆಲದ ಮೇಲೆ ಮಲಗಿಕೊಂಡಳು. ತಸಿಯನೂ ದೀಪ ಆರಿಸಿ ಚಾಪೆ ಬಿಡಿಸಿ ಹೊರಗೆ ಮಲಗಿದ. ಅವನಿಗೆ ಆಗಾಗ ಹೊನ್ನಮ್ಮ ಬಿಸುಸುಯ್ಯುವುದು ಕೇಳುತ್ತಿತ್ತು.

ಈ ಒಳಜಗಳದ ನಂತರ ಅವನ ಮನಸ್ಸು ತುಂಬಾ ಕೆದರಿತ್ತು. ಅವನಿಗೆ ಹೊನ್ನಮ್ಮನನ್ನು ಅನಾವಶ್ಯಕವಾಗಿ ನೋಯಿಸುವ ಇಚ್ಛೆ ಯಿರಲಿಲ್ಲ. ಆದರೂ ತನ್ನ ತಂಗಿಯ ವಿವರಣೆಗಳು ಅಷ್ಟು ಚುಚ್ಚು ವಂತಿದ್ದುವು. ಹೊನ್ನಮ್ಮ ಚಿನ್ನುವನ್ನು ಬೈದಳಂತೆ. ಅವನಿಗೆ ಹೊಡೆಯಲು ಸೀತುವನ್ನು ಪ್ರೇರೇಪಿಸಿದಳಂತೆ. ಹೊಡೆಯುವುದನ್ನು ನೋಡಿ ಆನಂದ ಪಟ್ಟಳಂತೆ!

ಇವನ್ನೆಲ್ಲ ಕೇಳುವಾಗ ಅವನಿಗೆ ಬಹಳ ಕೋಪ ಬಂದಿತ್ತು. ಆದರೆ ಈ ಘಟನೆಗಳನ್ನು ಸರಿಯಾಗಿ ಪರಿಶೀಲಿಸಿ ಅರ್ಥಮಾಡಿ ಕೊಂಡಿರಲಿಲ್ಲ ಅವನು. ತಂಗಿ ತನ್ನ ಉದ್ಧಾರಕ್ಕಾಗಿಯೇ ಇವನ್ನೆಲ್ಲ ಹೇಳಿರಬೇಕೆಂದು ಅವನು ಆವೇಶದ ಭರದಲ್ಲಿ ಕಲ್ಪಿಸಿದ್ದ. ನಿಜ

ನಾಗಿಯೂ ಪೊನ್ನಮ್ಮನಿಗೆ ತಾಯ್ತನದ ಪ್ರೇಮ ತಿಳಿಯದು. ಆಕೆ ತನ್ನ ಅಳಿಯನನ್ನು ಹಗೆತನದಿಂದ ಕಾಣುವುದರಲ್ಲಿ ಆಶ್ಚರ್ಯವಿಲ್ಲ

ಹೀಗೆಂದು ಅವನು ಮೊದಲು ಎಣಿಸಿದ್ದ. ಆದರೆ ಈಗ ಪೊನ್ನಮ್ಮ ಹೇಳಿದುದೂ ಸತ್ಯವೆಂದು ಅವನಿಗೆ ಕಂಡು ಬಂತು. ಅಂದು ರಾತ್ರೆ ಚೆನ್ನುವು ಅವಳೊಡನೆ ಆಟವಾಡುತ್ತಿದ್ದುದನ್ನು, ಮಲಗುವಾಗಲೂ ಅವಳೊಡನೆಯೇ ಮಲಗಬೇಕೆಂದು ಹಠ ಹಿಡಿದುದನ್ನು ನೆನಪಿಗೆ ತಂದುಕೊಂಡ. ಈ ವಿಚಾರದಲ್ಲಿ ತನ್ನ ತಂಗಿಯೇ ಸ್ವಲ್ಪ ಹೆಚ್ಚು ಮುಂದುವರಿದಿರಬಹುದೆಂದು ಅವನಿಗೆ ಆಗ ಕಲ್ಪನೆಯಾಯಿತು. ಪೊನ್ನಮ್ಮ ಏನಾದರೂ ಜಗಳ ಗಂಟಿಯಲ್ಲ. ಅವಳು ಈ ಇಪ್ಪತ್ತು ವರ್ಷಗಳಲ್ಲಿ ಅವನೊಡನಾಗಲೀ ಇತರರೊಡನಾಗಲೀ ಜಗಳ ವಾಡಿದುದು ಅವನಿಗೆ ನೆನಪಿಲ್ಲ. ಮತ್ತೆ ತನ್ನ ತಂಗಿಯೊಡನೆಯಂತೂ ಜಗಳವಾಡಲು ಅವಳಿಗೆ ಕಾರಣವೇ ಇಲ್ಲ. ಸೀತು ನೆಂಟರ ಹಾಗೆ ಬಂದವಳು. ಅವಳೇನೂ ಉಳಕೊಳ್ಳುವವಳಲ್ಲ. ಇಲ್ಲಿನ ತನ್ನ ಮನೆಯಿಂದ ಏನನ್ನಾದರೂ ಕೊಂಡು ಹೋಗುವವಳಲ್ಲ. ಹೀಗಾಗಿ ಪೊನ್ನಮ್ಮ ತಾನಾಗಿ ಅವಳ ಮೇಲೆ ಉರಿದು ಬಿದ್ದಿರಲಿಕ್ಕಿಲ್ಲ. ಏನೋ ಮಕ್ಕಳ ವಿಷಯವಾಗಿ ಮಾತಾಡಿದಾಗ ಸೀತುವಿಗೆ ಕೋಪ ಬಂದಿರಬಹುದು. ಹಾಗೆಯೇ ಅವಳು ತನ್ನ ನೊಟಕುವಾದವನ್ನು ಆರಂಭಿಸಿರಬಹುದು.

ಈ ಯೋಚನೆಗಳ ಮಧ್ಯೆ ತಿಮ್ಮಯ್ಯನಿಗೆ ನಿದ್ದೆ ಹತ್ತಲಿಲ್ಲ. ಇನ್ನೊಮ್ಮೆ ದೀಪ ಉರಿಸಿ, ವೀಳ್ಯದೆಲೆಯ ತಟ್ಟೆಯನ್ನು ತೆಗೆದು ಕೊಂಡು ವೀಳ್ಯ ಜಗಿದ. ಮನಸ್ಸು ಇನ್ನೂ ತಣ್ಣಗಾಗಲಿಲ್ಲ.

ಪೊನ್ನಮ್ಮನಿಗೆ ಮಕ್ಕಳಿಲ್ಲ, ನಿಜ. ಅದು ತನ್ನದೇ ಕೊರತೆ ಯಿಂದಾಗಿಯೇ ಹಾಗಾಗಿದೆ. ಆದರೆ ಅವಳನ್ನು ಅದಕ್ಕಾಗಿ ಬಿಟ್ಟು ಬಿಟ್ಟು ಇನ್ನೊಬ್ಬಳನ್ನು ಆಗುವುದೆಂದರೆ! ಇಲ್ಲವೇ ಪೊನ್ನಮ್ಮನನ್ನೂ ಅವಳನ್ನೂ ಒಟ್ಟಿಗೆ ಮನೆಯಲ್ಲಿ ಇರಗೊಡಿಸಬಹುದೆ? ಅದೂ ಇನ್ನೊ

ಟ್ಟಳಿಗಾದರೂ ಮಕ್ಕಳಾದೀತೆಂಬ ಭರವಸೆ ಇಲ್ಲ. ಈಗ ಏನಿಲ್ಲದಿದ್ದರೂ ಸಂಸಾರ ಸುಸೂತ್ರವಾಗಿ ಸಾಗುತ್ತಿದೆ. ಹೊನ್ನಮ್ಮ ಮನೆಗೆಲಸದಲ್ಲಿ ಜಾಣೆ. ಮತ್ತೆ ಇನ್ನು ಬರುವವಳು ಹೇಗೆ ವರ್ತಿಸುವಳೋ ಯಾರಿಗೆ ಗೊತ್ತು! ಅಲ್ಲದೆ ಹೊನ್ನಮ್ಮನಿಗೂ ಅವಳಿಗೂ ದಿನಾಲೂ ಜಗಳ ತಪ್ಪದು. ಮನೆಯ ಖರ್ಚು ಹೆಚ್ಚಾಗುವುದು. ಊರವರೆಲ್ಲ ನಿಂದಿಸುವರು.

ಅದೂ ತನ್ನಂಥ ಈ ಗೂಡೆ ಸ್ಮಶಾನಕ್ಕೆ ಹೊರಡಲು ಸಿದ್ಧವಾಗಿದೆ. ಇನ್ನು ಹೆಚ್ಚೆಂದರೆ ಹತ್ತುಪ್ಪತ್ತು ವರ್ಷಗಳಲ್ಲಿ ತಾನು ಮುದುಕನಾಗಿ ಸಾಯುವುದು ನಿಶ್ಚಯ. ಈಗಿನ ಹುಡುಗಿಗೆ ಪ್ರಾಯ ಇಪ್ಪತ್ತೈದು ವರ್ಷವಂತೆ. ಅವಳ ಯೌವನಕ್ಕೂ ತನ್ನ ಇಳಿವಯಸ್ಸಿಗೂ ಸರಿಹೊಂದಬಹುದೆ? ಹೊನ್ನಮ್ಮ ಹೇಗಾದರೂ ತನ್ನ ಹಾಗೆಯೇ ಮುದುಕಿಯಾಗುತ್ತಿರುವಳು. ವೈದ್ಯನ ಮಾತು ನಿಜವಾಗಿ ಒಂದು ವೇಳೆ ಇನ್ನು ಮಕ್ಕಳಾಗಿಯಾದರೂ ಏನು ಪ್ರಯೋಜನ? ಯಾವ ಸಿರಿವಂತಿಕೆಯನ್ನು ಅವರು ಉಣ್ಣಬೇಕು? ತಾನು ಸತ್ತ ಬಳಿಕವೂ ಹೊನ್ನಮ್ಮ ಉಳಿದರೆ, ಅವಳು ಹೇಗಾದರೂ ಜೀವಿಸದೆ ಬಿಡಲಿಕ್ಕಿಲ್ಲ. ಮತ್ತೆ ಮಕ್ಕಳು ತಂದೆತಾಯಂದಿರನ್ನು ಮುದಿಪ್ರಾಯದಲ್ಲಿ ಸಲಹುವರೆಂಬುದರಲ್ಲಿ ತಥ್ಯಾಂಶವಿಲ್ಲ.

ತನ್ನ ತಂದೆಗೂ ತಾನು ಕೂಡಾ ನಾಲ್ಕು ಜನ ಮಕ್ಕಳಿರಲಿಲ್ಲವೆ? ಆದರೆ ಅವನು ಕೂದಲು ನರೆತು ಹಲ್ಲುಗಳು ಬಿದ್ದುಹೋಗಿ ಮುದುಕನಾದಮೇಲೆ ತಾವು ಯಾರೂ ಅವನಿಗೆ ಸಹಾಯವನ್ನೀಯಲಿಲ್ಲ. ತನ್ನ ಅಣ್ಣನೊಬ್ಬ ಮುಂಚೆಯೇ ಪಟ್ಟಣದ ಕೂಲಿ ಕೆಲಸದ ಜೀವನವನ್ನು ಬಯಸಿ, ಮನೆ ಬಿಟ್ಟಿದ್ದ. ತಾನು ಮದುವೆಯಾಗುವವರೆಗೆ ಮನೆಯಲ್ಲಿದ್ದು ಮತ್ತೆ ತಂದೆಯ ಕೈಯಿಂದ "ಪಾಲು" (!) ತೆಗೆದುಕೊಂಡು ಹೊರಟ. ತಂಗಿ ಗಂಡನ ಮನೆ ಸೇರಿದಳು. ತಮ್ಮನೊಬ್ಬ ಮದುವೆಯಾದೊಡನೆ ಮಾವನ ಮನೆಯಲ್ಲಿ ಹೋಗಿ ನಿಂತ. ಕೊನೆಗೆ

ತಂದೆ ಮೊದಲು ಸತ್ತ. ಅವನು ಸಾಯುವಾಗ ಉಣ್ಣಲಿಕ್ಕ ಕೂಡಾ ಇಲ್ಲದಾಗಿತ್ತು. ತಾಯಿ ಒಬ್ಬಳೇ, ಮತ್ತೆ ಸ್ವಲ್ಪ ಕಾಲ ದುಡಿದು, ಕ್ರಮೇಣ ಭಿಕ್ಷೆ ಬೇಡಿ ಸತ್ತಿದ್ದಳು. ಅವರಿಬ್ಬರಿಗೂ ಮಕ್ಕಳಿಂದ ಒಂದು ಚಿಕ್ಕಾಸೂ ಲಾಭವಾಗಲಿಲ್ಲ. ಅವರು ಸಾಕಿ ಸಲಹಿದ್ದಕ್ಕೆ ಮಕ್ಕಳು ಅವರಿಗೆ ಸಾಯುವಾಗ ಒಂದು ತಟಕು ನೀರು ಕೂಡಾ ಬಿಡಲಿಲ್ಲ....

ಆದ್ದರಿಂದ ಕೇವಲ ಮಕ್ಕಳಿಗಾಗಿ ಮದುವೆಯಾಗುವುದರಲ್ಲಿ ಅರ್ಥವಿಲ್ಲ. ಹಾಗೆ ಮಕ್ಕಳ ಅವಶ್ಯಕತೆಯಿದ್ದಲ್ಲಿ ಅನಾಥ ಮಕ್ಕಳನ್ನು ಮನೆಯಲ್ಲಿ ಇರಿಸಿಕೊಳ್ಳಬಹುದು. ಇಲ್ಲವೇ ಒಬ್ಬ ಅಳಿಯನನ್ನು ಇಲ್ಲಿ ನಿಲ್ಲಹೇಳಬಹುದು. ಆ ಸಮಸ್ಯೆಗಳೆಲ್ಲ ಚಿಕ್ಕವು. ಆದರೆ ಹೊಸ ದೊಂದು ಮದುವೆ, ಹೊಸದೊಂದು ಹೆಣ್ಣು, ಹೊಸದೊಂದು ಬಾಯಿ— ಇವೆಲ್ಲ ಕಷ್ಟದ ವಿಷಯಗಳು. ಇವುಗಳಿಂದ ಅನೇಕ ವಿಷಮ ಪರಿಣಾಮ ಗಳೂ ಸಂಭವಿಸಬಹುದು.

ಈ ಚಿತ್ರ ತನಿಯನಿಗೆ ಹಿಡಿಸಲಿಲ್ಲ.

ದೀಪ ನಂದಿಸಿ ರಗ್ಗಿನ ಒಳಗೆ ಹೋದ

ಹೊನ್ನಮ್ಮನಿಗೆ ಆಗ ನಿದ್ದೆ ಬಂದಿತ್ತು. ಅವಳ ಕಾಲನ್ನು ಅವನು ಕತ್ತಲಲ್ಲಿ ತುಳಿದಾಗ ಅವಳಿಗೆ ಎಚ್ಚರಿಕೆಯಾಗಿ ಥಕ್ಕನೆ ಎದ್ದು ಕುಳಿತಳು.

“ನಾನು” ಎಂಬ ಸ್ವರ ಆಗ ಅವಳಿಗೆ ಕೇಳಿತು.

ಅವಳು ಅವನ ಮೈಮೇಲೆ ಕೈಯಾಡಿಸುತ್ತಿದ್ದಳು.

“ನಾನು” ಎಂದನವ ಮರಳಿ.

ಆಕೆ ಮಾತಾಡಲಿಲ್ಲ. ಮರಳಿ ಚಾಪೆಯಲ್ಲಿ ಉರುಳಿಕೊಂಡಳು. ಮರುಕ್ಷಣದಲ್ಲಿ ಆವನ ತೋಳುಗಳು ಅವಳನ್ನಪ್ಪಿದ್ದುವು.

ಹೊನ್ನಮ್ಮನಿಗೆ ತನಿಯನ ಈ ಮೃದುವರ್ತನೆಯಿಂದ ಜೀವ ಬಂದಂತಾಯಿತು. ಅವನ ಕೋಪವೆಲ್ಲ ನೀರಾಗಿರಬೇಕೆಂದು ಅವಳಿಗೆ

ಖಚಿತವಾಯಿತು. ಇನ್ನು ಅವನು ಬೇರೆಯವಳನ್ನು ಮದುವೆಯಾಗಲಾರ.

"ತಿರುಪತಿಗೊಂದು ಹರಿಕೆ ಹೇಳಿ ಅಂದೆನಲ್ಲ?" ಎಂದಳಾಕೆ ತುಸು ಸಮಯ ಕಳೆದಾದ ಬಳಿಕ.

"ಹೊಂ. ಹರಿಕೆ ಹೇಳಿದರೆ ಸಾಕೆ? ಮನುಷ್ಯರನ್ನು ಮೋಸ ಮಾಡಿದಂತೆ ದೇವರನ್ನು ಮೋಸ ಮಾಡಲಿಕ್ಕಾಗದು."

"ಅಲ್ಲ, ಧನಿಗಳಿಗೂ ತಿರುಪತಿಗೆ ಹರಿಕೆ ಹೇಳಿದ ಬಳಿಕವೇ ಮಕ್ಕಳಾದುವಂತೆ, ನಿಮಗೆ ಗೊತ್ತಿಲ್ಲವೆ?"

"ಹಾಗೆಲ್ಲ ಹರಿಕೆ ಹೇಳಿಯೇ ಮಕ್ಕಳಾಗುತ್ತಿದ್ದರೆ, ಈಗಿರುವ ಎಷ್ಟೋ ಜನ — ನನ್ನಂಥವರು — ಹುಟ್ಟುತ್ತಿರಲಿಲ್ಲ. ಬದಲಾಗಿ ಎಷ್ಟೋ ಜನ ಬೇರೆ ಹುಟ್ಟುತ್ತಿದ್ದರು. ನಮ್ಮ ಹಣೆಯಲ್ಲಿ ಬರೆದುದು ಆಗಿಯೇ ಹೋಗುತ್ತದೆ. ಮತ್ತೆ ಹರಿಕೆ, ಪ್ರಶ್ನೆ ಇದೆಲ್ಲ ಏಕೆ?"

"ನಿಮ್ಮಿಚ್ಛೆ."

"..........."

"ಹಾಗಾದರೆ, ನೀವು ಬೇರೊಬ್ಬಳನ್ನು ಕರೆದು ತರುವುದು ನಿಶ್ಚಯವೇ ಅಲ್ಲವೆ?"

"ಸುಮ್ಮನೆ ಏನೇನೋ ಮಾತಾಡಬೇಡ."

"ಅಲ್ಲ ಅತ್ತಿಗೆ ನಿಮ್ಮೊಡನೆ ಹೇಳುವುದನ್ನು ಕೇಳಿ ಹೇಳುತ್ತಿದ್ದೇನೆ ಅಷ್ಟೆ. ಹುಡುಗಿಗೆ ಚಿನ್ನವಿದೆಯಂತೆ. ರೂಪವಿದೆಯಂತೆ."

"ನಿದ್ದೆಯ ಅಮಲಿನಲ್ಲಿ ಏನೇನೋ ಮಾತಾಡುತ್ತೀಯಲ್ಲ?" ಎಂದು ಅವನು ಅವಳನ್ನು ಬರಸೆಳೆದ.

"ಅಲ್ಲ ನಿಮಗೆ ಮಕ್ಕಳಾಗಲಿಕ್ಕೆಂದು ಒಂದು ಮದುವೆಯಾಗಬಹುದು. ಲೋಕೋಪಚಾರಕ್ಕೊಂದು ಮದುವೆಯಾಗಬಹುದು. ತಮಾಷೆಗೆ ಒಂದು ಮದುವೆಯಾಗಬಹುದು. ಚಿನ್ನಕ್ಕೆಂದು ಒಬ್ಬಳ ಕೈಹಿಡಿಯಬಹುದು. ರೂಪಕ್ಕೆಂದು ಮತ್ತೊಬ್ಬಳನ್ನು ತರಬಹುದು.

ಇವೆಲ್ಲ ನಿಮಗೇ ಅಂದರೆ ಗಂಡಸರಿಗೇ ಹೇಳಿದ್ದು. ನೀವೇನು ಮಾಡಿದರೂ ಯಾರೂ ಕೇಳುವಂತಿಲ್ಲ. ಆದರೆ ಹೆಂಗಸೊಬ್ಬಳು ಗಂಡನ ಹೊರತಾಗಿ ಇನ್ನೊಬ್ಬನೊಡನೆ ಏನಾದರೂ ಮಾತಾಡಲಿ, ಆಕೆ ಯಾರಿಗೂ ಬೇಡದವಳಾಗುತ್ತಾಳೆ. ಅವಳು ಇನ್ನೊಬ್ಬನನ್ನು ನೋಡಬಾರದು. ಗಂಡನಿಲ್ಲದ ವೇಳೆಯಲ್ಲಿ ಇನ್ನೊಬ್ಬನಿಗೆ ಅನ್ನ ಹಾಕಬಾರದು. ಎಲ್ಲ ಬಿಟ್ಟು ಅವಳು ಒಬ್ಬಂಟಿಗಳಾಗಿರುವಾಗ ಗಂಡನಿಗೆ ನೀರು ಕೂಡಾ ಕೊಡಬಾರದು! ನೀವೇ ನನ್ನನ್ನು ಮದುವೆಯಾದ ಬಳಿಕ ನಿಮ್ಮ ತಮ್ಮ ನನ್ನೊಡನೆ ಮಾತಾಡಿದ್ದಕ್ಕೆ ಅವನ ಕೆನ್ನೆಗೆ ಎರಡು ಥಳಿಸಿಲ್ಲವೆ? ಮತ್ತೆ ನಾನು ಗುಡ್ಡೆಗೆ ಹೋಗುವಾಗ, ಸೊಪ್ಪು ತರಲಿಕ್ಕೆ ಹೋಗುವಾಗ, ಸ್ನಾನಕ್ಕೆ ಹೋಗುವಾಗ ನೀವು ನನ್ನನ್ನು ಕಳ್ಳರಂತೆ ಹಿಂಬಾಲಿಸಿ ಅಡಗಿ ಬಂದಿರಲಿಲ್ಲವೆ? ಅಷ್ಟು ಸುಲಭವಾಗಿ ನಿಮಗೆ ನನ್ನ ಮೇಲೆ ಸಂಶಯ ಮೂಡಿತ್ತಾಗ. ಆದರೆ ನೀವು ಆ ನಾಚಿಕೆಕೆಟ್ಟ ಮೋಂಟಿನಿಗೆ ಉಪಚಾರ ನಡೆಸಿದಾಗ ಯಾರೂ ಏನೂ ಅನ್ನಲಿಲ್ಲ! ಎಲ್ಲ ಬಿಟ್ಟು ಅವಳ ಸಹವಾಸದಿಂದಾಗಿ ಅಸಹ್ಯ ರೋಗಗಳನ್ನು ಕೂಡಾ ಅಂಟಿಸಿಕೊಂಡು ಮನೆಯಲ್ಲಿ ಮಲಗಿದಿರಿ, ಶುಶ್ರೂಷೆ ಮಾಡಿಸಿದಿರಿ. ಆದರೂ ನಿಮಗಿನ್ನೂ ಬುದ್ಧಿ ಬಂದಿಲ್ಲ. ಇನ್ನು ನಿಮಗೆ ಹೊಸಬಳೊಬ್ಬಳು ಬಂದು ಸ್ವರ್ಗಕ್ಕೆ ಕಳಿಸುತ್ತಾಳೆ. ನಾನೇಕೆ ಇನ್ನು, ಶುದ್ಧ ಪರದೇಶಿ! ನನ್ನಂಥ ಬಂಜೆ ನಿಮ್ಮ ಹೆಂಡತಿಯೆಂದರೆ ನಿಮಗೇ ನಾಚಿಕೆಕೇಡು."

"ಏನೇ, ನಿನ್ನ ನಾಲಿಗೆ ಸ್ವಲ್ಪ ಉದ್ದವಾದಂತ ಕಾಣುತ್ತದಲ್ಲ?" ತನಿಯ ತಿಳಿಯಾಗಿಯೇ ಹೇಳಿದ.

"ನಾಲಿಗೆ ಉದ್ದವಾಗಿದ್ದರೆ ಗಿಡ್ಡದನ್ನಾಗಿ ಮಾಡುವ ಶಕ್ತಿ ನಿಮಗಿದೆಯಲ್ಲ? ಬಹುಶಃ ಈಗೀಗ ನಾಕಷ್ಟು ಹೆಂಡ ಇಲ್ಲವೇ ಶರಾಬು ಸಿಗೋದಿಲ್ಲವೆಂದು ತೋರುತ್ತದೆ."

"ಹೌದೌದು. ಕೊಟ್ಟರೆ ನೀನೂ ಬಿಡುವವಳಲ್ಲ. ಅಕ್ಕಚ್ಚು

ಕುಡಿದ ಹಾಗೆ ಕುಡಿಯುತ್ತೀ."

"ಆದರೆ ನಾನು ಕುಡಿದರೆ ನಿಮ್ಮ ಹಾಗೆ ತಲೆಯಮೇಲೂ ಅದನ್ನು ಹೊಯ್ದುಕೊಳ್ಳೋದಿಲ್ಲ. ನಿಮ್ಮ ಹಾಗೆ ರುದ್ರಭೀಷಣ ವೇಷ ಹಾಕಿದವರಂತೆ ಮೈಮೇಲಿನ ವಸ್ತ್ರಗಳನ್ನು ಕಳಚಿ ಅಂಗಳದಲ್ಲಿ ಕುಣಿಯೋದಿಲ್ಲ."

"ಆಯಿತಪ್ಪ, ನನ್ನ ಹಾಗೆ ನೀನೇನೂ ಮಾಡೋದಿಲ್ಲ. ನಿನಗೆ ನನಗಿಂತಲೂ ಗಟ್ಟಿಮುಟ್ಟಾದ ಗಂಡನೊಬ್ಬ ಮಾತ್ರ ಬೇಕಾಗಿದ್ದಾನೆ. ಅಲ್ಲವೆ ?"

"ನಿಮ್ಮ ತ್ರಾಣವೇನಾದರೂ ಕುಂದಿಹೋಗಿಲ್ಲ."

"ಅಲ್ಲ ಮಕ್ಕಳಾಗಲಿಕ್ಕೆ...."

"ಅದು ನನಗಲ್ಲ, ನಿಮಗೇ...."

"ನನಗಲ್ಲ, ನಿನಗೇ...."

"ನಿಮಗೇ...."

"ನಿನಗೇ...."

ಅಲ್ಲಿಗೆ ಈ ಟೊಳ್ಳುಗಟ್ಟಿ ವಾಗ್ಯುದ್ಧವು ನಿಂತಂತಾಯಿತು. ತನಿಯ ಹೊದೆಯುವ ವಸ್ತ್ರವನ್ನು ಹೊನ್ನಮ್ಮನ ಮೇಲೆ ಬಿಡಿಸಿಹಾಕಿ ತನ್ನಮೇಲೂ ಎಳೆದುಕೊಂಡ.

ಈ ಸಂಭಾಷಣೆಯಿಂದಾಗಿ ಇಬ್ಬರ ಮನಸ್ಸೂ ಬಹಳ ಹಗುರಾಯಿತು. ಹೊನ್ನಮ್ಮ ಇಷ್ಟು ನಿರ್ದಾಕ್ಷಿಣ್ಯವಾಗಿ, ಇಷ್ಟು ಸ್ಪಷ್ಟವಾಗಿ ಅವನೊಡನೆ ಎಂದೂ ಮಾತಾಡಿರಲಿಲ್ಲ. ಅವಳ ಮನಸ್ಸು ಸೀತು ಹೋದಂದಿನಿಂದಲೂ ಕುದಿಯುತ್ತಿತ್ತು. ಈಗ ಅದರ ಬೇನೆ ಮಾಯವಾಯಿತು.

ಮರುದಿನ ಬೆಳಗ್ಗೆ ತನಿಯ ಎದ್ದವ ಬೇಗನೇ ಊಟ ತೀರಿಸಿ ಕೆಲಸಕ್ಕೆ ಹೊರಟ. ಜೇಬಿನಲ್ಲಿ ಎರಡಾಣೆ ಚಿಲ್ಲರೆಯಿದ್ದುದರಲ್ಲಿ ಒಂದಾಣೆಯ ಎಲೆಯಡಿಕೆಯನ್ನು, ಇನ್ನೊಂದು ಲೋಟ ಚಹವನ್ನು

ಕುಡಿದು ತನ್ನ ಸಂಗಡಿಗರ ಬಳಿಗೆ ಹೋದ. ಅವರೂ ಆಗತಾನೇ ಕೆಲಸಕ್ಕೆ ಬಂದು ವೀಳ್ಯ ಜಗಿಯುತ್ತಿದ್ದರಷ್ಟೆ

"ಏನು ತಸಿಯಣ್ಣಾ, ಇವತ್ತು ನಿನ್ನ ಮುಖದಲ್ಲಿ ಗೆಲವು ಪುಟಿ ಹಾರುತ್ತದಲ್ಲಾ !" ಎಂದು ನಗುತ್ತ ಸಂಕಪ್ಪನೆಂದ.

"ನಿನ್ನ ಹಾಗೆ ದಿನಕ್ಕೊಬ್ಬ ಹುಡುಗಿಯರು ನನಗಿರುತ್ತಿದ್ದರೆ ಇನ್ನೂ ಗೆಲವಿನಲ್ಲಿರುತ್ತಿದ್ದೆ" ಎಂದ ತಸಿಯ.

"ಹೆಂಗಸರಿಂದಾಗಿಯೇ ನಿನ್ನ ಮುಖಕ್ಕೆ ಗೆಲವು ಬರುವುದೇ ?" ಎಂದು ಸಂಕಪ್ಪ ಹೇಳುವಾಗ ಎಲ್ಲರೂ ನಕ್ಕರು.

"ಏನಾದರೂ ತನಿಯಣ್ಣ ಪ್ರಯೋಜನವಿಲ್ಲ. ಈ ತನಕ ಒಂದು ಮಗುವನ್ನು ಕೂಡಾ 'ಕೇ' ಎಂದು ಕೂಗಿಸಲಿಲ್ಲ." ನಾರ್ಣಪ್ಪನೆಂದ.

"ಹ್ಹೊ ! ನೀವೆಲ್ಲ ಭಾರೀ ಹುಶಾರು" ತನಿಯ ನುಡಿದ.

"ಮತ್ತೇನು ? ನಾರ್ಣಪ್ಪನಿಗೆ ಮದುವೆಯಾದ ಆರು ತಿಂಗಳಲ್ಲೇ ಒಂದು ಮಗುವಾಯಿತು. ನಿನಗೆ ಗೊತ್ತಿಲ್ಲವೇ ? ಅಯ್ಯೋ ಪೆಂಗ !" ಎನ್ನುತ್ತ ಗಂಗಯ್ಯ ನಡುವೆ ಬಾಯಿ ಹಾಕಿದ.

"ಹಾಗೆ ಅವನು ಈ ತನಕ ಹುಟ್ಟಿಸಿದ ಮಕ್ಕಳ ಲೆಕ್ಕವಿಡುತ್ತಿದ್ದರೆ ಎಷ್ಟಾಗುತ್ತಿತ್ತೋ !" ಎಂದು ಸಂಕಪ್ಪ ಗಹಗಹಿಸಿ ನಕ್ಕ. ಉಳಿದವರೂ ನಕ್ಕರು.

"ತನಿಯಣ್ಣನೇನಾದರೂ ಚಿಲ್ಲರೆ ಜನವೆಂದು ನೆನೆಯಬೇಡಿ." ನಾರ್ಣಪ್ಪನೆಂದ. "ಆ ಮೋಂಟುನಿನಿಂದ ವರ ಪ್ರಸಾದ ಪಡೆದ ಜನ ಅವನು ತಿಳಿಯಿತೆ ?"

"ಎಷ್ಟೆಂದರೂ ತನಿಯಣ್ಣ ಈಗ ಮುದುಕನಾಗುತ್ತಿದ್ದಾನೆ. ನಿನ್ನ ಹಾಗೆ ಯಾರ್‍ಯಾರ ಮನೆಯ ಹಿಂದೆ ಅವಿತು ಕುಳಿತು, ಹಿಡಿಸೂಡಿಯ ಫಲಹಾರ ಮಾಡಲಿಲ್ಲ ಅವನು" ಎಂದು ಗಂಗಯ್ಯ ಪ್ರತಿಭಟಿಸಿದ.

"ಅದಿರಲಿ," ನಾರ್ಣಪ್ಪ ನಗುತ್ತ ಹೇಳಿದ. "ಹಾವು ಮುಪ್ಪಾದರೆ ವಿಷ ಮುಪ್ಪಾಗದು."

"ಏ ಸಾಕೋ ನಿನ್ನ ಪುರಾಣ. ತಸಿಯಣ್ಣ, ನಾನು ಅಡಿಕೆ ಮನೆಯಲ್ಲೇ ಮರೆತು ಬಿಟ್ಟೆ. ಒಂದು ಹೋಳು ಕೊಡು," ಎನ್ನುತ್ತ ಸಂಕಪ್ಪ ತನಿಯನ ಬಳಿ ಹೋದ.

"ಓ! ಆ ಸತ್ತ ಮೇಸ್ತ್ರಿ ಬಂದೇ ಬಿಟ್ಟ. ಇಗೋ, ಬೇಗ ತಿನ್ನು" ಎಂದು ತನಿಯ ಅವನಿಗೆ ಒಂದು ಅಡಿಕೆ ಹೋಳನ್ನಿತ್ತ.

ಮೇಸ್ತ್ರಿ ಸೈಕಲಿನಲ್ಲಿ ಬರುವುದನ್ನು ಕಂಡೊಡನೆ ಎಲ್ಲರೂ ಚಮ್ಮಟಿಕೆ ಹಿಡಿದುಕೊಂಡು ಕೆಲಸದಲ್ಲಿ ನಿರತರಾದರು. ಮೇಸ್ತ್ರಿ ಬಂದವ ಸೈಕಲನ್ನು ಒಂದು ಮರದ ಅಡಿಯಲ್ಲಿ ನಿಲ್ಲಿಸಿದ.

"ಇದೇನು, ನೀವು ಕಲ್ಲುಗಳನ್ನು ಸರಿಯಾಗಿ ಒಡೆಯುತ್ತಿಲ್ಲ," ಎನ್ನುತ್ತಾ ಒಂದು ಜಲ್ಲಿ ಕಲ್ಲಿನ ರಾಶಿಯ ಬಳಿ ಪರಿಶೀಲಿಸಿದ. ಒಂದು ಸಣ್ಣದು, ಒಂದು ದೊಡ್ಡದು, ಏನೆಲ್ಲಾ ಮಾಡಿದ್ದೀರಿ. ಧನಿ ನೋಡಿದರೆ ಏನೆಂದಾರು? (ನನಗೇನು? ಇವರಿಗೆ ಹೀಗೆ ಬೆಳಗ್ಗೆ ಒಮ್ಮೆ ಗದರಿಸದಿದ್ದರೆ ಆಗೋದಿಲ್ಲ)"

"ಏನೋ ಅದು ರಾಶಿ ಹಾಕುವಾಗ ಹಾಗೆ ಆಗಿರಬೇಕು" ಗಂಗಯ್ಯನೆಂದ.

"ಹೊಂ. ಹೂಂ. ಅವೆಲ್ಲ ವಿವರಣೆ ಹೇರೇಂಗಿ (ಹಿಯರಿಂಗ್–ಕೋರ್ಟಿನಲ್ಲಿ ಎಲ್ಲಾ ವಿಚಾರಣೆ ಮುಗಿದ ಬಳಿಕ ವಕೀಲರು ತಮ್ಮ ಕಕ್ಷಿಗಾರರ ಕುರಿತು ಮಾಡುವ ವಾದ—ವಾಗ್ಯುದ್ಧ.) ನನಗೆ ಬೇಡ. ಧನಿಗಳಿಗೆ ನಾನು ಉತ್ತರ ಹೇಳಬೇಕಲ್ಲ, ಇದಕ್ಕೆ? ನಿಮಗೆ ಸಂಬಳ ಸಿಕ್ಕಿದರಾಯಿತು."

'ನಿನಗೆ ಸಂಬಳ ಸಿಕ್ಕುವುದಿಲ್ಲವೇ' ಎಂದು ಅವರೆಲ್ಲರೂ ನೆನೆಸಿದರು.

ಮೇಸ್ತ್ರಿ ಮತ್ತೆ ಅವರೆಲ್ಲರ ಬಳಿಗೂ ಬಂದ. ಒಬ್ಬಿಬ್ಬರಿಗೆ

ಸ್ವಲ್ಪ ಬೈದ. ಆದರೆ ಅವನಿಗೆ ಯಾರೂ ಮರುಮಾತಾಡಲಿಲ್ಲ. ಮಾತಾಡಿದರೆ ಪ್ರಯೋಜನವಿಲ್ಲವೆಂಬುದು ಅವರೆಲ್ಲರಿಗೂ ಚೆನ್ನಾಗಿ ಗೊತ್ತು.

ಮೇಸ್ತ್ರಿ ದಾಸಪ್ಪ ಅವರಿಗೆ ವರ್ಷಗಟ್ಟಲೆಯಿಂದಲೂ ಪರಿಚಿತನೇ. ಅವನ ಆ ಖಾಕಿ ಇಜಾರು—ಅಂಗಿಗಳು, ಮುರುಕಲು ಸೈಕಲು—ಇವನ್ನೆಲ್ಲ ಮೊದಲಿನಿಂದಲೂ ನೋಡಿದಾರೆ. ಅಂತೆಯೇ ಬೆಳಗ್ಗೆ ಬಂದ ಕ್ಷಣ ಅವನು ಮಾಡುವ ಅಬ್ಬರವನ್ನು ತಿಳಿದಿದ್ದಾರೆ. ಅಷ್ಟೆಂದ ಮಾತ್ರಕ್ಕೆ ದಾಸಪ್ಪನೇನೂ ಅವರ ಹಿತ ಸಾಧಕನೆಂದು ತಿಳಿದುಕೊಳ್ಳಬಾರದು. ನಿರಕ್ಷರಿಗಳಾದ ಅವರ ಹಾಜರು ಪಟ್ಟಿಯನ್ನು ಎಷ್ಟೋ ಸಲ ಹಿಂದೆ ಮುಂದೆ ಮಾಡಿ ಅವರ ಸಂಬಳವನ್ನು ತಿಂದು ಹಾಕಿದ್ದ. ಪರಿಣಾಮವಾಗಿ ಅವರಿಂದ ಕೆಲವು ಸಲ ಒದೆಗಳನ್ನೂ ತಿಂದಿದ್ದ. ಅವನಿಗೆ ತಿಂಗಳಿಗೆ ಮೂವತ್ತೈದು ರೂಪಾಯಿ ಸಂಭಳ ಸಿಗುವುದು. ಅದರ ಮೇಲೆ ಸುಳ್ಳು ಲೆಕ್ಕ ತೋರಿಸಿ ಎಳೆಂಟು ರೂಪಾಯಿಗಳನ್ನಾದರೂ—ಕಾಫಿಯ ಖರ್ಚಿನ ಬಗ್ಗೆ ಮಾಡದಿಲ್ಲ. ಅವರಿಗೆ ಸಿಗುವ ಸಂಬಳವೆಂದರೆ ದಿನಕ್ಕೆ ಹನ್ನೆರಡಾಣೆ. ಅದರಲ್ಲೂ ಆದಿತ್ಯವಾರ ರಜೆ.

ದಾಸಪ್ಪನಿಗೆ ಕಲ್ಲು ಒಡೆಸುವುದರಲ್ಲಿ ವಿಶೇಷ ಪ್ರವೀಣತೆ ಇಲ್ಲವೇ ವಿದ್ಯಾರ್ಹತೆ ಇತ್ತೆಂದು ಹೇಳಲಾಗದು. ಬರಹವೇನೋ ಒಂದಿಷ್ಟು ಅವನಿಗೆ ತಿಳಿಯುತ್ತಿತ್ತು. ಮತ್ತೆ ಓವರ್ಸೀಯರರೊಡನೆ ಮಾತಾಡಲಿಕ್ಕೆ ಬೇಕಾಗುವಷ್ಟು ಕನ್ನಡವೂ ಬರುತ್ತಿತ್ತು. ಆದರೆ ಇವೆಲ್ಲಕ್ಕಿಂತ ಅವನ ಬುದ್ಧಿವಂತಿಕೆಯೇ ಜಾಸ್ತಿ. ಅವನ ಧನಿ ಕಂಟ್ರಾಕ್ಟರ್ ಸಯ್ಯದ್ ಬ್ಯಾರಿಗೆ ದಾಸಪ್ಪನಿಲ್ಲದೆ ಯಾವೊಂದು ಕೆಲಸವೂ ಆಗದು. ಅದರೊಳಗೆ ಲೆಕ್ಕಪತ್ರಗಳ ವ್ಯವಹಾರಕ್ಕಿಂತಲೂ ಬಾಯಿಮಾತಿನ ವ್ಯವಹಾರಕ್ಕೇ ಹೆಚ್ಚು ಪ್ರಾಧಾನ್ಯ. ಬಾಯಿಮಾತಿನ ವ್ಯವಹಾರದಲ್ಲಿ ಸ್ವಲ್ಪ ಹೆಚ್ಚು ಕಡಮೆಯಾದರೆ ದಾಸಪ್ಪನ ಬೆನ್ನಿಗೆ ಬ್ಯಾರಿಯ ಬಿಗಿದ ಮುಷ್ಟಿ ಬರುವುದು. ಅದನ್ನು ಸೈಯ್ಯದ್ ಬ್ಯಾರಿಯ ಎಲ್ಲಾ ಲೌಕಿಕ

ವ್ಯವಹಾರಗಳ ತೀರ್ಮಾನದ ಘಟ್ಟವೆಂದೂ ಹೇಳಬಹುದು.

ದಾಸಪ್ಪ ಹೀಗೆ ಜಬರದಸ್ತಿನೊಡನೆ ಕೆಲಸದ ದಿನವನ್ನಾರಂಭಿಸಿ, ಸೈಕಲನ್ನು ಅಲ್ಲೇ ಬಿಟ್ಟು ಎಂದಿನಂತೆ ಕಾಫಿ ಕುಡಿಯಲಿಕ್ಕೆಂದು ಹೊರಟ. ಅವನು ಹಾಗೆ ಒಮ್ಮೆ ಹೋದನೆಂದರೆ ಕೆಲಸಗಾರರಿಗೆ ಅವನ ಇರವನ್ನು ತಿಳಿಯಪಡಿಸುವ ಸಾಧನವೆಂದರೆ ಆ ಹಳೆಯು ಮಾಸಿದ ಸೈಕಲೊಂದೇ. ಒಂದು ವೇಳೆ ಅವನ ಧನಿ ಬಂದರೂ ಆ ಸೈಕಲೇ ಅವನು ಹಾಜರಿದ್ದುದಕ್ಕೆ ಸಾಕ್ಷಿ.

ಅವನ ತಲೆಮರೆಯಾದೊಡನೆ ಗಂಗಯ್ಯ ಬೀಡಿ ಉರಿಸಲಿಕ್ಕೆಂದು ಚಮ್ಮಟಿಕೆಯನ್ನು ಕೆಳಗಿಟ್ಟ. ಸಂಕಪ್ಪ ಮೂತ್ರಶಂಕೆಗೆಂದು ಹೋದ. ಉಳಿದಿಬ್ಬರು ಹೊಗೆಸೊಪ್ಪು ಬದಲಾಯಿಸಿಕೊಳ್ಳಲಿಕ್ಕೆ ನಿಂತರು.

“ಮೇಸ್ತ್ರಿಯ ಹಲ್ಲು ಹೋದರೂ ದರ್ಪ ಇನ್ನೂ ಮುಂಚಿನಂತೆಯೇ ಇದೆಯಲ್ಲ?” ಗಂಗಯ್ಯನೆಂದ.

“ನಾಚಿಕೆ ಮರ್ಯಾದೆಗಳಿಲ್ಲದಿದ್ದರೆ ಏನು? ಎಷ್ಟು ದರ್ಪವನ್ನೂ ತೋರಿಸಬಹುದು” ಎಂದು ತನಿಯ ಹೇಳಿದ.

“ಇನ್ನು ಹೊಟೇಲಿನಲ್ಲಿ ಆ ನಾಯ್ಕನ ಮಂಗಳೆಯನ್ನೇ ನೋಡುತ್ತ ಕುಳಿತುಕೊಳ್ಳುತ್ತಾನೆ.”

ಇಷ್ಟೆನ್ನುವಾಗ ಒಂದು ಮೋಟರು ಬಂತು.

ಅದನ್ನು ನೋಡಿ ಪುನಃ ಎಲ್ಲರೂ ಕೆಲಸಕ್ಕಾರಂಭಿಸಿದರು. ಯಾವಾಗಲೊಮ್ಮೆ ಅದರಲ್ಲಿ ಸಯ್ಯದ್ ಬ್ಯಾರಿ ಬರುವುದಿತ್ತು. ಮೋಟರು ನಿಲ್ಲಲಿಲ್ಲ. ಮುಂದರೆಯಿತು.

“ಟಪ್ಪಾಲು ಬಸ್ಸು ಬಂತು! ಗಂಟೆ ಒಂಭತ್ತು ಕಳೆಯಿತಲ್ಲ.” ಎಂದನೊಬ್ಬ.

“ಹೊಂ.” ಎಂದು ಉಳಿದವರೆಂದರು.

ತನಿಯ ಬೆರಳುಗಳಿಗೆ ಸುತ್ತಿಕೊಂಡ ವಸ್ತ್ರವನ್ನು ಬಿಗಿಯಲು

ಎದ್ದು ನಿಂತ. ಅದನ್ನು ಸರಿಯಾಗಿ ಬಿಗಿಯದೆ ಇದ್ದರೆ ಕಲ್ಲನ್ನು ಬೆರಳು ಗಳಲ್ಲಿ ಅಮುಕುವಾಗ ಕಲ್ಲು ಚರ್ಮಕ್ಕೆ ತಾಗಿ ರಕ್ತ ಸುರಿಯುವುದು. ಕೆಲವೊಮ್ಮೆ ನೋಟ ತಪ್ಪಿ ಚಮ್ಮಟಿಕೆಯ ಪೆಟ್ಟು ಬೆರಳಿಗೆ ಬೀಳು ವಾಗಲೂ ವಸ್ತ್ರದ ಚಂಡಿನಿಂದಾಗಿ ನೋವಾಗದು.

"ಇಷ್ಟು ನಾವು ಕಲ್ಲುಪುಡಿ ಮಾಡಿದರೂ ರಸ್ತೆಗೆ ಸಾಕಾಗುವು ದಿಲ್ಲ. ಎಷ್ಟು ಹೊಂಡಗಳಿವೆ, ನೋಡಿ. ಸಾಧಾರಣ ಹಗುರವಾದ ಮೋಟಾರು ಅವುಗಳಿಂದಾಗಿ ಎಡವಿಬಿದ್ದೀತು."

"ನಮ್ಮಂತೆಯೇ ಎಲ್ಲರೂ ಕೆಲಸ ಮಾಡುವವರಲ್ಲವೆ? ಯಾರೋ ಸರ್ಕಾರವಂತೆ. ಒಂದಷ್ಟು ಹಣವನ್ನು ಅವರು ಧನಿಗೆ ಕೊಡುತ್ತಾರೆ. ಧನಿ ಅದನ್ನು ಮೇಸ್ತ್ರಿಗೆ ಕೊಡುತ್ತಾರೆ. ಅವನು ಅದನ್ನು ನಮಗೆ ಕೊಡುತ್ತಾನೆ. ಒಟ್ಟಾರೆ ಕೆಲಸ ಮುಗಿದು ಹಣ ಸಂದಾಯ ಮಾಡುವ ಸಂಗತಿ ಇದಲ್ಲ. ಇಲ್ಲಿ ಒಮ್ಮೆ ಹಣ ಸಂದಾಯವಾದರೆ ಸಾಕು. ಆಗ ಕೆಲಸ ಮುಗಿಯಿತೆಂದೇ."

"ಹೌದೌದು. ನಾನೂ ಕೇಳಿದ್ದೇನೆ. ಎಷ್ಟೋ ಇಂಥ ಲೆಕ್ಕ ಗಳನ್ನು ಇವರೆಲ್ಲ ಸೇರಿ ಪುಸ್ತಕದಲ್ಲಿ ಮಾತ್ರ ಬರೆದು, ಮತ್ತೆ ಕೆಲಸ ಮಾಡಿಸುವುದಿಲ್ಲವಂತೆ. ಹಣ ಕೊಡುವ ಅರಸನಾಗಲೀ ಮಂತ್ರಿ ಯಾಗಲೀ ಇಲ್ಲಿ ಬಂದು ಎಲ್ಲ ತನಿಖೆ ಮಾಡುತ್ತಾರೆಯೆ?"

"ನೋಡಿ ಮೊನ್ನೆ ಅಡ್ಯಾರಿನ ಸಂಕ (ಸೇತುವೆ) ಹೇಗೆ ಬಿತ್ತೆಂದು! ಮೂರು ಲಕ್ಷ ರೂಪಾಯಿಗೆ ಒಬ್ಬ ಕಂತ್ರಾಟು (ಕಂಟ್ರಾಕ್ಟ್) ವಹಿಸಿದನಂತೆ. ಎರಡು ವರ್ಷ ಕೆಲಸ ಮಾಡಿಸಿದ. ಒಬ್ಬ ಮಂತ್ರಿ ಬಂದು ಅದನ್ನು ಬಿಟ್ಟುಕೊಟ್ಟ. ಎರಡೇ ತಿಂಗಳಲ್ಲಿ ಸಂಕ ಕುಸಿದುಹೋಯಿತು. ಯಾರೊಡನೆ ಕೇಳುವುದು? ಇದೇ ನಮ್ಮ ಕೆಲಸ."

"ಛೆ! ಅದೆಲ್ಲ ನಿಮಗೆ ಗೊತ್ತಿಲ್ಲ. ಯಾವ ಸಂಕಕ್ಕಾದರೂ ನರಬಲಿ ಕೊಡದೆ ಆಗದು. ನೋಡಿ, ಉಪ್ಪಿನಂಗಡಿಯ ಸಂಕಕ್ಕೆ

ಕಂಭಕ್ಕೊಂದರಂತೆ ಮನುಷ್ಯರನ್ನು ತಲೆಕಡಿದಿದ್ದಾರಂತೆ. ಇಲ್ಲಿ ಪಾಣೆ ಮಂಗಳೂರಿನ ಸಂಕಕ್ಕೂ ಎಷ್ಟೋ ನರಬಲಿಯಾಗಿದೆಯಂತೆ. ಇಲ್ಲಿ ವಾದರೆ ಈ ಭೂತಗಳು ಬಿಟ್ಟಾವೋ ? ಅಡ್ಯಾರಿನ ಸಂಕದ ಹತ್ತಿರವೇ ನನ್ನ ಮಾವನ ಮನೆ. ಅಲ್ಲಿ ಒಬ್ಬ ದೊಡ್ಡ ಬ್ರಹ್ಮರಾಕ್ಷಸ ರಾತ್ರಿ ಯಲ್ಲಿ ಪಂಜು ಹಿಡಿದುಕೊಂಡು ತಿರುಗಾಡುತ್ತಿದ್ದಾನಂತೆ. ಅವನು ಕಾಂಕ್ರೀಟಲ್ಲ, ಕಬ್ಬಿಣವನ್ನು ಕೂಡಾ ಹುಡಿಹುಡಿ ಮಾಡಿಯಾನು."

"ಒಹ್ ಅದೆಲ್ಲ ಕುಂಪಣಿ (ಬ್ರಿಟಿಷ್ ಆಡಳಿತಕ್ಕೆ ವಾಡಿಕೆಯ ಹೆಸರು) ಯವರ ಕಾಲದಲ್ಲಾಯಿತು. ಈಗ ಈ ಮಂತ್ರಿಗಳು ಅದಕ್ಕೆಲ್ಲ ತಯಾರಿಲ್ಲ. ಎಲ್ಲ ಬಿಟ್ಟು ಮುಂಚಿನ ಪೋಲೀಸರನ್ನು ನೋಡಿ, ಇಂದಿನವರನ್ನು ನೋಡಿ — ಹಿಂದಿನವರನ್ನು ನೋಡಿದರೆ ಗರ್ಭದಲ್ಲಿ ಚಳಿ ಹಿಡಿಯುತ್ತಿತ್ತು. ಈಗಿನವರು ನಮ್ಮೊಡನೆಯೇ, ಒಂದು ಕಾಫಿ ಕುಡಿಸಿ, ಒಂದು ಕೋಳಿಮರಿ ಕೊಡಿ, ಒಂದು ಸೇರು ಅಕ್ಕಿ ಕೊಡಿ, ನಮ್ಮಲ್ಲಿ ಸಿಗೋದಿಲ್ಲ — ಹೀಗೆಲ್ಲ ಕೇಳುತ್ತಾರೆ. ಇದು ಮಂತ್ರಿಗಳ ಸರ್ಕಾರದ ಫಲ !".

"ನಮಗೇನಾಗಬೇಕು ಗಂಗಯ್ಯಣ್ಣ? ಆದರೆ ಇವರು ಏನೆಲ್ಲ ಮಾಡಿದರು ! ರೂಪಾಯಿ ನೋಟು ಕೊಟ್ಟರೆ ಚಿಲ್ಲರೆ ಕೊಡೋದಿಲ್ಲ ವೆಂದಾಯಿತು. ಚಿಮಿಣಿ ಎಣ್ಣೆಯನ್ನು ಪಡಕೊಳ್ಳಲು ಕಾರ್ಡು ಕೊಟ್ಟಾಯಿತು. ಅಕ್ಕಿ ಬೆಳೆಸಿದ್ದನ್ನೆಲ್ಲ ಟೋರಿಗೆ (ಸ್ಟೋರ್) ಕೊಡ ಬೇಕೆಂದಾಯಿತು. ಮತ್ತೆ ಈಗ ಯಾವ ಸಾಮಾನಿಗೂ ಒಂದು ಪಾವಾಣೆಗಿಂತ ಕಡಿಮೆ ಕ್ರಯ ಇಲ್ಲವೇ ಇಲ್ಲವಲ್ಲ! ಒಂದು ಪೈಯ ಸಾಮಾನು ಕೊಂಡರೂ ಪಾವಾಣೆಯನ್ನೇ ತೆರಬೇಕು ! ಇದನ್ನೆಲ್ಲ ಹೇಳಿ ಪ್ರಯೋಜನವಿಲ್ಲ. ನಮ್ಮ ದಿನ ಹೇಗಾದರೂ ಸಾಗುತ್ತದೆ. ಆದರೆ ನಮ್ಮ ಮಕ್ಕಳು ಹೇಗೆ ಜೀವಿಸುವರೋ !"

ಈ ಸಾಮುದಾಯಿಕ ಸಂಭಾಷಣೆಯಲ್ಲಿ ತನಿಯ ಭಾಗವಹಿಸಿರ ಲಿಲ್ಲ. ಅವನ ಮನಸ್ಸು ಮನೆಯ ಕಡೆ ಸುಳಿದಿತ್ತು.

" ಏನು ತನಿಯಣ್ಣ? ಇವತ್ತು ಸಿಕ್ಕುವ ಸಂಬಳವನ್ನು ಎಲ್ಲಿ ಶೇಖರಿಸಿಡುವುದೆಂದು ಯೋಚಿಸುತ್ತಿದ್ದಿಯಾ?" ಎಂದು ನಾರ್ಣಪ್ಪ ಕೇಳಿದ.

" ನನ್ನ ಹಣವನ್ನು ಪಡೆಯಲು ನಿನಗಿರುವಂತೆ ಬಹಳ ಮಂದಿ ಇಲ್ಲ ಮಹರಾಯಾ! ನಿನಗಾದರೆ ಆ ಸರ್ಪಿನಳಿಗೆ, ನಾಗುವಿಗೆ, ಮಂಜಕ್ಕನಿಗೆ ಎಲ್ಲ ಕೊಡಬೇಕಲ್ಲ! ಅದನ್ನು ಹೇಗೆ ಹಂಚುವುದೆಂದು ನೀನು ಯೋಚನೆ ಮಾಡು."

" ಮಾತಾಡಿದ್ದಕ್ಕೆ ಮಾತಾಡಿದ್ದಕ್ಕೆ ಅಷ್ಟವೇ ಮಾತಾಡುತ್ತೀಯಲ್ಲ ನೀನು? ಆ ಹೊನ್ನಮ್ಮಕ್ಕ ನಿನಗೆ ಬಹಳ ಸಲಿಗೆ ಬಿಟ್ಟಿದ್ದಾಳೆಂದು ತೋರುತ್ತದೆ."

" ಸಾಕು ಸಾಕು," ಗಂಗಯ್ಯನೆಂದ. " ಅಗೋ ಇನ್ನೊಂದು ಮೋಟರ್—ಅಲ್ಲ–ಲೋರಿ ಬಂತು. ಅದ್ರಲ್ಲಿ ಸಾಹುಕಾರರಿರ ಬಹುದು."

ಪುನಃ ಎಲ್ಲರೂ ಕೆಲಸದಲ್ಲಿ ಮಗ್ನರಾದರು. ದೊಡ್ಡದೊಡ್ಡ ಬಂಡೆ ಕಲ್ಲುಗಳ ತುಂಡುಗಳು. ಅವನ್ನು ಚಮ್ಮಟಿಕೆಯಿಂದ ಹೊಡೆದು ಸಾಮಾನ್ಯ ಒಂದೂವರೆ ಇಂಚು ಉದ್ದ–ಅಗಲ–ದಪ್ಪದ ತುಂಡುಗಳನ್ನಾಗಿ ಮಾಡಬೇಕು. ಚಮ್ಮಟಿಕೆಯೆಂದರೆ ಹತ್ತು ರಾತ್ತಲ ಭಾರದ್ದು. ಸಾಧಾರಣ ಮನುಷ್ಯನಿಗೆ ಅದನ್ನು ಒಂದು ಕೈಯ್ಯಲ್ಲಿ ಎತ್ತುವುದೆಂದರೆ ಪ್ರಯಾಸವೇ ಸರಿ. ಅದು ಕಲ್ಲಿನ ಮೇಲೆ ಬಿದ್ದೊಡನೆ, ಕಲ್ಲು ಪುಡಿ ಪುಡಿಯಾಗಿ ಧೂಳು ಹಾರುವುದು. ಅದರ ಚೂರುಗಳೆಷ್ಟೋ ಅವರ ಕಣ್ಣು–ಕಿವಿ–ಮೂಗು–ಬಾಯಿಗಳೊಳಗೆ ಹೋಗುವುವು. ಧೂಳೆಲ್ಲ ಮೈಯ್ಯ ರೋಮ ರೋಮಗಳಲ್ಲೂ ಸೇರಿಕೊಳ್ಳುವುದು. ಅರ್ಧ ಗಂಟೆಗೊಮ್ಮೆ ನೀರು ಕುಡಿಯುತ್ತಲೇ ಇರಬೇಕು. ಅದೂ ಬಿಸಿಲೇರಿತೆಂದರೆ, ಬಟ್ಟೆಯೆಲ್ಲಾ ಬೆವರಿನಲ್ಲಿ ಒದ್ದೆ. ಮುಖದ ಬೆವರನ್ನು ಕೂಡಾ ಒರಸಿಕೊಳ್ಳಲು ಸಾಧ್ಯವಿಲ್ಲ:

ಏಕೆಂದರೆ ಕೈ ಬೆರಳುಗಳಿಗೆ ಬಟ್ಟೆ ಸುತ್ತಿದೆ; ಅದರಲ್ಲಿ ಕಲ್ಲಿನ ಧೂಳು ತುಂಬಿ ಹೋಗಿದೆ; ಅದನ್ನುಜ್ಜಿದರೆ ಮುಖ ಆಗಲೇ ಉರಿಯ ತೊಡಗುವುದು. ಮತ್ತೆ ಚನ್ಮಟಿಕೆ ಒಮ್ಮೊಮ್ಮೆ ಕೈಗೆ ಬೀಳುವುದು ಇದೆಯಲ್ಲ. ಅವರ ಕೈ ಬೆರಳಿನ ಉಗುರುಗಳೆಲ್ಲ ಯಾವಾಗಲೂ ಗಾಯಗೊಂಡೇ ಇರುವುವು. ಒಮ್ಮೆ ಚರ್ಮ ಸುಲಿದು ಹೋಗುವುದು, ಇನ್ನೊಮ್ಮೆ ಅಂಗೈಯಲ್ಲಿ ಬೊಕ್ಕೆ ಏಳುವುದು, ಮತ್ತೊಮ್ಮೆ ಕೈಗೆ ಕಲ್ಲಿನ ಅಂಚು ಕೊಯ್ದು ರಕ್ತ ಬರುವುದು—ಹೀಗೆ ಅವರ ಕೆಲಸದಲ್ಲಿ ಪ್ರತಿಯೊಂದು ಘಳಿಗೆಯೂ ಚಿಕ್ಕ ಪುಟ್ಟ ಅಪಾಯಗಳು ತಪ್ಪಿದುದಲ್ಲ. ಮತ್ತೆ ಕೆಲವೊಮ್ಮೆ ದೊಡ್ಡದೊಡ್ಡ ಕಲ್ಲುಗಳನ್ನೆತ್ತುವಾಗ ಎಲ್ಲಾದರೂ ಶೂಲೆ ಬೀಳುವುದು. ಆಮೇಲೆ ನಾಲ್ಕೈದು ದಿನ ಕೆಲಸಕ್ಕೆ ಬರಲು ಸಾಧ್ಯವಿಲ್ಲ. ಅದಕ್ಕಿಂತ ದೀರ್ಘ ಅವಧಿಯವರೆಗೂ ಅಂಥ ನೋವುಗಳು ವಾಸಿಯಾಗದಿರುವುದುಂಟು. ಅಂಥ ಸಂದರ್ಭಗಳಲ್ಲಿ ಮತ್ತೆ ಆ ವರುಷ ಕೆಲಸವೇ ಸಿಗಲಾರದು. ಏಳೆಂಟು ದಿನದೊಳಗೆ ಮೇಸ್ತ್ರಿ ಬೇರೆ ಕೆಲಸಗಾರರನ್ನು ನೇಮಿಸಿಕೊಳ್ಳುವನು. ಒಮ್ಮೆ ಆ ಕೆಲಸ ತಪ್ಪಿತೆಂದರೆ ಮತ್ತೆ ಅದಕ್ಕಿಂತ ಕಡಮೆ ಸಂಬಳದ ಕೆಲಸ ಕೂಡಾ ಊರಿನಲ್ಲಿ ಕೂಡಲೆ ಸಿಗದು.

ಆದರೆ ಇಂಥ ಪರಿಸ್ಥಿತಿಯಲ್ಲೂ ಅವರಿಗೆ ಕೆಲಸ ಮಾಡದೆ ನಿರ್ವಾಹವಿಲ್ಲ. ಇಲ್ಲವಾದರೆ ಮನೆಯಲ್ಲಿ ದಿನ ದೂಡುವುದೇ ಕಷ್ಟವಾಗುವುದು. ಬೇಸಾಯದಲ್ಲಾಗುವ ಋತುಮಾನದ ಉತ್ಪತ್ತಿಯ ಹೆಚ್ಚಿನಂಶ ಬೇಸಾಯದ ಕೆಲಸಕ್ಕೇ ಖರ್ಚಾಗುವುದು. ಮತ್ತೆ ಉಳಿದ ಅವಧಿಯ ಖರ್ಚಿಗೆ, ಬಟ್ಟೆಬರೆಗಳಿಗೆ ಖರ್ಚು ಮಾಡಲು ಇಂಥ ಅಡ್ಡ ಕಸಬಿನಿಂದಲೇ ಹಣಸಿಗಬೇಕು. ಅದೂ ಕಲ್ಲಿನ ಕೆಲಸ ದಲ್ಲಿ ಸಂಬಳ ಅಷ್ಟು ದೊರೆಯದಿದ್ದರೂ ಕೆಲಸ ಎಡೆಬಿಡದೆ ಐದಾರು ತಿಂಗಳ ಕಾಲ ದೊರೆಯುತ್ತಿತ್ತು.

ರಸ್ತೆಯಲ್ಲಿ ಕಲ್ಲು ಹಾಕದಿದ್ದರೆ ವಾಹನ ಸಂಚಾರಕ್ಕೆ

ಕೊಂದರೆಯಾಗುತ್ತದೆ. ಇಲ್ಲವೇ, ರಸ್ತೆ ಒಳ್ಳೆಯದಾಗಿದ್ದರೆ ತಮಗೆ ಬಹಳ ಪ್ರಯೋಜನವಾಗುತ್ತದೆ—ಇತ್ಯಾದಿ ವೃತ್ತಿಯ ವ್ಯಾಮೋಹ ದಿಂದ ಅವರು ಈ ಕೆಲಸವನ್ನು ಮಾಡುತ್ತಿರಲಿಲ್ಲ. ಇಲ್ಲಿ ಅಂಥ ವೈಯಕ್ತಿಕ ಶ್ರದ್ಧೆಯನ್ನು ತೋರಿಸಲು ಎಡೆ ಇರಲಿಲ್ಲ.

ಮಧ್ಯಾಹ್ನದ ಎಕ್ಸ್‌ಪ್ರೆಸ್ ಮೋಟಾರು ಬಂದೊಡನೆ ಎಲ್ಲರೂ ಕೆಲಸ ಬಿಟ್ಟು ಅಲ್ಲೇ ಇದ್ದ ಬಾವಿಯ ಬಳಿಗೆ ಹೋಗಿ ಮುಖ ತೊಳೆದುಕೊಂಡು ಬಂದು ತಮ್ಮ ತಮ್ಮ ಬುತ್ತಿಗಳನ್ನು ಮರದಡಿಯಲ್ಲಿ ಬಿಚ್ಚಿದರು.

ಬುತ್ತಿಯ ಊಟದಲ್ಲೂ ವಿಶೇಷ ವೈವಿಧ್ಯವಿಲ್ಲ. ಕೆಲವರದು ಅಂದೇ ಬೇಯಿಸಿದ ಗಂಜಿ. ಕೆಲವರದು ಹಿಂದಿನ ದಿನದ ತಂಗಳನ್ನ. ಪಲ್ಯ ಒಬ್ಬಿಬ್ಬರ ಪಾತ್ರೆಯಲ್ಲಿ ಮಾತ್ರ ಇತ್ತು. ಅದೂ ಹಿಂದಿನ ರಾತ್ರೆಯದು. ಉಳಿದವರಿಗೆ ಉಪ್ಪು ಮೆಣಸು ಮಾತ್ರ ಗತಿ. ಆದರೂ ದಿನ ನಿತ್ಯವೂ ಅವರು ಅದನ್ನೇ ಉಣ್ಣುವರು. ಅನ್ನ ಕೂಡಾ ದಿನಾಲೂ ಬೇಕಾದಷ್ಟು ಇರುವುದೆನ್ನಲಾಗದು. ಕೆಲವು ದಿನ ಮನೆಯಲ್ಲಿ ಹೆಂಡಂದಿರ ಅಳತೆ ಹೆಚ್ಚು ಕಡಿಮೆಯಾಗಿ, ಹೊಟ್ಟೆ ತುಂಬಾ ಅನ್ನ ಇರುತ್ತಿದ್ದಿಲ್ಲ.

"ಏ ನಾರ್ಣ !" ತನಿಯ ಕರೆದ. "ಇದೇನೋ, ಮೀನಿನ ಪಲ್ಯ ಎಲ್ಲಿಂದ ? ಸರ್ಪಿನಳದೋ, ಅಲ್ಲ ಮಂಜಕ್ಕುವಿನದೋ ? ನಮಗೂ ಸ್ವಲ್ಪ ರುಚಿ ನೋಡಲಿಕ್ಕೆ ಕೊಡಬಾರದೆ ?"

"ಇದು ಹೊಲೆಯರದ್ದು" ನಾರ್ಣಪ್ಪ ನಕ್ಕ. "ನೀವು ತಿನ್ನ ಬಾರದು. ಒಂದಾಣೆಯ ಮೀನು ಪಡಕೊಳ್ಳಲು ಕೂಡಾ ಗತಿಯಿಲ್ಲದ ನೀವು ತೆಂಗಿನ ಗೆರಟೆಯ ನೀರಿಗೆ ಬಿದ್ದು ಪ್ರಾಣಕಳಕೊಳ್ಳಬಾರದೆ ?"

"ನಿನ್ನ ದಿನ ಮಹರಾಯಾ, ನಿನ್ನ ದಿನ" ಎಂದು ಎಲ್ಲರೂ ದನಿಗೂಡಿಸಿದರು.

ಊಟ ಮುಗಿಯಿತು. ಮುಖ ತೊಳೆದರು. ವೀಳ್ಯ ಜಗಿದರು.

ಬೀಡಿ ಸೇದಿದರು. ಇನ್ನೊಂದು ಮೋಟಾರು ಬರುವ ಸದ್ದು ಕೇಳಿ ಪುನಃ ಕೆಲಸ ಪ್ರಾರಂಭಿಸಿದರು. ದಾಸಪ್ಪ ಮೇಸ್ತ್ರಿಯ ಸೈಕಲ್ಲು ಅವರನ್ನೇ ನೋಡುವಂತಿತ್ತು, ಪುನಃ ಅವನು ಮರಳಲಿಲ್ಲ.

"ಬಹಳ ಬಿರುಸಿನ ಕಲ್ಲು" ಸಂಕಪ್ಪನೆಂದ. "ಸ್ವಲ್ಪ ಜೋರಾ ಹೊಡೆದರೆ ಚೂರುಚೂರಾಗುವುದು. ಮೆಲ್ಲನೆ ಹೊಡೆದರೆ ಅದಕ್ಕೆ ನಾಟುವುದಿಲ್ಲ."

"ಅದಕ್ಕೆ ಸುತ್ತಿಗೆ ಸ್ವಲ್ಪ ಬಲವಾಗಬೇಕು" ಎಂದ ಗಂಗಯ್ಯ.

ಅಷ್ಟರಲ್ಲಿ ಮೇಸ್ತ್ರಿ ಬಂದು ಪುನಃ ಅವರ ಕೆಲಸವನ್ನು ಪರಿಶೀಲಿಸ ತೊಡಗಿದ. ಅವನಿಗೆ ನಿದ್ದೆಯಲ್ಲಿ ಆಕಳಿಕೆ ಬರುತ್ತಿತ್ತು. ಆದರೂ ನಾರ್ಣಪ್ಪನಿಗೆ ಒಮ್ಮೆ ಗದರಿಸಿದ.

ಎಲ್ಲರೂ ಹೇಗಾದರೂ ಕೆಲಸಮಾಡುತ್ತ ಮೋಟಾರುಗಳನ್ನು ಎಣಿಕೆ ಮಾಡುತ್ತಿದ್ದಂತೆಯೇ ಸಂಜೆಯಾಯಿತು. ದಾಸಪ್ಪ ಹಾಜರಿ ಪಟ್ಟಿಯನ್ನು ತೆಗೆದುನೋಡಿ ಅದರಂತೆ ಎಲ್ಲರಿಗೂ ಸಂಬಳ ಕೊಟ್ಟ.

"ನಾಳೆಯಿಂದ ಬೇಗ ಬನ್ನಿ," ಕೊನೆಗೆ ಅವನೆಂದ. "ಈಗಿನ ಹಾಗೆ ಕಣ್ಣುಮುಚ್ಚಾಲೆಯಾಟ ಆಡಿದರೆ ಇನ್ನು ಆಗಲಿಕ್ಕಿಲ್ಲ. ಹಣ ಖಾಲಿಯಾದರೂ, ಕಲ್ಲಿನರಾಶಿ ಸಾಕಷ್ಟು ಹೆಚ್ಚಿಲ್ಲ. ಧನಿ ಬಂದುನೋಡಿ ದರೆ ನನ್ನನ್ನು ಊರಿನಿಂದ ಓಡಿಸಿಯಾರು. ಇನ್ನುಮುಂದೆ ಯಾರಾ ದರೂ ಸ್ವಲ್ಪ ಸೋಮಾರಿತನ ತೋರಿಸಿದರೆ, ಅವರನ್ನುಕೂಡಲೇ ಕೆಲಸ ದಿಂದ ತೆಗೆದು ಹಾಕುತ್ತೇನೆ. ಜಾಗ್ರತೆ."

ಯಾರೂ ಮಾತಾಡಲಿಲ್ಲ. ದಾಸಪ್ಪ ಈ ನೀತಿಬೋಧನೆಯನ್ನು ಅವರಿಗೆ ಮಾಡದ ದಿನವೇ ಇಲ್ಲ. ಅದರ ಬೆಲೆ ಏನೆಂಬುದೂ ಅವರಿಗೆ ಚೆನ್ನಾಗಿ ಗೊತ್ತು.

ತನಿಯ ಹಣವನ್ನು ಹಿಡಿದುಕೊಂಡು ಮನೆಗೆ ಹೋಗುವಾಗ ಮನೆಗೆ ಬೇಕಾದ ಉಪ್ಪು, ಮೆಣಸು, ಎಣ್ಣೆ, ಸಾಂಬಾರ ಜೀನಸು, ಪಲ್ಯಕ್ಕೆ ಸ್ವಲ್ಪ ಅವರೆಬೀಜ, ಒಣಮೀನು ಇವನ್ನೆಲ್ಲ ಪಡೆದುಕೊಂಡು

ಒಂದು ಲೋಟ ಚಹ ಕುಡಿದ. ಉಳಿದವರೂ ಅವರವರಿಗೆ ಬೇಕಾದ ಸಾಮಾನುಗಳನ್ನು ಪಡೆದು ಮನೆಗೆ ತೆರಳಿದರು.

ದಾರಿಯಲ್ಲಿ ಬರುವಾಗ ರಾಮುಪೂಜಾರಿ ಕಾಣಸಿಕ್ಕಿದ.

"ಓ ತನಿಯಣ್ಣನೇ?" ಅವನು ಕೇಳಿದ. "ಇವತ್ತು ಸಂಬಳ ಸಿಕ್ಕಿತೆ? ಏನು ನನ್ನಲ್ಲಿ ಬರಲಿಕ್ಕಿಲ್ಲವೆ?"

ತನಿಯ ಸಂಬಳ ಸಿಗುವ ದಿನ ರಾಮುಪೂಜಾರಿಯಲ್ಲಿಗೆ ಇಲ್ಲ ವಾದರೂ ಹೆಚ್ಚಾಗಿ ಹೋಗುತ್ತಿದ್ದ. ರಾಮುಪೂಜಾರಿಯಲ್ಲಿ ಆಗ ಬೆಲ್ಲದ ಶರಾಬು, ಬಾಳೆಹಣ್ಣಿನ ಶರಾಬು, ಗೇರುಹಣ್ಣಿನ ಶರಾಬು — ಇವೆಲ್ಲ ಸಿದ್ಧವಾಗಿರುತ್ತಿದ್ದುವು.

"ಹೂಂ. ಗೇರು ಹಣ್ಣಿನದಿದ್ದರೆ ಬರುತ್ತೇನೆ. ಬೆಲ್ಲದ್ದರಲ್ಲಿ ಸುಣ್ಣದ ಖಾರ ಹೆಚ್ಚಿಗೆ ಇದೆ, ಮತ್ತೆ ಪ್ಯೆಯಿಡೀ ಉರಿಯುತ್ತದೆ."

"ಒಹ್ ಅದಕ್ಕೇನು, ನಿನಗೆ ಬೇಕಾದ್ದು ತೆಗೆದುಕೊಳ್ಳು" ಎಂದ ರಾಮುಪೂಜಾರಿ.

ತನಿಯ ಮೆಲ್ಲನೆ ಹಿಂದಿನ ಬಾಗಿಲಿನಿಂದ ಹೋದ. ಸ್ವಲ್ಪ ಕುಡಿದ. ಬಳಿಕ ಒಂದು ಸಣ್ಣ ಬಾಟ್ಲಿಯಲ್ಲಿ ಸ್ವಲ್ಪ ಶರಾಬನ್ನು ಜೇಬಿಗೆ ಸೇರಿಸಿದ.

"ಜಾಗ್ರತೆ ತನಿಯಣ್ಣ! ಗೇರು ಹಣ್ಣಿನ ಶರಾಬು. ಬಹಳ ಪರಿಮಳ! ಇವತ್ತು ಬೆಳಿಗ್ಗೆ ಪೋಲೀಸರು ಬಂದಿದ್ದಾರೆ!" ಎಂದು ರಾಮುಪೂಜಾರಿ ಬೆದರಿಸಿದ.

ತನಿಯ ಹಣ ಕೊಟ್ಟು ಮನೆಗೆ ಬಂದ. ಹೊನ್ನಮ್ಮ ಪಲ್ಯಕ್ಕೆ ಮೆಣಸಿಲ್ಲವೆಂದು ಅವನನ್ನೇ ಕಾಯುತ್ತಿದ್ದಳು.

"ಇಗೋ ರಾಣಿ, ನಿನ್ನೆ ನಾನೊಬ್ಬನೇ ಕುಡೀತೇನೆ ಎಂದು ಹೇಳಿದ್ದಿಯಲ್ಲಾ? ಇವೊತ್ತು ನಿನ್ಗೂ ತಂದಿದ್ದೇನೆ. ಊಟಮಾಡಿ ಸ್ವಲ್ಪ ಚಡಾಯ್ಸು" ಎಂದನವ ನಗುತ್ತ.

ಹೊನ್ನಮ್ಮ ಬಾಟ್ಲಿಯನ್ನು ತೆಗೆದುಕೊಂಡು ಅದನ್ನು ಮೂಸಿ ಒಳಗಿಟ್ಟಳು. ಅವಳಿಗೂ ಶರಾಬೆಂದರೆ ಸ್ವಲ್ಪ ಪ್ರೀತಿಯೇ.

ಆದಕ್ಕಿಂತಲೂ ಹೆಚ್ಚಿಗೆ ಪ್ರೀತಿಯೆಂದರೆ ಹುಳಿ ಹೆಂಡದ ಮೇಲೆ. ಆದರೆ ಈಗ ಹೆಂಡದ ಸುದ್ದಿ ಮಾತಾಡಲು ಕೂಡಾ ಸಾಧ್ಯವಿಲ್ಲ. ಶರಾಬಿನಲ್ಲಿ ಏನೂ ರುಚಿ ಸಿಗದು. ಅದೂ ಕುಡಿದುದು ಒಂದಿಷ್ಟು ಹೆಚ್ಚಾದರೆ ಮಲಗಬೇಕು.

ಆದರೂ ಗಂಡ ತನ್ನ ಮೇಲೆ ಇನ್ನು ಕೋಪಿಸಿಕೊಂಡಿಲ್ಲವೆಂದು ತಿಳಿದು ಅವಳಿಗೆ ಸಂತೋಷವಾಯಿತು. ಹೀಗೆ ಮನೆಗೆ ಕಾಣಿಕೆಯನ್ನು ಹಿಂದಿನ ದಿನಗಳಲ್ಲಿ ಅವನು ಆಗಾಗ್ಗ ತರುತ್ತಿದ್ದ. ಕೆಲವು ವೇಳೆ ಅವರಿಬ್ಬರೂ ಮನೆಯಿಂದ ಅಕ್ಕಿಯನ್ನೋ ಭತ್ತವನ್ನೋ ತೆಗೆದು ಕೊಂಡು ಹೆಂಡದಂಗಡಿಗೆ ಹೋಗಿ ಬೇಕಾದಷ್ಟು ಕುಡಿದು ಬರುವುದಿತ್ತು. ಆದರೆ ಈಗ ದಿನಗಳು ಬದಲಿವೆ. ಒಂದೆಡೆ ಕುಡಿಯುವ ವಿಲಾಸಕ್ಕೆ ಬೇಕಾಗುವಷ್ಟು ಸಂಪತ್ತಿಲ್ಲ. ಮತ್ತೊಂದೆಡೆ ಎಷ್ಟು ಹಣ ಕೊಟ್ಟರೂ ಕುಡಿಯಲು ಮದ್ಯ ಸಿಗದು.

ಮತ್ತೆ ತನಿಯ ಹಣವನ್ನು ಎಣಿಸಿ ಐದು ರೂಪಾಯಿಗಳನ್ನು ಅವಳೊಡನಿತ್ತ. ಪ್ರತಿ ತಿಂಗಳೂ ಅವನು ಹಾಗೆ ಅವಳೊಡನೆ ಕೊಡುವ ರೂಢಿ ಅದು. ಅವಳು ಅದನ್ನು ತೆಗೆದಿಡುವಳು. ಹಾಗೆ ಕೊಟ್ಟ ಹಣವನ್ನು ಅವನು ಮತ್ತೆ ಅಗತ್ಯವಿದ್ದಾಗ ಕೇಳುವನು.

" ಇಗೋ ಹೆಣ್ಣೆ !" ಅವನು ಅವಳನ್ನು ಕರೆದ. " ನಾ ಇನ್ನೊಂದು ಮದುವೆಯಾಗೋದಿಲ್ಲ. ಆದರೆ ಇನ್ನೊಂದು ವರ್ಷದಲ್ಲಿ ನೀನು ಗರ್ಭಿಣಿಯಾಗದಿದ್ದರೆ ನಿನ್ನನ್ನು ಬಿಟ್ಟು ಬಿಡೋದು ಖಂಡಿತ."

" ಏನು ಬೇಕಾದರೂ ಮಾಡಿ " ಎಂದಳವಳು.

" ಹಾಗೇನು ನಾನು ಹುಚ್ಚನೆ ?" ಎನ್ನುತ್ತ ಅವಳನ್ನು ಅಪ್ಪಿ

೫

ಒಂದು ದಿನ ಹೊನ್ನಮ್ಮ ಬೆಳಗ್ಗೆ ಎದ್ದು ನೋಡುವಾಗ ಅಂಗಳದಿಂದ ಮೂರು ನಾಲ್ಕು ಜನ ಹಾದು ಹೋಗುತ್ತಿದ್ದರು. ಎಲ್ಲರೂ ಒಳ್ಳೆಯ ವಸ್ತ್ರಗಳನ್ನುಟ್ಟುಕೊಂಡು ಕೊಡೆ ಹಿಡಿದು ಕೊಂಡಿದ್ದಾರೆ. ಅವರ ಪೈಕಿ ಒಬ್ಬ ಮಾರಪ್ಪನೆಂದು ಅವಳಿಗೆ ತಿಳಿಯಿತು.

ಅವರು ಸ್ವಲ್ಪ ದೂರ ಹೋಗುವಾಗ ಮಾರಪ್ಪ ಬಂದು ಅವಳನ್ನು ಕರೆದ. ಅವಳೊಡನೆ ಎರಡು ರೂಪಾಯಿಗಳಿದ್ದರೆ ಅವನಿಗೆ ಬೇಕಂತೆ. ಮರುದಿನವೇ ವಾಪಸು ಕೊಡುವನಂತೆ.

"ಎಲ್ಲ ಮದುವಣಿಗರ ಹಾಗೆ ಸಿಂಗರಿಸಿಕೊಂಡು ಹೊರಟಿದ್ದೀರಲ್ಲ!" ಎಂದು ಆಕೆ ತಮಾಷೆಯಲ್ಲಿ ಹೇಳಿದಳು.

"ಎಲ್ಲರೂ ಮದುವಣಿಗರಲ್ಲ: ನಾನೊಬ್ಬನೇ ಮದುವಣಿಗ, ತಿಳಿಯಿತೇ ನಿನಗೆ?" ಎಂದು ಮಾರಪ್ಪ ನುಡಿದ.

"ಹಣಕ್ಕೆ ಬಡ್ಡಿ ಕೊಡಬೇಕು" ಎಂದಳವಳು.

"ಹ್ವೋ ಅದಕ್ಕೇನಂತೆ!"

"ರೂಪಾಯಿಗೆ ರೂಪಾಯಿ."

"ಬೇಕಾದರೆ ರೂಪಾಯಿಗೆ ಎರಡು ರೂಪಾಯಿ ಕೊಡುವ. ನಾನು ಈಗ ಮನೆಯಲ್ಲಿ ಜೇಬಿನಲ್ಲಿ ಹಾಕಿದ ಹಣ ಮರೆತು

ಹೋಯಿತು. ಇಲ್ಲಿ ನೆನಪಾಯಿತು. ಸಮಯವಾಯಿತು. ಅವರೆಲ್ಲ ಹೋಗುತ್ತಿದ್ದಾರೆ."

"ನೀವೇನು ಹಂದಿ ತರಲಿಕ್ಕೆ ಹೋಗುವವರೋ ?" ಎಂದು ನಕ್ಕಳಾಕೆ. "ಇಲ್ಲವಾದರೆ ಇಷ್ಟು ಜನ ಏಕೆ ?"

"ಇಗೋ ನಾವು ಒಳ್ಳೆಯ ಕೆಲಸದಲ್ಲಿ ಹೋಗುವವರು. ನೀನು ಅಪಶಕುನ ನುಡಿಯುತ್ತೀಯಾ ? ಏನಾದರೂ ಕೆಲಸವಾಗದಿದ್ದರೆ ನೋಡು, ನಿನ್ನನ್ನು ಏನು ಮಾಡುವೆನೆಂದು....!" ಎಂದು ಮಾರಪ್ಪ ಹುಸಿ ಆರ್ಭಟ ಮಾಡಿದ.

"ನನ್ನನ್ನು ನೀನೇನು ಮಾಡಬಲ್ಲೆ ಮೂರ್ಖ ? ನನಗೆ ಯಾರೂ ಹೇಳುವವರು ಕೇಳುವವರು ಇಲ್ಲವೆಂದು ಭಾವಿಸಿರುವೆಯಾ ನೀನು ? ನಿನಗೆ ಅಷ್ಟು ಧೈರ್ಯ ಬೇಕಲ್ಲ ?" ಎಂದು ಆಕೆ ಹಣವನ್ನು ಕೊಡುತ್ತ ಹೇಳಿದಳು.

"ಯಾವುದಕ್ಕೂ ನಾನು ಮರಳುತ್ತೇನೆ. ಆಮೇಲೆ ನೋಡುವ. ಓ ! ಅವರು ಎಷ್ಟು ದೂರ ಹೋದರು ! ಅಂತೂ ಹಣ ಕೊಟ್ಟೆಯಲ್ಲ. ಇನ್ನು ನಾನು ಕೊಟ್ಟಾಗ ಹಿಂದೆ ತೆಗೆದುಕೊಳ್ಳು."

"ಅದಿರಲಿ ಮಾರಪ್ಪ. ನೀವೆಲ್ಲಿ ಇಷ್ಟು ಬೆಳಗ್ಗೆ ಹೊರಟಿರಿ ?"

"ಎಲ್ಲಿಗೆಂದು ನಮ್ಮನ್ನು ನೋಡುವಾಗಲೇ ಗೊತ್ತಾಗದೆ ?"

"ಮದುವೆಗೆ ?"

"ಅಲ್ಲ, ಹೆಣ್ಣು ನಿಶ್ಚಯಕ್ಕೆ."

"ಹಾಂ ? ಯಾರಿಗೆ ?"

"ಯಾರ್‍ಯಾರಿಗೆ ಹೆಣ್ಣು ನಿಶ್ಚಯ ಮಾಡಲಿಕ್ಕೆ. ನಾನೇಕೆ ಹೋಗ್ತೇನೆ ?"

"ಎಲ್ಲಿ ?"

"ಅಕೋ ಅದೇ ಅಪಶಕುನ"

"ಸಾಕು ನಿನ್ನ ತಮಾಷೆ. ಎಲ್ಲಿಗೆ ಹೇಳು."

" ವಿಟ್ಲಕ್ಕೆ."

"........"

" ಇನ್ನು ನಾ ಓಡ್ತೇನೆ. ಅವರು ಹೋಗಿಯಾಯಿತು."

"........"

ಹೊನ್ನಮ್ಮ ಯೋಚನಾಮಗ್ನಳಾಗಿ ತುಸು ಹೊತ್ತು ಅವನು ಓಡುತ್ತಿದ್ದ ದಾರಿಯನ್ನೇ ಎವೆಯಿಕ್ಕದೆ ನೋಡಿದಳು. ಅವನ ಕೊಡೆ ಒಮ್ಮೆ ಜಾರಿ ಬಿತ್ತು. ಅದನ್ನು ಹೆಕ್ಕಿಕೊಳ್ಳುವಾಗ ತಲೆಗೆ ಸುತ್ತಿದ್ದ ರುಮಾಲು ಕೆಳಗೆ ಬಿತ್ತು. ಅವಳಿಗೆ ಒಳಗೊಳಗೇ ನಗು ಬಂತು. ಆದರೆ ಮಾರಪ್ಪ ಇನ್ನೂ ಓಡುತ್ತಿದ್ದಾನೆ. ಅವನೊಟ್ಟಿಗಿದ್ದವರು ಆ ಬಯಲನ್ನೇ ದಾಟಿ ಹೋಗಿರಬಹುದು.

ಕೊನೆಗೆ ಹಟ್ಟಿಯಲ್ಲಿ ದನದ ಕರು ಕೂಗುವುದನ್ನು ಕೇಳಿ ಅವಳಿಗೆ, ತನ್ನ ಕೆಲಸ ಒಂದೂ ಆಗಿಲ್ಲವೆಂದು ಗೋಚರವಾಯಿತು.

ಇದೇನು ! ಎಂದುಕೊಂಡಳಾಕೆ. ಲೋಕದಲ್ಲಿ ಜನರು ಜೀವಿಸುವುದು ಕೇವಲ ಮದುವೆಯೊಂದಕ್ಕಾಗಿಯೇ. ಅಲ್ಲ ಬೇರೆ ಏನಾದರೂ ಉದ್ದೇಶವಿದೆಯೆ ? ಈ ಹುಡುಗ ಇಲ್ಲಿ ಒಮ್ಮೆ ಬಂದರೆ ಅರ್ಧ ಗಂಟೆಯವರೆಗಾದರೂ ಉಳಕೊಳ್ಳುವನ, ಇಂದು ಎಷ್ಟು ಬೇಗನೇ ಕಾಲುಕಿತ್ತ ! ಹುಡುಗಿಯನ್ನು ನೋಡಲು ಆತುರ, ಬಹುಶಃ ತನ್ನನ್ನು ವರಿಸುವ ಸಮಯದಲ್ಲಿ ತನ್ನ ಗಂಡನೂ ಇದೇ ರೀತಿಯ ಲಗುಬಗೆಯಲ್ಲಿರಬೇಕಿತ್ತು. ಮತ್ತೆ ತಾನೇನಾದರೂ ಸುಮ್ಮನಿದ್ದೆನೆ ? ಇಲ್ಲ. ಪ್ರೈ ನೆರೆಯುವ ಮುಂಚೆಯೇ ಮದುವೆಯ ಪ್ರಸ್ತಾಪಗಳು ಬರತೊಡಗಿದ್ದುವು. ತನ್ನನ್ನು ನೋಡಲು ಎಷ್ಟು ಮಂದಿ ! ತನಗೆ ಮನೆಯ ಹೊರಗೆ ಸುಳಿಯಲೇ ಸಾಧ್ಯವಿಲ್ಲ; ವರಶೋಧಕರ ಕಡೆಯವರು ಹುಡುಗಿ ಹೇಗಿದೆ ಎಂದು ನೋಡಲು ಆತುರದಿಂದ ಎಲ್ಲಾ ಕಡೆಗಳಿಂದಲೂ ನೋಡುತ್ತಿದ್ದರು ! ತನ್ನ ಗಂಡನೇ ಮನೆಗೆ ಬಂದಾಗಲೂ ತನ್ನನ್ನು ಬಾವಿಯಿಂದ ನೀರು

ತೆಗೆಯುವಾಗ ಸಂಧಿಸಿದ್ದ. ಆಗ ತಾನು ಅವನು ಗುರುತು ತಿಳಿಯದೆ ಅವನೊಡನೆ ಮಾತನಾಡಿ ಬಿಟ್ಟದ್ದೆ. ಮತ್ತೆ ಅವನು ಆ ತಮಾಷೆಯನ್ನೇ ಎಷ್ಟು ಸಲ ತನಗೆ ಹೇಳಿಲ್ಲ! ಅವನನ್ನು ಕಂಡಾದ ಬಳಿಕ, ಮದುವೆಯು ನಿಶ್ಚಯವಾದ ಮೇಲೆ ತಾನು ಎಷ್ಟು ತನಕದಿಂದಿದ್ದೆ! ಮನೆ ಕೆಲಸ ಕೂಡಾ ಮಾಡಲು ಮನಸಿಲ್ಲದಾಯಿತು. ಹಗಲು ರಾತ್ರಿ ಮದುವಣಿಗನ ಚಿತ್ರವೇ ಕಣ್ಣ ಮುಂದೆ ಸುಳಿಯಲಾರಂಭವಾಯಿತು. ಮತ್ತೆ ಮದುವೆಯ ಸಮಯದಲ್ಲಂತೂ ಭವಿಷ್ಯದ ಬಗ್ಗಿನ ಆತುರವನ್ನು ಹೇಳತೀರದು. ಈಗ ಮಾರಪ್ಪನ ಹುಡುಗಿಯೂ ಅವನನ್ನು ಕಂಡೊಡನೆ ಮರುಳಾಗದಿರಲಿಕ್ಕಿಲ್ಲ. ಮದುವೆಯಾಗುವ ತನಕವೂ ಅವನನ್ನೇ ಅವಳು ನೆನೆಯದಿರಲಿಕ್ಕಿಲ್ಲ. ಹೇಗೆ ಸಮಯ ಓಡುತ್ತದೆ! ಇನ್ನೊಂದು ವರ್ಷದಲ್ಲಿ ಮಾರಪ್ಪ ಒಂದು ಮಗುವಿನ ತಂದೆಯಾಗಲೂ ಬಹುದು. ತಾನು ಅಷ್ಟರೊಳಗೆ ಸತ್ತು ಹೋಗಲೂಬಹುದು.

ಮಾರಪ್ಪನ ಮದುವೆಯ ಪ್ರಸ್ತಾಪ ಎರಡು ಮೂರು ವರ್ಷಗಳಿಂದ ನಡೆಯುತ್ತಿದೆ. ಅವನ ತಂದೆ ವೆಂಕಪ್ಪ ಮೊದಲು ಮಾರಪ್ಪನ ತಂಗಿ ಲಕ್ಷ್ಮಿಗೂ, ಅವನಿಗೂ ಒಂದೇ ಸಲ ವಿವಾಹವಾಗಬೇಕೆಂದು ಬಯಸಿದ್ದ. ಅಷ್ಟರಲ್ಲಿ ಲಕ್ಷ್ಮಿಗೆ ತಕ್ಕದಾದ ಹುಡುಗ ಸಿಕ್ಕಿದ್ದರಿಂದ ಅವಳ ಮದುವೆಯಾಗಿ ಹೋಯಿತು. ಮಾರಪ್ಪನಿಗೆ ಎಷ್ಟು ಪ್ರಯತ್ನ ಪಟ್ಟರೂ ತಕ್ಕ ಹುಡುಗಿಯರೇ ಸಿಗಲಿಲ್ಲ. ಅಂದರೆ ತಂದೆಗೆ ಹಿಡಿಸಿದ ಹುಡುಗಿ ಮಗನಿಗಾಗದು, ಮಗನಿಗೆ ಆದೀತೆಂದು ತೋರಿದ ಹುಡುಗಿ ತಂದೆಗಾಗದು. ಅದರೆಡೆಯಲ್ಲಿ ಮಾರಪ್ಪನ ತಾಯಿಯೂ ತೀರಿ ಕೊಂಡಳು. ಹಾಗಾಗಿ ಮದುವೆಯ ವಿಚಾರವೇ ಒಂದು ವರ್ಷದ ಮಟ್ಟಿಗೆ ಮುಂದೆ ಬಿದ್ದಿತ್ತು.

ಅದೂ ವೆಂಕಪ್ಪನೇನಾದರೂ ಘನಸ್ಥಿಕೆಯಲ್ಲಿ ಚಿಕ್ಕಮನುಷ್ಯನಲ್ಲ. ದುಡಿತದಿಂದಲೇ ಜೀವನವನ್ನು ಪ್ರಾರಂಭಿಸಿದ ಅವನಿಗೆ ಎಲ್ಲೋ ಸ್ವಲ್ಪ ಮಣ್ಣಿನಲ್ಲಿ ನಿಧಿಯೋ ಏನೋ ಸಿಕ್ಕಿತ್ತಂತೆ. ಅದನ್ನೇ ಸಾಲಕೊಟ್ಟು

ಬೆಳೆಯಿಸಿ ಮೂವತ್ತು ಮುಡಿ ಭತ್ತ ಬರುವ ಗದ್ದೆಗಳನ್ನು ಪಡ ಕೊಂಡಿದ್ದ. ಈಗ ಅದರ ವಿಸ್ತೀರ್ಣ ಇನ್ನೂ ಹೆಚ್ಚುತ್ತ ಬರುತ್ತಿತ್ತು. ಅದರ ಮೇಲೆ ಅವನು ತುಸು ಪುಂಡಾಟಿಕೆಯುವನೂ ಹೌದು. ಮೊದಲು ತಂತ್ರಿಯವರ ಜಾಗದಲ್ಲಿದ್ದಾಗ ಅವರ ಹಿಂದೆ ಹೋಗಿ ನಾಲ್ಕೈದು ಖೂನಿ ತಕ್ಷೀರುಗಳಲ್ಲಿ ಭಾಗವಹಿಸಿದ್ದ. ಒಮ್ಮೆ ಆರು ತಿಂಗಳು ಜೈಲು ಕೂಡಾ ಆಗಿತ್ತು. ಆದರೆ ಮತ್ತೆ ತಂತ್ರಿಯವರೇ ಅವನ ವಿರುದ್ಧ ನಿಂತರು. ಹಾಗಾಗಿ ಅವರ ಭೂಮಿಯನ್ನು ಬಿಟ್ಟು ಸ್ವಂತ ಜಮೀನನ್ನೇ ಪಡಕೊಂಡ. ಈಗಲಾದರೂ ಅವನ ದರ್ಪಕ್ಕೆ ಬೆದರದ ಹಳ್ಳಿಗರು ಕಡಿಮೆ. ಅವನಿಂದ ಸಾಲದ ಪ್ರಯೋಜನ ಪಡೆಯುದವರು ಹೆಚ್ಚು ಕಡಿಮೆ ಇಲ್ಲವೇ ಇಲ್ಲವೆನ್ನಲೂ ಬಹುದು. ಆದರೂ ಮಗನಿಗೆ ಎಣ್ಣೆಯ ಗಾಣವೊಂದನ್ನು ಮಾಡಿಕೊಟ್ಟು, ಅವನನ್ನು ಅದರಲ್ಲಿ ದುಡಿಸುತ್ತಿದ್ದ. ಅದು ಅವನ ಕುಲ ಕಸಬು. ಅದರಿಂದ ಉತ್ಪತ್ತಿಯೂ ಸಾಕಷ್ಟು ಸಿಗುತ್ತಿತ್ತು.

ಆದ್ದರಿಂದ ವೆಂಕಪ್ಪ ಸಾಧಾರಣದವರ ಸಂಬಂಧವನ್ನು ಬೆಳೆಸಲು ಹಿಂಜರಿಯುತ್ತಿದ್ದ. ಅದೂ ಮಾರಪ್ಪನೊಬ್ಬನೇ ಅವನ ಆಸ್ತಿ-ಸಂಪತ್ತು ಗಳಿಗೆಲ್ಲ ಉತ್ತರಾಧಿಕಾರಿ. ಅವನ ಕುಲಕ್ಕೆ ಸೇರಿದವರು ಆ ಊರಲ್ಲಿ ಯಾರೂ ಅಷ್ಟು ಅನುಕೂಲಸ್ಥರಲ್ಲ. ಹೆಚ್ಚಿನವರು ಗೇಯುವವರು, ಬಡವರು. ಕೆಲವರೇನೋ ಒಂದಿಷ್ಟು ವಾಲಗ ಊದುವುದನ್ನು ಕಲಿತು ಸಂಪಾದನೆ ಮಾಡುತ್ತಿದ್ದರು. ಆದರೆ ಅವರಲ್ಲಾರೂ ವೆಂಕಪ್ಪ ನಿಗೆ ಸರಿದೂಗುವವರಿಲ್ಲ.

ಮಂಗಳೂರಿನ ಕಡೆ ತನ್ನವರು ಅನುಕೂಲಸ್ಥರಿರುವರೆಂದು ವೆಂಕಪ್ಪ ಕೇಳಿದ್ದ. ಆದರೆ ಮಂಗಳೂರಿನ ವಾತಾವರಣದಲ್ಲಿ ಬೆಳೆದ ಹುಡುಗಿಯರು ಅವನಿಗೆ ಹಿಡಿಸುತ್ತಿದ್ದಿಲ್ಲ. ಅವರ ಆ ಲೋಲಾಕು, ಆ ತೆಳುವಾದ ಸೀರೆ, ಓರೆ ಬೈತಲೆ, ಕುತ್ತಿಗೆ ತುಂಬ ಮಣಿಗಳು—ಇವ ನ್ನೆಲ್ಲ ಅವನು ಸೂಳೆಯರ ಆಭರಣವೆನ್ನುತ್ತಿದ್ದ.

'ನನ್ನ ಮಗ ಅಂಥವಳನ್ನು ಮದುವೆಯಾದರೆ ಮತ್ತೆ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿಯಲಿಕ್ಕೆ ಹೋಗಬೇಕಾದೀತು. ಅವರ ಪೌಡರಿಗೆ ನನ್ನ ಆಸ್ತಿ ಸಾಕಾಗಲಿಕ್ಕಿಲ್ಲ. ಆ ವೀರಪ್ಪ ಸೆಟ್ಟಿಯ ಮಗನಿಗೆ ಮಂಗಳೂರಿನ ಹುಡುಗಿಯನ್ನು ತಂದು ಆದ ಅವಸ್ಥೆ ಸಾಕು. ಎರಡೇ ವರ್ಷದಲ್ಲಿ ವೀರಪ್ಪಸೆಟ್ಟಿಯ ನೂರುಮುಡಿ ಗದ್ದೆಗೂ ಕ್ರಯಚೀಟು, ಹಟ್ಟಿಯಲ್ಲಿದ್ದ ಜಾನುವಾರುಗಳಿಗೆಲ್ಲ ಗೊಬ್ಬರಚೀಟು, ಮತ್ತೆ ತಂತ್ರಿಯವರ ಗದ್ದೆಗಳಿಗೆ ಗೇಣಿಚೀಟು ಆಗುವಂತಾಯಿತು. ಅದೂ ನನ್ನ ಮಗ ಶುದ್ಧ ಪೆಂಗ. ಒಂದಿಷ್ಟೂ ಬುದ್ಧಿವಂತಿಕೆಯಿಲ್ಲದ ಸರಳ ಮನುಷ್ಯನವ. ಅಂಥ ಜೋರಿನ ಹುಡುಗಿಯರು ಅವನನ್ನು ಒತ್ತೆಯಿಟ್ಟು ಬಿಟ್ಟಾರು. ಬೇಡ, ಅವನಿಗೆ ಹಳ್ಳಿಯ ಪಾಪದ ಹುಡುಗಿಯೇ ಸಾಕು....' ಎನ್ನುತ್ತಿದ್ದ ವೆಂಕಪ್ಪ ಒಮ್ಮೊಮ್ಮೆ.

ಮಾರಪ್ಪನು ಇದನ್ನು ಅಂತರಂಗದಲ್ಲಿ ಒಪ್ಪದಿದ್ದರೂ, ಬಹಿರಂಗದಲ್ಲಿ ತುಟಿಯೆತ್ತುತ್ತಿದ್ದಿಲ್ಲ. ಹಾಗೆ ಮಾತಾಡಿದರೆ ತನ್ನ ತಂದೆಯೊಡನೆ ನಡೆಯಲಿಕ್ಕಿಲ್ಲವೆಂದೂ ಮಾರಪ್ಪನಿಗೆ ಚೆನ್ನಾಗಿ ತಿಳಿದಿತ್ತು. ತಂದೆ ಹಠ ಮಾಡಿದರೆ, ಆಸ್ತಿಯನ್ನೇ ಬೇರೆಯವರಿಗೆ ಬಿಟ್ಟುಬಿಡಬಹುದೆಂಬ ಹೆದರಿಕೆಯೂ ಅವನಿಗಿತ್ತು. ಮತ್ತೆ ಅವನಿಗೆ ಹಳ್ಳಿಯ ಹುಡುಗಿ, ಪೇಟೆಯ ಹುಡುಗಿ ಇತ್ಯಾದಿ ಭೇದಗಳೇನೂ ಅಷ್ಟು ತಿಳಿಯದು. ಯಥಾರ್ಥವಾಗಿ, ಅವನು ಯಾವ ಹುಡುಗಿಯೊಡನೆಯೂ ವಿಶೇಷತಃ ಸಂಪರ್ಕವನ್ನಿಟ್ಟುಕೊಂಡಿರಲಿಲ್ಲ. ಮತ್ತೆ ಅವರ ಮೇಲೆ ಅಷ್ಟೊಂದು ಒಳ್ಳೆಯ ಅಭಿಪ್ರಾಯವೂ ಅವನಿಗಿರಲಿಲ್ಲ. ಒಮ್ಮೊಮ್ಮೆ ಒಬ್ಬೊಬ್ಬ ಹೆಂಗಸರೊಡನೆ ಪ್ರಣಯಕ್ಕಾಗಿ ಹಾತೊರೆದಿದ್ದ, ಪ್ರಯತ್ನ ಮಾಡಿದ್ದ. ಆದರೆ ಅವು ಸುಸೂತ್ರವಾಗಿ ಸಾಗಲಿಲ್ಲ. ಒಬ್ಬಾಕೆ ಅವನನ್ನು ಗದರಿಸಿಯೂ ಬಿಟ್ಟಳು. ಮತ್ತೆ ಅವಳ ಬಾಯಿ ಮುಚ್ಚಿಸಲು ಅವನು ಹಣದಾಸೆ ತೋರಿಸಬೇಕಾಯಿತು. ಆದರೂ ಅವನ ಏರುತ್ತಿದ್ದ ವಯಸ್ಸಿಗೆ ಸಹಜವಾದ ಆಸೆಗಳು ಅವನಲ್ಲಿ ಸುಪ್ತವಾಗಿ ಇನ್ನೂ

ಹರಿಯುತ್ತಿದ್ದುವು. ಆದ್ದರಿಂದ ಹೊನ್ನಮ್ಮ ಅವನಲ್ಲಿ ಒಂದು ಪ್ರಲೋಭನವನ್ನು ಉಂಟುಮಾಡಿದ್ದಳು. ಆದರೂ ಗಾಯಗೊಂಡ ಹಂದಿಯಂತೆ ಅವನಿಗೆ ಅವಳ ವಿಷಯದಲ್ಲಿ ಬಹಳ ಮುಂದರಿದು ಹೋಗಲು ಧೈರ್ಯವಿರಲಿಲ್ಲ.

ಇಂಥ ಕೇವಲ ದೈಹಿಕ ಸಂಪರ್ಕದ ಹೊರತು, ಮಾರಪ್ಪನಿಗೆ ಮದುವೆಯಲ್ಲಿ ಬೇರೆ ಪ್ರಾಧಾನ್ಯವಿರಲಿಲ್ಲ. ಮದುವೆಯಾದ ಬಳಿಕ ಮಕ್ಕಳಾಗುವುವು, ಅವು ದೊಡ್ಡವಾಗುವುವು, ತಾನು ಮುದುಕನಾಗಿ ಕೊನೆಗೆ ಸಾಯುತ್ತೇನೆ - ಇದು ಅವನ ಭವಿತವ್ಯದ ದೃಷ್ಟಿ. ಮತ್ತೆ ತನ್ನ ತಂದೆ ಏಕಾಗಿ ಇಷ್ಟೆಲ್ಲ ತನಗೊಂದು ಹುಡುಗಿಯನ್ನು ಹುಡುಕಲು ಪ್ರಯತ್ನಿಸುತ್ತಾನೆ, ಅವನೇಕೆ ಹುಡುಗಿಯರ ಗುಣಗಳ ಕುರಿತಾಗಿ ಇಷ್ಟೆಲ್ಲ ಪೃಥಃಕ್ಕರಣ ನಡೆಸುತ್ತಾನೆ - ಎಂಬಿತ್ಯಾದಿ ವಿಷಯಗಳು ಮಾರಪ್ಪನನ್ನೆಂದೂ ಪೀಡಿಸಿರಲಿಲ್ಲ. ಆದುದರಿಂದ ಮದುವೆಯ ಜವಾಬುದಾರಿಯನ್ನೆಲ್ಲ ತಂದೆಯ ಮೇಲೆಯೇ ಹೊರಿಸಿ ತಾನು ನಿಶ್ಚಿಂತನಾಗಿ ದಿನಗಳೆಯುತ್ತಿದ್ದ.

ಈಗ ವಿಟ್ಲದವರು ಸಾಧಾರಣ ಅನುಕೂಲವಂತರೆಂಬ ವರದಿ ವೆಂಕಪ್ಪನಿಗೆ ಸಿಕ್ಕಿದುದರಿಂದಲೇ ಅವನು ಊರಿನ ಎರಡು ಜನರನ್ನು ಕರೆದುಕೊಂಡು ಮಾರಪ್ಪನೊಡನೆ ಹೊರಟಿದ್ದ. ಹೇಗಾದರೂ ಆ ಸಂಬಂಧ ಸರಿಬೀಳಲಿ ಎಂದು ಅವನು ಹೊರಡುವ ಮೊದಲೇ ಭೂತಗಳಿಗೆ ಹರಿಕೆ ಹೇಳಿದ್ದ.

ಅವರು ವಿಟ್ಲಕ್ಕೆ ತಲುಪುವಾಗ ಮೂರು ಗಂಟೆ ಕಳೆದಿತ್ತು. ಅಲ್ಲೇ ಒಂದಿಷ್ಟು ಕಾಫಿ ಕುಡಿದು, ಹುಡುಗಿಯ ಮನೆಗೆ ನಡೆದರು. ಅಲ್ಲಿ ಹೋದೊಡನೆ ಊಟವಾಯಿತು. ಅವರು ಹೊರಗೆ ಕುಳಿತುಕೊಂಡು ಮತ್ತೆ ಸುಖದುಃಖಗಳನ್ನು ಮಾತಾಡತೊಡಗಿದರು.

ಮಾರಪ್ಪ ಮೆಲ್ಲನೆ ಇಣಿಕಿ ಒಳಗೆ ನೋಡುತ್ತಿದ್ದ.

ಅಲ್ಲೋ ಎದುರಿನ ಕಿಟಕಿಯ ಒಳಗಿಂದ ಯಾರೋ ನೋಡು

ತ್ತಿದ್ದಂತೆ ಅವನಿಗೆ ಭಾಸವಾಯಿತು. ಆ ವ್ಯಕ್ತಿಯ ಕಣ್ಣುಗಳು ಮಾತ್ರ ಅವನಿಗೆ ತೋರುತ್ತಿದ್ದುವು. ಮತ್ತೆ ಕಾಜುಬಳೆಯ ಸದ್ದು ಕೇಳಿತು. ಆಗ ಅದು ಹೆಂಗಸೆಂದು ಅವನು ಅರ್ಥಮಾಡಿಕೊಂಡ. ಅಲ್ಲದೆ, ಮುಖವೂ ಒಂದಿಷ್ಟು ಹೊಳೆದಂತಾಯಿತು.

ಮಾರಪ್ಪನಿಗೆ ನಿಜವಾಗಿಯೂ ನಡೆದ ಆಯಾಸದಿಂದ ತೂಕಡಿಕೆ ಹತ್ತಿತ್ತು. ಆದರೆ ಈ ಕಿಟಕಿಯ ವಿದ್ಯಮಾನ ಅದನ್ನು ಬಿಡಿಸಿತು. ಅವನು ನೆಟ್ಟಗೆ ಒಂದು ಕಂಭಕ್ಕೆ ಒರಗಿ ಕುಳಿತುಕೊಂಡ. ಹಿರಿಯರು ಮಾತಾಡುತ್ತಿದ್ದುದು ಅವನ ಕಿವಿಗೊಂದಿಷ್ಟೂ ಬೀಳಲಿಲ್ಲ. ಬಿದ್ದುದೂ ಅಷ್ಟೊಂದು ರುಚಿಸಲಿಲ್ಲ.

ಒಮ್ಮೆ ಒಂದು ಹುಡುಗಿ ಅಂಗಳದಲ್ಲಿ ಹಣ್ಣುಮೆಣಸಿನ ಮೇಲೆ ಧಾಳಿ ಮಾಡುತ್ತಿದ್ದ ಕಾಗೆಗಳನ್ನೋಡಿಸಲು ಮನೆಯಿಂದ ಹೊರಗೆ ಬಂದು, ಫಕ್ಕನೆ ಒಳಗೋಡಿದಳು. ಮಾರಪ್ಪ ಅವಳೇ ತನ್ನನ್ನು ಮದುವೆಯಾಗಲಿರುವವಳಾಗಿರಬಹುದೆಂದು ಭಾವಿಸಿದ. ಆ ಕ್ಷಣ ಕಾಲದ ನೋಟದಲ್ಲೇ ಅವಳ ಚಿತ್ರ ಅವನ ಮನಸ್ಸಿನಲ್ಲಿ ಮೂಡಿ ಯಾಗಿತ್ತು. ಹುಡುಗಿ ಗೋಧಿ ಬಣ್ಣದವಳು. ಗಾತ್ರದಲ್ಲಿ ಅಷ್ಟೊಂದು ನೀಳವಾಗಿಲ್ಲ. ಮುಖದಲ್ಲಿ ಸವಿಯಿದೆ.

ಅಷ್ಟರಲ್ಲಿ ಒಳಗಿಂದ ಬೇರೊಬ್ಬರಾರೋ ಅವನನ್ನೇ ನೋಡು ತ್ತಿರುವುದನ್ನು ಲಕ್ಷಿಸಿ ಮಾರಪ್ಪ ಮನೆಯ ಮುಂದಿದ್ದ ಮಾವಿನ ಮರವನ್ನೇ ನೋಡತೊಡಗಿದ.

ದೊಡ್ಡ ಮಾವಿನ ಮರವದು. ಅನೇಕ ಶಾಖೆ ಉಪಶಾಖೆಗಳು ಬಹುದೂರ ಹಬ್ಬಿವೆ. ಕೆಲವೆಡೆ ಇನ್ನೂ ಹೂ ಬಿಡುತ್ತಿದೆ. ಅವುಗಳ ಮಧುವನ್ನು ಸಂಗ್ರಹಿಸಲು ತುಂಬಿಗಳು ಹಾರಾಡುತ್ತಿವೆ. ಇನ್ನು ಕೆಲವೆಡೆ ಮಾವಿನ ಮಿಡಿಗಳು ಗೊಂಚಲು ಗೊಂಚಲಾಗಿ ನೇತಾಡು ತ್ತಿವೆ. ಹಕ್ಕಿಗಳು ಚಿಲಿಪಿಲಿಗುಟ್ಟುತ್ತ ಗೆಲ್ಲಿನಿಂದ ಗೆಲ್ಲಿಗೆ ಎಲೆಯಿಂದ ಎಲೆಗೆ ಹಾರಾಡುತ್ತಿವೆ, ಕುಪ್ಪಳಿಸುತ್ತಿವೆ. ಕಾಗೆಗಳಿಂದ ಹಿಡಿದು

ಸಣ್ಣ ಸಣ್ಣ ಜಾತಿಯ ನೀಲ, ಕೆಂಪು, ಕಂದು, ಬೂದು ಇತ್ಯಾದಿ ಹಚ್ಚ ಕಡವೆ ಎಲ್ಲಾ ಬಣ್ಣದ ಹಕ್ಕಿಗಳೂ ಅದರಲ್ಲಿವೆ. ಒಂದು 'ಚಿಂಕ್ ಚಿಂಕ್' ಎನ್ನುವುದು. ಮತ್ತೊಂದು 'ಟ್ರೂಂ ಟ್ರೂಂ' ಎನ್ನುವುದು. ಇನ್ನೊಂದು 'ಕೂಂಕ್ ಕೂಂಕ್' ಎನ್ನುತ ನೆಗೆಯುವುದು. ಕಲವು ಬರೆ 'ಕೀ ಕೀ' ಎನ್ನುತ್ತ ಕಿರುಚುವುವು. ಕೆಲವು 'ಕೇ ಕೇ' ಎನ್ನುವುವು. ಮಾರಪ್ಪನಿಗೆ ಅವು ಎಲ್ಲವುಗಳ ಸ್ವರವನ್ನು ಬೇರೆ ಬೇರೆಯಾಗಿ ಆಲಿಸುವುದು ಅಸಾಧ್ಯವಾಯಿತು. ಆದರೆ ಅವುಗಳ ಚಟುವಟಿಕೆಗಳನ್ನು ಇಷ್ಟು ಶ್ರದ್ಧೆಯಿಂದ ಕಂಡುದು ಅವನ ಜೀವ ಮಾನದಲ್ಲೇ ಮೊದಲು ; ಅವನು ಕಂಡಿದ್ದರೂ ಅವುಗಳ ಮಾಧುರ್ಯ ವನ್ನು ಅವನು ಈತನಕ ಹೀರಿರಲಿಲ್ಲ.

ಅವನು ಯೋಚಿಸತೊಡಗಿದ: ತಾನು ಹುಟ್ಟಿ ಇಪ್ಪತ್ತು ವರ್ಷ ಕಳೆದಿರಬಹುದು. ಈ ಸಮಯದಲ್ಲಿ ತಾನು ಈ ಮರಗಳ, ಈ ಹಕ್ಕಿಗಳ, ಈ ಪ್ರಾಣಿಗಳ ಮಧ್ಯೆ, ಅವುಗಳೊಡನೆಯೇ ಬೆಳೆ ದಿದ್ದೇನೆ. ಆದರೆ ಅವುಗಳ ಕುರಿತು ಒಮ್ಮೆಯಾದರೂ ಒಂದಿಷ್ಟಾದರೂ ಯೋಚಿಸಿದ್ದೇನೆಯೆ? ಅವೆಷ್ಟು ಸವಿಯಾದ ಜೀವನವನ್ನು ನಡೆಸು ತ್ತಿವೆ! ಅವಕ್ಕೆ ತನ್ನಂತೆ ಯಾವ ಸಮಸ್ಯೆಯೂ ಬಾಧಿಸದು. ಅವುಗಳ ಜೀವನ ತಿನ್ನುವುದರಲ್ಲೋ, ವಿಲಾಸದಲ್ಲೋ ಸಾಗುತ್ತಿದೆ.

ಅಷ್ಟರಲ್ಲಿ ಎರಡು ಅಳಿಲುಗಳು ಒಂದನ್ನೊಂದು ಬೆನ್ನಟ್ಟು ತ್ತಿರುವುದು ಅವನಿಗೆ ಕಾಣಿಸಿತು. ಅವು ಬಹುಶಃ ಪ್ರಣಯಿಗಳಾಗಿರ ಬೇಕೆಂದು ಭಾವಿಸಿದ. ಅವು ತಮ್ಮ ಗೊಂಡೆ ಬಾಲಗಳನ್ನು ಹಾರಿಸುತ್ತ, 'ಚುಕ್ ಚುಂಯ್ ಚುಕ್ ಚುಕ್ ಚುಂಯ್' ಎಂದು ನೆಗೆಯುತ್ತಿದ್ದುವು. ಅವು ಓಡುವ ದಾರಿಯನ್ನು ನಿರೀಕ್ಷಿಸಲಾಗದು. ಒಮ್ಮೆ ಕಾಂಡದಲ್ಲಿ ಓಡುತ್ತಿವೆ, ಮತ್ತೊಮ್ಮೆ ಕೊಂಬೆಯಲ್ಲಿ ಹಾರು ತ್ತಿವೆ. ಆದರೂ ಒಂದು ಇನ್ನೊಂದಕ್ಕೆ ಮುಟ್ಟ ಸಿಗದು. ಓಡಿಸು ವುದು ಗಂಡು ಅಳಿಲಾಗಿರಬೇಕು, ಓಡುವುದು ಹೆಣ್ಣು ಅಳಿಲಾಗಿರ

ಬೇಕು ಎಂದು ಮಾರಪ್ಪ ಅಂದುಕೊಂಡ. ಅವನು ನೋಡಿದಷ್ಟೂ ಅವುಗಳ ಓಟದ ಸಂಧ್ಯ ಮುಗಿಯುವಂತೆ ತೋರುತ್ತಿದ್ದಿಲ್ಲ.

ಎಂಥ ಲವಲವಿಕೆ ಅವುಗಳ ದೇಹದಲ್ಲಿ! ಏನು ಚೈತನ್ಯ! ಬೆಳಕಿನ ವೇಗದಲ್ಲಿ ಅವು ಓಡುತ್ತಿವೆ. ಗಂಟೆಗಟ್ಟಲೆ ಓಡಿದರೂ ಬಹುಶಃ ಅವುಗಳಿಗೆ ಒಂದಿಷ್ಟೂ ದಣಿವಾಗದು, ಆಯಾಸವಾಗದು. ಮಾರಪ್ಪನೇನಾದರೂ ಅಳಿಲುಗಳಿಗೆ ಅಪರಿಚಿತನಲ್ಲ. ಎಷ್ಟೋ ಅಳಿಲುಗಳನ್ನು ಅವನು ಹಿಡಿದಿದ್ದ. ಅವುಗಳನ್ನು ಕೊಂದಿದ್ದ. ಅವನ್ನು ಬೇಯಿಸಿ ತಿಂದಿದ್ದ. ಆದರೂ ಅವುಗಳ ಕುರಿತು ಅವನು ಈತನಕ ಇಷ್ಟು ಪರಿಶೀಲಿಸಿದುದಿಲ್ಲ.

ಮನಸ್ಸಿನ ಸ್ವಭಾವವೇ ಹಾಗೆ. ಒಮ್ಮೆ ಒಂದು ಗತಿಯಲ್ಲಿ ಅದು ಯೋಚಿಸತೊಡಗಿದರೆ, ಮತ್ತೆ ಆ ಗೆರೆಯಿಂದ ಅದು ಸಾಮಾನ್ಯವಾಗಿ ತಪ್ಪಿ ಹೋಗದು. ಅದೇ ಅದರ ಅಭ್ಯಾಸದ, ಶಿಸ್ತಿನ, ನಿಯಮದ ದಾರಿ. ಇಲ್ಲವಾದರೆ ಮನುಷ್ಯನ ಸುತ್ತುಮುತ್ತಲೂ ಪ್ರತಿಕ್ಷಣವೂ, ಎಷ್ಟು ವಿಧದ ವಾಸನೆಗಳು ಬರುತ್ತವೆ, ಎಷ್ಟು ಬಗೆಯ ಶಬ್ದಗಳಾಗುತ್ತವೆ, ಎಷ್ಟು ರೀತಿಯ ಬಣ್ಣಗಳು, ಆಕಾರ-ವಿಕಾರಗಳು ಕಾಣ ಸಿಗುತ್ತವೆ, ಯಾವ ಯಾವ ತರಹೆಯ ಸ್ಪರ್ಶಗಳಾಗುತ್ತವೆ! ಅವುಗಳೆಲ್ಲವುಗಳ ಕುರಿತಾಗಿ ಮನಸ್ಸು ಯೋಚಿಸ ತೊಡಗಿದರೆ ಅದು ಮನುಷ್ಯನಿಗೇನೂ ಪ್ರಯೋಜನವಾಗಲಿಕ್ಕಿಲ್ಲ. ಆದ್ದರಿಂದಲೇ ಮನುಷ್ಯನ ಶಿಕ್ಷಣಕ್ಕನುಸಾರವಾಗಿ, ಅಭ್ಯಾಸಕ್ಕನುಗುಣವಾಗಿ, ವಾತಾವರಣವನ್ನು ಹೊಂದಿಕೊಂಡು, ಅವನ ಮನಸ್ಸು ಬೆಳೆಯುವುದು, ಸಂಸ್ಕಾರ ಪಡೆಯುವುದು, ಪರಿಪಕ್ವವಾಗುವುದು. ಆದರೆ ಈ ನಿಯಮಿತ ಕಾಲನಿಯಾಮಕ ಪಟ್ಟಿಯೂ ಕೆಲ ಪ್ರಸಂಗಗಳಲ್ಲಿ ತಪ್ಪಿ ಹೋಗುವುದುಂಟು. ಆಗ ಪ್ರಕೃತಿಯ ಕಡೆ, ಸೃಷ್ಟಿಯ ಅಘೋರ ವೈಚಿತ್ರ್ಯದ ಕಡೆ ಅದು ಹೊರಳುವುದು. ಆಗಲೇ ಅದಕ್ಕೆ ತನ್ನ ಇರವು, ತನ್ನ ಐತಿಹ್ಯ, ತನಗೆ ಪ್ರಕೃತಿಯಲ್ಲಿರುವ ಸ್ಥಾನಮಾನ—

ಇವುಗಳೆಲ್ಲವುಗಳ ಅರಿವಾಗಬೇಕಷ್ಟೆ.

ವೆಂಕಪ್ಪ ಮತ್ತು ಇತರರು ಇನ್ನೂ ಮಾತನಾಡುತ್ತಿದ್ದರು. ಮದುವೆಯ ವಿಚಾರಕ್ಕೆ ಅವರು ಇನ್ನೂ ಬಂದಿರಲಿಲ್ಲ.

"ನಮ್ಮಲ್ಲಿ ಅಕ್ಕಿಯ ಬೆಲೆ ಯಾವಾಗಲೂ ತಗ್ಗುವುದಿಲ್ಲ. ಇಲ್ಲಿಂದ ಕಾಸರಗೋಡಿಗೆ ಅಕ್ಕಿ ಸಾಗಿಸಲು ಬಹಳ ಸುಲಭ. ರಾತ್ರಿಯೇ ಅಲ್ಲಿಂದ ಮಾಪಿಳ್ಳೆಯವರು ಎರಡು ಮೂರು ಲಾರಿಗಳನ್ನು ತರುತ್ತಾರೆ. ಕ್ಷಣಕಾಲದಲ್ಲಿ ಅಕ್ಕಿ ತುಂಬಿಸುತ್ತಾರೆ. ಹೇಗೋ ಹೋಗುತ್ತಾರೆ. ಆದ್ದರಿಂದ ಬೇಸಗೆ ಮುಗಿದು ಮಳೆಗಾಲ ಬರುವ ಹೊತ್ತಿಗೆ ಊರಲ್ಲಿ ಅಕ್ಕಿ ಇಲ್ಲವೆಂದು ಬೊಬ್ಬೆಯೇಳುತ್ತದೆ. ಎಲ್ಲ ಬಿಟ್ಟು ಹೆಚ್ಚಿನವರೊಡನೆ ಭತ್ತದ ಸಸಿ ನೆಡಲು ಕೂಡಾ ಮಜೂರಿಗೆ ಸಾಕಷ್ಟು ಅಕ್ಕಿಯಿರುವುದಿಲ್ಲ. ಆಗ ಕ್ರಯ ಒಂದೇ ಸವನೆ ಏರಲು ಆರಂಭವಾಗುತ್ತದೆ."

"ನಮ್ಮ ಊರಲ್ಲೂ ಅಷ್ಟೇ. ಅಕ್ಕಿಯ ಒಳ್ಳೇದು-ಕೆಟ್ಟದು ಗುಣಗಳೆಲ್ಲ ಈಗ ಮಾಯವಾಗಿವೆ. ಅಕ್ಕಿಯೆಂದಾಗಬೇಕಾದರೆ ಭತ್ತದಿಂದ ಕೇವಲ ಸಿಪ್ಪೆ ಸುಲಿದರೆ ಸಾಕು. ಅದಕ್ಕೆ ಅಕ್ಕಿಯೆಂದು ಹೆಸರಾಗುತ್ತದೆ. ಬೆಲೆಯೂ ಹಾಗೆಯೇ. ಎಲ್ಲಾ ಹಣವಿದ್ದ ವ್ಯಾಪಾರಸ್ಥರ ದಿನ. ಮತ್ತೇನೋ ಟೋರುಗಳಿದ್ದಾವೆ. ಅಲ್ಲಿ ದೂಮ, ಕೋಟಿ, ಲಕಣ, ಪಾಂಡಿ—ಹೀಗೆಲ್ಲ ಹೆಸರುಗಳನ್ನು ಪುಸ್ತಕದಲ್ಲಿ ಬರೆದು ತಮಗೆ ಇಚ್ಛೆಬಂದ ಬೆಲೆಗೆ ಕದ್ದು ಮಾರಾಟ ಮಾಡುತ್ತಾರೆ. ಅಕ್ಕಿಯನ್ನು ಪಡಕೊಳ್ಳುವ ಟೋರುಗಳೂ ಅಷ್ಟೇ. ಮುಡಿಗೆ ನಲ್ವತ್ತ ಮೂರು ಸೇರು ಹಾಕಿದರೂ ಅರ್ಧ ಸೇರು ಕಡಿಮೆಯಾಗದಿಲ್ಲ. ನಮ್ಮೂರಿನ ಟೋರಿನ ಏಜಂಟರು ಈಗಾಗಲೇ ಹೊಸ ಮನೆಯೊಂದನ್ನು ಕಟ್ಟಿಸಿಯಾಗಿದೆ. ಒಂದು ಲಾರಿ ಕೊಂಡುಕೊಂಡಿದ್ದಾರೆ. ಇನ್ನೊಂದನ್ನು ಕೊಳ್ಳಲಿದ್ದಾರಂತೆ. ಈ ಟೋರಿನ ಕೆಲಸದ ಮುಂಚೆ, ಈ ಮಹರಾಯ ಎಲ್ಲೋ ಬೇಡಿ ತಿನ್ನುತ್ತಿದ್ದವ. ಈಗ ಅವನ ಕೈಯಲ್ಲಿ ವಾಚು ಏನು! ಎಂಟು ಬೆರಳುಗಳಲ್ಲಿಯೂ ಹೊಳೆಯುವ ಕಲ್ಲುಗಳ ಉಂಗುರವೇನು!

ಹೆಂಡತಿಯ ಕುತ್ತಿಗೆಯಲ್ಲಿ ಪದಕಗಳೇನು !"

"ಎಲ್ಲಾ ಕಡೆಗಳಲ್ಲೂ ಅಷ್ಟೇ ವೆಂಕಪ್ಪಣ್ಣ. ಸತ್ಯದ ದಿನಗಳು ಕಳೆದುಹೋದುವು. ಈಗ ಅಳತೆಗೆ ಸರಿಯಾಗಿ ಉಪ್ಪನ್ನಾದರೂ ಮಾರಾಟ ಮಾಡುವ ವ್ಯಾಪಾರಿ ಯಾರಿದ್ದಾನೆ ? ಆದರೆ ಇವಕ್ಕೆಲ್ಲ ದಿನ ಬರಲಿದೆ. ಏನೋ ಈಗ ಸರಕಾರದವರು ನೋಟುಗಳನ್ನು ಒಂದೇ ಸವನೆ ಮುದ್ರಿಸುತ್ತಾರೆ. ಜನರ ಕೈಯಲ್ಲಿ ನೆರೆಯ ನೀರಿನಂತೆ ಹಣ ತುಂಬಿದೆ. ಇನ್ನೊಂದು ದಿನ ಅದೇ ಕಾಗದದ ನೋಟನ್ನು ಉಪ್ಪು ಹಾಕಿ ಎಲ್ಲರೂ ನೆಕ್ಕಲಿದ್ದಾರೆ. ನಮ್ಮಲ್ಲಿ ಯಾವಾಗ ಬೆಳ್ಳಿಯ ರೂಪಾಯಿ ಹೋಗಿ ಈ ನೋಟಿನ ಯುಗ ಬಂತೋ ಅಂದೇ ದಾರಿದ್ರ್ಯ ಬಂದಿದೆ."

"ಅದು ನಿಜ ನಿಜ", ವೆಂಕಪ್ಪ ಬಹಳ ಮುತುವರ್ಜಿಯಿಂದ ಹೇಳುತ್ತಿದ್ದ. "ನಮ್ಮೂರಲ್ಲೊಂದು ಕಳ್ಳ ನೋಟುಗಳ ಗಲಾಟೆಯೇನು! ರಾತ್ರೆ ಅಕ್ಕಿ ಕೊಂಡುಹೋಗಲಿಕ್ಕೆ ಬರುವವರೊಡನೆ ಇರುವುದು ಎಲ್ಲಾ ಕಳ್ಳ ನೋಟುಗಳೇ. ಮೊನ್ನೆ ನಮ್ಮ ಒಬ್ಬ ಭಟ್ಟರು ಅಕ್ಕಿ ಮುಡಿಗಳೊಡನೆ, ತೌಡಿನ ಮುಡಿಗಳನ್ನೂ ಸೇರಿಸಿ ಒಬ್ಬ ಮಾಪಿಳ್ಳೆಗೆ ಮಾರಿದರು. ರಾತ್ರಿಯಾದ್ದರಿಂದಲೂ, ಪೋಲೀಸರ ಭಯವಿದ್ದುದ ರಿಂದಲೂ ಆ ಬ್ಯಾರಿ ಸರಿಯಾಗಿ ಎಲ್ಲವನ್ನೂ ನೋಡಲಿಲ್ಲ. ಆದರೆ ಮರುದಿನ ರಾತ್ರೆಯೂ ಲಾರಿ ತೆಗೆದುಕೊಂಡು ಬಂದು ಮುಡಿಗಳನ್ನು ತುಂಬಿಸಿದ. ಬಳಿಕ ಭಟ್ಟರ ಕೈಯಲ್ಲಿ ಕತ್ತಲೆಯಲ್ಲೇ ನೋಟುಗಳ ಕಟ್ಟುಗಳನ್ನು ಎಣಿಕೆ ಮಾಡಿಕೊಟ್ಟ. ಭಟ್ಟರು ಮತ್ತೆ ಆ ನೋಟು ಗಳನ್ನು ಚಿಲ್ಲರೆ ಮಾಡಲು ಮಂಗಳೂರಲ್ಲಿ ಕೊಟ್ಟಾಗ ಅವನ್ನು ಯಾರೂ ತೆಕ್ಕೊಳ್ಳಲಿಲ್ಲ. ಅವು ಕಳ್ಳ ನೋಟುಗಳಂತೆ! ಈಗ ನೋಡುವಾಗ ಊರಲ್ಲಿ ಅನೇಕರ ಹತ್ತಿರ ಹೀಗೆ ಕಳ್ಳನೋಟುಗಳು ಬಂದಿವೆಯಂತೆ ! ಏನವಸ್ಥೆ!"

"ನೋಡಿ ವೆಂಕಪ್ಪಣ್ಣ, ಯಾವಾಗ ನಮ್ಮ ಜನ ಬೀಡಿ ಸೇದಲು

ಪ್ರಾರಂಭಿಸಿದರೋ ಅಂದೇ ನಮ್ಮ ಮನೆಯ ಭಾಗ್ಯ ಹೋದಂತಾಯಿತು. ಮತ್ತೆ ಸಿಗರೇಟು ಬಂದ ಮೇಲೆ ಕೇಳುವುದೇ ಬೇಡ. ಈ ಸಿಗರೇಟು, ಈ ಸಾಬೂನು, ಈ ಸೈಕಲು, ಈ ಸಿನೆಮಾ—ಇವೆಲ್ಲ ನಮ್ಮೂರಿಗೆ ಅಂತಕ್ಕೆ ಬಂದವುಗಳು. ಈಗ ನಮ್ಮ ಹೊಲೆಯರು ಕೂಡಾ ನಡೆದು ಹೋಗೋದಿಲ್ಲ. ಅವರಿಗೆ ಮೋಟಾರೇ ಆಗಬೇಕು. ದಿನಕ್ಕೆ ಆರೇಳು ಮೋಟಾರುಗಳಿದ್ದರೂ ಜನರಿಗೆ ಮೋಟಾರು ಸಿಗುವುದಿಲ್ಲವಂತೆ! ಈ ರೀತಿಯಲ್ಲಿ ಜನರು ಖರ್ಚು ಮಾಡತೊಡಗಿದರೆ ಪ್ರತಿಯೊಂದು ಮನೆಯೂ ಟಂಕಸಾಲೆಯಾಗಬೇಕಾದೀತು."

"ಅದೇ ಅಂದ್ನೆಲ್ಲ ನಾನು? ಯಾವಾಗ ನಮ್ಮ ಮಕ್ಕಳು ಗಂಜೀ ನೀರು ಕುಡಿಯೋದನ್ನ ಬಿಟ್ಟು ಹೊಟೇಲಿಗೆ ಹೋಗಿ ಹೊಲೆಯ ಕೂಡಾ ಕುಡಿಯುವ ಗ್ಲಾಸಿನಲ್ಲೇ ಕಾಫಿ ಕುಡಿಯಲಾರಂಭಿಸಿದರೋ ಅಂದಿನಿಂದಲೇ ನಮ್ಮ ಮನೆ ಮಾರು ನಷ್ಟವಾದಂತಾಗಿದೆ. ಕಳ್ಳು ಕುಡಿದರೆ ಹಾಳಂತೆ, ಶರಾಬು ಕುಡಿದರೆ ಹಾಳಂತೆ. ಅದಕ್ಕಾಗಿ ಅದರ ಹೋಯಿತು. ಈಗ ನಮ್ಮೂರಿನಲ್ಲಿ ಕಳ್ಳ ಸರಾಬಿನದ್ದೇ ದೊಡ್ಡ ಮಾರಾಟವೇ ನಿಂತು ವ್ಯಾಪಾರ ಪ್ರಾರಂಭವಾಗಿದೆ. ಆ ಸುಣ್ಣದ ಹೆಂಡದ ಶರಾಬು ಕುಡಿದವರಿಗೆ ರೋಗ ತಪ್ಪದು. ಅಂತೂ ನಾವೆಲ್ಲ ಇದರಿಂದ ಬೇಗನೇ ಮುಕ್ತರಾಗಿ ಬಿಡುವುದು ಲೇಸು. ಇವನ್ನೆಲ್ಲ ಎಷ್ಟು ದಿನ ನಮ್ಮ ಮನಸ್ಸಿಗೆ ವಿರುದ್ಧವಾಗಿ ನೋಡುತ್ತ ಕುಳಿತುಕೊಳ್ಳಬಹುದು! ನೀವೇ ಹೇಳಿ!"

"ಸರಿಯಪ್ಪಾ ಸರಿ. ನಿಮ್ಮದಾದರೂ ಹಳ್ಳಿ. ನಮ್ಮ ಪೇಟೆಯಲ್ಲಿ ಕೇಳುವುದೇ ಬೇಡ."

"ಹಳ್ಳಿಯೇನು, ಪೇಟೆಯೇನು, ಲಿಂಗಣ್ಣ. ನೋಡಲಿಕ್ಕೆ ಹೋದರೆ ಇಂದು ಹಳ್ಳಿಯಲ್ಲಿ ನಡೆಯುವಷ್ಟು ಅಕ್ರಮ – ಅನ್ಯಾಯ – ಅನಾಚಾರಗಳು ಪೇಟೆಯಲ್ಲಿ ನಡಿಯುವುದಿಲ್ಲ. ನಮ್ಮ ಪಕ್ಕೆಯಲ್ಲಿ ಎಂತೆಂಥ ಖದೀಮರಿದ್ದಾರೆ, ಅಬ್ಬಾ!"

ಹೀಗೆ ಈ ಸಂಭಾಷಣೆ ಬಹಳ ಸ್ವಾರಸ್ಯವಾಗಿ ನಡೆಯುತ್ತಿದ್ದರೂ ಚರ್ಚೆಯ ವಿಷಯವು ಇಬ್ಬರು ವಾಗ್ಮಿಗಳಿಗೂ ಸಮೀಪದಲ್ಲಿ ಅನ್ವಯಿಸದೆ, ಬಹಳ ಸ್ಥೂಲ ಸ್ವಭಾವದ್ದಾಗಿತ್ತು. ಇದನ್ನು ಕೇವಲ ಸಮಯ ಕಳೆಯುವ ಹರಟೆಯೆಂದು ಭಾವಿಸಿದರೂ ಅಷ್ಟೊಂದು ತಪ್ಪಾಗಲಾರದು. ಏಕೆಂದರೆ ಆ ಮಾತಿನ ಸರಣಿಗೆ ನಿರ್ದಿಷ್ಟ ಗುರಿಯಿಲ್ಲ. ಎತ್ತ ಬೇಕಾದರೂ ಅದನ್ನು ಹಿಡಿದೆಳೆಯಬಹುದು. ಅದರೊಡನೆ ಬೇಕಾದಷ್ಟು ಪ್ರಮಾಣದಲ್ಲಿ ಕಲ್ಪನೆಯನ್ನು ಹರಿಯಗೊಡಬಹುದು. ಅದನ್ನು ಯಾರೂ ಪ್ರತಿಭಟಿಸಲಾರರು.

ಆದರೆ ಇಲ್ಲಿ ಈ ಇಬ್ಬರಲ್ಲಿಯೂ ಪರೋಕ್ಷವಾಗಿ ಪರಸ್ಪರ ಸ್ಥಾನಮಾನ ಒಲವು-ನಿಲವುಗಳನ್ನು ತಿಳಿದುಕೊಳ್ಳುವ ಕುತೂಹಲವಿತ್ತು. ಅದಕ್ಕಾಗಿಯೇ ಇಷ್ಟುದ್ದ ತಮ್ಮ ತಮ್ಮ ಊರಿನ ಪರಿಸ್ಥಿತಿಯ ಪೃಥಃಕರಣ–ಪರಿಶೀಲನೆಗಳು ನಡೆದುದು. ಲಿಂಗನಿಗೆ ಇದರಿಂದಾಗಿ, ವೆಂಕಪ್ಪ ಸ್ವಲ್ಪ ಆಸ್ತಿಯಿದ್ದವ, ಅಕ್ಕಿಯ ವ್ಯಾಪಾರ ನಡೆಸುವವ, ತನ್ನಂತೆಯೇ ಶರಾಬಿನ ಪೋಷಕ ಇತ್ಯಾದಿಗಳು ತಿಳಿದವು. ವೆಂಕಪ್ಪನಿಗೂ 'ಲಿಂಗನೇನಾದರೂ ಚಿಲ್ಲರೆ ಆಸಾಮಿಯಲ್ಲ, ದೊಡ್ಡ ಪ್ರಮಾಣದಲ್ಲಿ ಅಕ್ಕಿಯ ವ್ಯಾಪಾರ ನಡೆಸುತ್ತಿರಬೇಕು, ಅಲ್ಲದೆ ಕಳ್ಳ ಶರಾಬನ್ನು ಮಾಡುತ್ತಿರಬಹುದು, ತನಗಿಂತ ಸ್ವಲ್ಪ ಹೆಚ್ಚು ಜಾಣನಾಗಿರಬೇಕು' ಎಂಬಿತ್ಯಾದಿ ವಿಷಯಗಳು ವ್ಯಕ್ತವಾದವು.

ಆದರೆ ಇವರಿಬ್ಬರೂ ಮಾತಾಡುವಾಗ ಉಳಿದವರೆಲ್ಲ ಕುಳಿತುಕೊಂಡು ಇಲ್ಲವೇ ನಿಂತುಕೊಂಡು ಅವರ ನುಡಿಗಳನ್ನು ಆಲಿಸುತ್ತಿದ್ದರು ವಿನಃ ತುಟಿಯೆತ್ತಲಿಲ್ಲ. ಮಾರಪ್ಪನಂತೂ ಬಹಳ ದೂರ ಕುಳಿತಿದ್ದ.

ರಾತ್ರೆ ಲಿಂಗನಲ್ಲಿ ಔತಣದ ಊಟ. ಮೂರು ಬಗೆಯ ಪಲ್ಯಗಳಿದ್ದುವು. ಅಲ್ಲದೆ ಕಡಲೆ ಬೇಳೆಯ ಪಾಯಸ.

ಊಟವಾದ ಬಳಿಕ ಲಿಂಗ ಮತ್ತು ವೆಂಕಪ್ಪರಿಬ್ಬರೂ ಅಂಗಳದ ಹೊರಗೆ ಹೋಗಿ ರಹಸ್ಯದಲ್ಲಿ ಮಾತಾಡತೊಡಗಿದರು. ಹುಡುಗಿ ಇನ್ನೂ

ಮೈನೆರೆಯಲಿಲ್ಲವೆಂದು ಲಿಂಗನೆಂದ. ತನಗೆ ಸುತ್ತಮುತ್ತಲೂ ಆಗ ದವರು ತುಂಬಾ ಮಂದಿ ಇರುವುದರಿಂದ ಮದುವೆ ಮುಂದಿನ ವರ್ಷ ಮಾತ್ರ ಸಾಧ್ಯವಾದೀತೆಂದ. ಅವರು ಮಾತಾಡುತ್ತಿರುವುದು ಮಾರಪ್ಪನಿಗೆ ಸ್ವಲ್ಪ ಸ್ವಲ್ಪ ಕೇಳುತ್ತಿತ್ತು.

ಮತ್ತೆ ಮಲಗುವಾಗ ಲಿಂಗ ಎಲ್ಲರಿಗೂ ಒಂದಿಷ್ಟು ಶರಾಬು ಕೊಟ್ಟ. ವೆಂಕಪ್ಪ ಮೊದಲು ಉಪಚಾರಕ್ಕಾಗಿ ಬೇಡವೆನ್ನುತ್ತ ಮತ್ತೆ ಕುಪ್ಪಿಯನ್ನೇ ಮೇಲಕ್ಕೆತ್ತಿದ. ಮಾರಪ್ಪ ಬೇಡವೇ ಬೇಡವೆಂದ.

ಅವರೆಲ್ಲರೂ ಹೊರಗೆಯೇ ಮಲಗಿದರು. ಮಾರಪ್ಪನಿಗೆ ಬೇಗನೆ ನಿದ್ದೆ ಹತ್ತಲಿಲ್ಲ.

ಅಂತೂ ಇನ್ನು ಒಂದು ವರುಷ, ಎಂದು ಅವನು ನಿಟ್ಟುಸಿರು ಬಿಟ್ಟ. ಹುಡುಗಿಗೆ ಮೈನೆರೆಯುವುದೆಂದರೇನೆಂದು ಅವನಿಗೆ ಸರಿಯಾಗಿ ತಿಳಿಯದು. ಇದೇನೆಲ್ಲ ಕಟ್ಟಳೆಗಳು! ಮದುವೆಯಾಗುವ ಸಂಭವ ಇದ್ದರೆ ಒಮ್ಮೆಲೇ ಆಗಿಹೋಗಬಾರದೆ? ಹುಡುಗಿ ಅಷ್ಟು ದೊಡ್ಡದಾಗಿ ಬೆಳೆದಿದ್ದಾಳೆ! ಅವಳಿಗೇನು, ಮುದುಕಿಯಾದ ಬಳಿಕ ಲಗ್ನ ವಾಗುವುದೆ?

ಅವನ ಕಣ್ಣ ಮುಂದೆ ಆಗ ಅವಳ ರೂಪ ಬಂತು: ದುಂಡಗಾದ ಮುಖವವಳದು. ತಾನು ಮುದ್ದಿಡಬಲ್ಲ ತುಟಿಗಳು. ಕೋಮಲ ವಾದ ಕೆನ್ನೆ. ಅಗಲ ಕಿರಿದಾದ ಚಪ್ಪಟೆ ಮೂಗು. ನುಣುಪಾದ ಚಿಕ್ಕ ಕುತ್ತಿಗೆ. ಕಂಕುಳವರೆಗಿನ ಕೈಯ ಕಪ್ಪು ರವಕೆ. ಅದ ಕ್ಕೊಪ್ಪುವ ಕಪ್ಪುಬಣ್ಣದ ಸೀರೆ. ದೇಹ ಗಡುಸಾಗಿ ಒಪ್ಪುತ್ತದೆ. ಇವಳನ್ನು ಧಾರೆ ಎರೆಯಲು ಇನ್ನು ಯಾವ ಸುದಿನ ಬರಬೇಕೋ! ಎಂದು ಮನಸಿನಲ್ಲೇ ಅವನು ಹಂಬಲಿಸಿದ.

ಅಂದು ರಾತ್ರೆ ಅವನಿಗೆ ಹೆಚ್ಚು ಕಡಮೆ ನಿದ್ದೆಯೇ ಬರಲಿಲ್ಲ. ಕಣ್ಣು ಮುಚ್ಚಿದೊಡನೆ ಕನಸುಗಳು ಬೀಳುತ್ತಿದ್ದುವು. ಕನಸಿನಲ್ಲಿ ಎಷ್ಟೋ ಜನರನ್ನು ಕಂಡ. ಒಂದೆರಡು ಸಲ ಹೊನ್ನಮ್ಮನೂ ಕಾಣಿಸಿ

ಕೊಂಡಳು.

'ಈ ಹಾಳು ಕನಸುಗಳನ್ನೊಮ್ಮೆ ನನ್ನ ಅಂಕೆಯಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತಿದ್ದರೆ ನನಗೆ ಬೇಕಾದವರನ್ನು ಮಾತ್ರ ಕಾಣುತ್ತಿದ್ದೆ' ಎನ್ನುತ್ತ ಅವನು ಮುಖಕ್ಕೆ ಮುಸುಕನ್ನೆಳೆದುಕೊಂಡು ಹಾಸಿಗೆಯಲ್ಲಿ ಹೊರಳಾಡುತ್ತಿದ್ದ.

* * *

"ಒಹ್ ಮದುಮಗನೇ, ಮರಳಿಬಿಟ್ಟೆಯಾ ? ಮದುವೆ ಈ ವರ್ಷ ಆಗೋದಿಲ್ಲಲ್ಲ !" ಹೊನ್ನಮ್ಮ ಮಾರಪ್ಪನನ್ನು ಸ್ವಾಗತಿಸಿದಳು.

"ನಿನಗೆ ಹೇಗೆ ಗೊತ್ತು? ಅಬ್ಬಾ ನಿಮಗೆ ಹೆಂಗಸರಿಗೆ ಸುದ್ದಿಗಳು ಹೇಗೆ ಬರುವುವೋ !"

"ನಾನು ಕನಸಿನಲ್ಲಿ ಕಂಡೆ."

"ಕನಸು ! ಹಾಗೆ ಕನಸಿನಲ್ಲಿ ಕಂಡದ್ದೆಲ್ಲ ಸತ್ಯವಾದರೆ ಮತ್ತೆ ನಮಗೆ ಜೋಯಿಸರ ಅವಶ್ಯಕತೆಯಿಲ್ಲ. ನಿನ್ನನ್ನೇ ನಾನು ಎಷ್ಟು ಸಲ ಕನಸಿನಲ್ಲಿ ಕಂಡಿದ್ದೆ, ನಿನಗೆ ಗೊತ್ತೆ ?"

ಹೊನ್ನಮ್ಮನಿಗೆ ಇದನ್ನು ಕೇಳಿ ಸ್ವಲ್ಪ ನಾಚಿಕೆಯಾಯಿತು. ಅದರೊಟ್ಟಿಗೆ ತುಸು ಸಂತೋಷವೂ ಆಯಿತು.

"ನನ್ನನ್ನೇಕೆ ನೀನು ಕನಸಿನಲ್ಲಿ ಕಾಣುತ್ತೀ ?" ಅವಳು ಕೆಣಕುತ್ತ ಕೇಳಿದಳು. "ನಾನೇನಾದರೂ ನಿನ್ನನ್ನು ಮದುವೆಯಾಗುವವಳಲ್ಲ ! ಅದರ ಮೇಲೆ ನಾನು ಮುದುಕಿ !"

"ಕನಸಿನಲ್ಲಿ ಕಾಣುವುದಕ್ಕೆ ಮದುವೆಯಾಗುವವಳು – ಮದುವೆಯಾಗದವಳು – ಮದುವೆಯಾದವಳು ಎಂದು ಭೇದವಿರುವುದೆ? ಹಾಗಾದರೆ ನೀನೇಕೆ ನನ್ನನ್ನು ಕಂಡೆ ?"

ಹೊನ್ನಮ್ಮ ಮಾತಾಡಲಿಲ್ಲ.

"ಇಗೋ, ನಿನ್ನ ಹಣ. ಒಳ್ಳೆಯ ಕೈ ನಿನ್ನದು. ಒಂದು ಪೈಯೂ ಖರ್ಚಾಗಲಿಲ್ಲ."

"ಅದರ ಬಡ್ಡಿ ?"

"ಬಡ್ಡಿ ಮತ್ತೆ ಕೊಡುವ."

"ಅಲ್ಲ, ನಿಜವಾಗಿಯೂ ಮದುವೆಯ ಪ್ರಸ್ತಾಪ ಏನಾಯಿತು ? ಈ ವರ್ಷವೇ ಆಗುವುದೆ ?"

"ಈ ವರ್ಷ ಆಗೋದಿಲ್ಲಕ್ಕ. ಹುಡುಗಿಗೇನೋ ವೈ ಸರಿ ಇಲ್ಲವಂತೆ."

"ಥೂ. ಹೆಬಗ !" ಹೊನ್ನಮ್ಮ ನಕ್ಕಳು. "ಹುಡುಗಿಗೆ ವೈ ಸರಿಯಿಲ್ಲವೋ, ಅಲ್ಲ ವೈನೆರೆದಿಲ್ಲವೋ ?"

"ಹಾಂ. ವೈನೆರೆದಿಲ್ಲವಂತೆ"

"ನಿನಗೆ ಅಷ್ಟೇನೆ ಗೊತ್ತು? ಹ್ಹಹ್ಹಹ್ಹ!"

"ಆಯಿತು ಮತ್ತೆ ಬರುತ್ತೇನೆ. ತನಿಯಣ್ಣ ಕೆಲಸಕ್ಕೆ ಹೋಗಿದ್ದಾನೆಯೆ ?"

"ಹೌದು....ಹುಡುಗಿಯನ್ನು ನೀನು ನೋಡಿದಿಯಾ ?"

"ನೋಡದೆ ಏನು, ನನಗೆ ಕಣ್ಣಿಲ್ಲವೆ ?"

"ನಾಚಿಕೆಯಾಗುವುದಿಲ್ಲವೆ ನಿನಗೆ ? ಆಗಲಿ, ಹುಡುಗಿ ಚಂದ ಇದ್ದಾಳೋ ?"

"ಅವಳಿಗೆ ಎರಡು ಕಣ್ಣು, ಎರಡು ಕಿವಿಗಳು, ಮೂಗು, ಬಾಯಿ, ಕೈಗಳು, ಕಾಲುಗಳು, ದೇಹ, ತಲೆಯಲ್ಲಿ ಕೂದಲುಗಳು, ಬಾಯಲ್ಲಿ ಹಲ್ಲುಗಳು ಎಲ್ಲಾ ಇವೆ."

"ಇಷ್ಟನ್ನೂ ನೀನು ನೋಡಿಬಿಟ್ಟೆಯಾ, ಮೊದಲ ಬಾರಿಯೇ?"

"ಅದೇ ಅಂದೆನಲ್ಲ, ನನಗೆ ಕಣ್ಣಿಲ್ಲವೆ ?"

"ಕಣ್ಣುಂಟೆಂದು ಹೀಗೆಲ್ಲ ನೋಡಿದರೆ ಕಷ್ಟ. ಹುಡುಗಿ ಹೇಗೆ ? ಕಪ್ಪಗಿರುವಳೆ, ಬಿಳಿಯಿರುವಳೆ ?"

"ಸುಮಾರು ನಿನ್ನಷ್ಟು ಬಿಳಿಯಿದ್ದಾಳೆ. ನಿನಗಿಂತ ಸ್ವಲ್ಪ ಕಪ್ಪೆಂದೇ ಹೇಳಬಹುದು."

"ಅಷ್ಟು ಸೂಕ್ಷ್ಮವಾಗಿಯೂ ನೋಡಿದೆ! ಹ್ಹ ಹ್ಹ ಹ್ಹ! ನೀನೇನೂ ಸಾಧಾರಣದವನಲ್ಲ! ನೋಡಲಿಕ್ಕೆ ಚಂದವಾಗಿದ್ದಾಳೆಯೋ?"

"ಬಹಳ ಚಂದ ಇದ್ದಾಳೆ. ನೀನು ಹೆಂಗಸಾಗಿದ್ದರೂ, ಅವಳನ್ನು ಕಂಡರೆ ನಿನ್ನ ಬಾಯಲ್ಲೂ ನೀರೂರಬಹುದು."

"ಹಾಗಾದರೆ ಈ ವರ್ಷ ನಮಗೆ ನಿನ್ನ ಲೆಕ್ಕದಲ್ಲಿ ಪಾಯಸ ಹೊಡೆಯುವ ಸುಯೋಗ ಇಲ್ಲದಾಯಿತು ?"

"ಸರಿ. ಪಾಯಸಕ್ಕೆ ನನ್ನ ಲೆಕ್ಕದ ಪಾಯಸ, ನಿನ್ನ ಲೆಕ್ಕದ ಪಾಯಸವೆಂದು ಭೇದವಿದೆಯೆ? ನೀನೂ ನನಗೆ ಪಾಯಸಮಾಡಿ ಹಾಕಬಹುದು. ಆ ದಿನ ಬಾವಿಯಿಂದ ಕೊಡ ತೆಗೆದುದಕ್ಕೆ ಪಾಯಸ ಕೊಡುವೆನೆಂದಿದ್ದೀಯಲ್ಲ, ಸುಳ್ಳುಗಾರಳೆ!"

"ಹ್ಹೊ! ಕೊಡುವ. ಅದಕ್ಕೇನಾಗಬೇಕು? ಮುಂದಿನ ಮಾವನ ಮನೆಯಲ್ಲಿ ನೀನು ನಿನ್ನೆ ಪಾಯಸ ಉಣಲಿಲ್ಲವೆ?"

"ಮಾವನ ಮನೆಯ ಪಾಯಸ ನಿನ್ನ ಲೆಕ್ಕದ್ದೇ?"

"ಅಲ್ಲ, ಹಾಗೆ ಪಾಯಸವನ್ನು ಪ್ರತಿದಿನ ತಿಂದರೆ ಅಜೀರ್ಣವಾದೀತು, ಹೊಟ್ಟೆಯಲ್ಲಿ ಹುಳ ಹೆಚ್ಚೀತು........ಅದೂ ಹೊಸದಾಗಿ ಮದುವೆಯಾಗುವವರು, ಹೊಟ್ಟೆಯನ್ನು ಜಾಗ್ರತೆಯಲ್ಲಿಟ್ಟುಕೊಳ್ಳಬೇಕು."

"ಸಾಕು, ಸಾಕು. ನಾನು ಮನೆಗೆ ಹೋಗುತ್ತೇನೆ. ನೀನು ಮಾತಾಡುವುದಕ್ಕೆ ತುದಿಮೊದಲಿಲ್ಲ. ಮನೆಯಲ್ಲಿ ಗಾಣಹಾಕಲಿಕ್ಕಾಗಿ ಎಷ್ಟು ಜನ ಕಾಯುತ್ತಿದ್ದಾರೋ ಏನೋ! ಮೊನ್ನೆಯೇ ಪೂವಣಿಯವರು ತೆಂಗಿನಕಾಯಿ ತಂದುಹಾಕಿ ಇವತ್ತು ಎಣ್ಣೆ ತೆಗೆದುಕೊಡಬೇಕೆಂದಿದ್ದರು. ತಂತ್ರಿಯವರಿಗೂ ಎಣ್ಣೆ ಆಗಬೇಕಂತೆ. ಅದರ ಮಧ್ಯೆ ಭಾವ ಬಂದಿರಲೂ ಸಾಕು."

"ಆಯಿತಪ್ಪಾ! ನಿನಗೆ ಕೆಲಸವೆಂದರೆ ಕೆಲಸ! ಅದಕ್ಕಾಗಿಯೇ ಹೀಗೆ ತಿರುಗಾಡುತ್ತಿದ್ದೀಯ!" ಎಂದಳು ಹೊನ್ನಮ್ಮ.

ಸೂರಪ್ಪ ಶಾಲನ್ನು ತಲೆಗೆ ಸುತ್ತಿಕೊಂಡು ಮತ್ತೆ ಹೊರಟ. ಹೊನ್ನಮ್ಮ ಅವನು ಕೊಟ್ಟ ಹಣವನ್ನು ಕೊಂಡುಹೋಗಿ ಒಳಗಿಟ್ಟಳು. ಅವಳಿಗೆ ನಿಜವಾಗಿಯೂ ಅವನ ಮೇಲೆ ಹಿಡಿಸಲಾರದಷ್ಟು ಅಸೂಯೆಯಾಗಿತ್ತು. ಈಗಿನಮಟ್ಟಿಗೆ ಯಾವ ಹುಡುಗಿಯನ್ನು ಬೇಕಾದರೂ ಅವನು ಮದುವೆಯಾಗಬಹುದು !

ಅದರೆಡೆಯಲ್ಲೂ ಅವಳಿಗೆ ಬಿದ್ದ ಕನಸಿನ ಯಥಾರ್ಥತೆ ಅವಳನ್ನು ಬೆರಗುಗೊಳಿಸುತ್ತಿತ್ತು. ಎಂಥ ಸತ್ಯ ಕನಸದು !

ಅಂತೂ ಸೂರಪ್ಪ ಇನ್ನೊಂದು ವರುಷ ಮದುವೆಯಾಗಲಾರನೆಂಬುದು ಅವಳ ಪಾಲಿಗೆ ಒಂದು ರೀತಿಯ ಇಚ್ಛಾಭಾವನೆಯನ್ನು ನೆರವೇರಿಸಿದಂತೆಯೇ ತೋರುತ್ತಿತ್ತು.

೬

ತನಿಯನಿಗೆ ಒಂದು ದಿನ ವಿಶೇಷ ನೆಗಡಿಯಾದ್ದರಿಂದ ಅವನು ಕೆಲಸಕ್ಕೆ ಹೋಗಲಿಲ್ಲ. ಸಂಬಳವಂತೂ ಹಿಂದಿನ ದಿನವೇ ಸಿಕ್ಕಿತ್ತು. ಮತ್ತೆ ಅವನಿಗೆ ಸ್ವಲ್ಪ ಕೆಲಸವೂ ಇತ್ತು.

ಬೆಳಗ್ಗೆ ಎದ್ದವನೇ ಅವನು ಉಳಲು ಹೋದ. ಸುಗ್ಗಿಯ ಬೆಳೆಯನ್ನು ಕೊಯ್ಯಲು ಇನ್ನೂ ಹತ್ತು ಹದಿನೈದು ದಿನಗಳು ಬೇಕಾಗಬಹುದಿತ್ತು. ಭತ್ತದ ತೆನೆಯಲ್ಲಿ ಆಗಲೇ ಹಾಲಾಗಿತ್ತು. ಪೈರನ್ನು ನೋಡಿ ಅವನಿಗೆ ಬಹಳ ಸಂತೋಷವಾಯಿತು. ಮೊದಲನೇ ಬೆಳೆಯಲ್ಲಿ ಅವನು ಅರ್ಧದಷ್ಟು ಕೂಡಾ ಗೇಣಿ ಕೊಟ್ಟಿರಲಿಲ್ಲ. ಧನಿಯೇನೋ ಬಹಳ ಗದರಿಸಿದ್ದರು. ಅವರಿಗೆ ಸುಗ್ಗಿಯಲ್ಲಿ ಕೊಡುತ್ತೇನೆಂದಿದ್ದ. ಅಲ್ಲದೆ ಹಿಂದಿನ ಬಾಕಿಯೂ ಸ್ವಲ್ಪವಿತ್ತು. ಈ ಬೆಳೆಯ ಭತ್ತದ ಸಸಿಗಳು ಪುಷ್ಟವಾಗಿದ್ದುವು. ತೆನೆಗಳಲ್ಲಿ ಜಳ್ಳು ಇಲ್ಲ. ಮುಡಿಗದ್ದೆಗೆ ಹೇಗಾದರೂ ಹತ್ತು ಹದಿನೈದು ಮುಡಿ ಭತ್ತ ಸಿಗಬಹುದು. ಅಂತೂ ನಾಲ್ಕು ಮುಡಿ ಗದ್ದೆಯಲ್ಲಿ ಕಡಿಮೆಯೆಂದರೆ ಐವತ್ತು ಮುಡಿ ಅಕ್ಕಿ ಸಿಗಬಹುದು. ಅದರಿಂದ ಹದಿನೇಳು ಮುಡಿಯನ್ನು ಧನಿಗೆ ಕೊಟ್ಟರಾಯಿತು. ಸಾಲದ ಪೈಕಿಯಲ್ಲಿಯೂ ಸ್ವಲ್ಪ ಸಂದಾಯ ಮಾಡಬಹುದು. ಮತ್ತೆ ಮೂರನೇ ಬೆಳೆ ಇದೆಯಲ್ಲ ?

ಅದರಿಂದ ಸ್ವಲ್ಪ ಕಷ್ಟ ಪಟ್ಟರೆ ಒಂದು ಹದಿನೈದು ಮುಡಿಯಾದರೂ ಅಕ್ಕಿ ಸಿಗಬಹುದು. ಮಳೆಗಾಲದ ಸಾಗುವಳಿಗೆ ಮತ್ತು ಊಟದ ಖರ್ಚಿಗೆ ಅದು ಸಾಕು. ಉಳಿದ ಇಪ್ಪತ್ತೈದು ಮುಡಿಗಳನ್ನು ಮುಡಿಯೊಂದಕ್ಕೆ ಕಡಿಮೆಯೆಂದರೆ ನಲ್ವತ್ತು ರೂಪಾಯಿಯಂತೆ ಮಳೆಗಾಲದಲ್ಲಿ ಮಾರಬೇಕೆಂದು ಅವನು ಯೋಚಿಸಿದ.

ಹಾಗೆಯೇ ಕಾಯಿಪಲ್ಯ ಬೆಳೆಸುವ ತೋಟವನ್ನು ಮಾಡಲಿಕ್ಕಾಗಿ ಸ್ವಲ್ಪ ಮುಳ್ಳನ್ನು ರಾಶಿ ಹಾಕಿದ. ಕೆಲವು ಮರದ ಸಸಿಗಳನ್ನೂ ಕಡಿದು ತಂದ. ಹಾರೆ ತೆಗೆದುಕೊಂಡು ಬಂದು ಸೌತೆಕಾಯಿ, ಬದನೆಕಾಯಿ, ಮೆಣಸು ಇತ್ಯಾದಿಗಳನ್ನು ಬೀಜ ಹಾಕಲಿಕ್ಕೆ ಹೊಲವನ್ನು ಅಗೆದು, ಅದಕ್ಕೆ ಗೊಬ್ಬರ ಮತ್ತು ಸುಟ್ಟ ಮಣ್ಣನ್ನು ಹಾಕಿದ. ಇಷ್ಟು ಕೆಲಸ ಮಾಡಿಯಾಗುವಾಗ ಅವನಿಗೆ ವಿಶೇಷ ಹಸಿವಾಗತೊಡಗಿತು. ಹಾಗೆಯೇ ಮನೆಗೆ ಹೋದ.

ಅವನು ಮನೆಗೆ ಹೋಗಿ ಮುಖ ತೊಳೆದು ಊಟಕ್ಕೆ ಕುಳಿತು ಕೊಳ್ಳುವುದಕ್ಕೂ ಮಾರಪ್ಪ ಬರುವುದಕ್ಕೂ ಸರಿಯಾಯಿತು. ಮಾರಪ್ಪ ಅಲ್ಲೇ ಜಗಲಿಯಲ್ಲಿ ಮಾತಾಡುತ್ತ ಕುಳಿತುಕೊಂಡ.

"ಏನಪ್ಪ! ಅವಳೊಬ್ಬ ನಿನಗೆ ಬಡಿಸುವುದಕ್ಕಾಗಬೇಕು. ನೀನು ಉಣ್ಣಲಿಕ್ಕಾಗಬೇಕು. ಬಂಡಿ ಭೀಮನೇ ಸರಿ. ಇಷ್ಟಾದರೆ ಎಷ್ಟು ಹೊತ್ತಿದು!" ಎಂದನವ.

"ನಿನಗೇನು?" ಹೊನ್ನಮ್ಮ ಕೇಳಿದಳು. "ನೀನು ಬೇಕಾದಷ್ಟು ಉಂಡು ಬಂದಿದ್ದೀ. ಬಾಕಿಯವರು ಅವರ ಅನ್ನವನ್ನು ಊಟ ಮಾಡುವುದು ಕೂಡಾ ನಿನಗೆ ಹಿಡಿಸೋದಿಲ್ಲ."

"ಹಾಂ, ಹಾಗನ್ನು" ಎಂದು ತನಿಯನೂ ನಗುತ್ತ ದನಿ ಗೂಡಿಸಿದ. "ಬಹುಶಃ ನಿನಗೆ ಮದುವೆಯ ಯೋಚನೆಯಲ್ಲಿ ಅನ್ನವೂ ಸೇರುವುದಿಲ್ಲವೋ ಏನೋ!"

"ನನ್ನ ವಯಸ್ಸಿನಲ್ಲಿ ನಿನಗೆ ಹಾಗೆಯೇ ಆಗುತ್ತಿತ್ತೋ

ಏನೋ! ನಿನ್ನ ಹಾಗೆಯೇ ಇತರರೂ ಎಂದು ಭಾವಿಸಿದ್ದೀಯಾ? ನಾನು ಚೆನ್ನಾಗಿ ಊಟ ಮಾಡುತ್ತೇನೆ" ಮಾರಪ್ಪ ಪ್ರತಿಭಟಿಸಿದ.

ತನಿಯ ಊಟ ಮುಗಿಸಿ ಕೈತೊಳೆದುಕೊಂಡು ಬಂದು ವೀಳ್ಯ ಜಗಿಯಲಿಕ್ಕೆ ಕುಳಿತ. ಮಾರಪ್ಪ ಒಂದು ಬೀಡಿ ತೆಗೆದು ಹೊನ್ನಮ್ಮ ನೊಡನೆ ಬೆಂಕಿ ಕೇಳಿದ.

"ಥೂ ನಿನ್ನ ಹಣೆ ಬರಹ!" ತನಿಯ ನಕ್ಕ. "ಬೆಂಕಿ ಕಡ್ಡಿ ಪಡಕೊಳ್ಳಲಿಕ್ಕೆ ಸಾಧ್ಯವಿಲ್ಲದ ಘಟಿಂಗ ಬೀಡಿ ಸೇದುವುದು! ನಿನ್ನಪ್ಪ ಯಾರ್‍ಯಾರ ತಲೆ ಒಡೆದು ಕೂಡಿಸಿಡುವುದು ನಿನಗಾಗಿಯಲ್ಲವೆ? ನೀನೂ ಹೀಗೆ ಕೂಡಿಸಿಟ್ಟರೆ ಮತ್ತೆ ನಿಮ್ಮ ಐಶ್ವರ್ಯವನ್ನು ಎಲ್ಲಿಡುವುದಪ್ಪ!"

ಹೊನ್ನಮ್ಮ ಅಷ್ಟರಲ್ಲಿ, ಒಂದು ಬೆಂಕಿಯ ಕೊಳ್ಳಿಯನ್ನು ಒಳಗಿಂದ ತಂದು ಮಾರಪ್ಪನಿಗಿತ್ತಳು.

"ಹ್ಞ! ಎಂಥ ಗೃಹಸ್ಥ ನೀನು! ಒಬ್ಬನೇ ಬೀಡಿ ಸೇದುವುದೆ? ನನಗೂ ಒಂದು ಕೊಡು," ತನಿಯ ಮುಂದುವರಿಸಿದ.

"ಅಲ್ಲ ತನಿಯಣ್ಣ, ಬೀಡಿಯ ಅಭ್ಯಾಸವಿಲ್ಲದವರಿಗೆ ಬೀಡಿ ಕೊಟ್ಟರೆ ಪಾಪ ಬರುವುದಂತೆ. ನೀನು ಬೀಡಿ ಸೇದದವ."

"ಅದೆಲ್ಲ ನಿನ್ನ ಕುಯುಕ್ತಿ ಮಾತುಗಳನ್ನು ಬಿಡು. ಬೀಡಿ ಕೊಡುವೆಯಾದರೆ ಗಂಡು ಮಗನಂತೆ ಕೊಡು ನೋಡುವಾ."

"ನಾನೇನು ಗಂಡಲ್ಲದೆ ಹೆಣ್ಣೆ?"

"ಗಂಡಾಗುತ್ತಿದ್ದರೆ ಎಲ್ಲರಿಗೂ ಯಾವ ವಸ್ತುವನ್ನಾದರೂ ಕೊಟ್ಟು ಮತ್ತೆ ನೀನೂ ಸೇವಿಸುತ್ತಿದ್ದೆ. ಈಗ ನೀನು ಮಾಡುವುದು ಹೆಂಗಸರಂತೆ"

"ಒಹ್ ಹೆಂಗಸರ ಸ್ವಭಾವ ನಿನಗೆ ಚೆನ್ನಾಗಿ ಗೊತ್ತಿದೆಯಪ್ಪ!"

ಹೊನ್ನಮ್ಮ ಆಗ ಜಗಲಿಯಲ್ಲಿ ಕಸಗುಡಿಸತೊಡಗಿದಳು. ಇಬ್ಬರೂ ಎದ್ದು ಆಚೆ ಹೋದರು.

"ತನಿಯಣ್ಣ! ಈಗ ನೀನು ನನಗೆ ಕಾಫಿ ಕೊಡಬೇಕು, ಹೊಟೇಲಿಗೆ ಹೋಗೋಣ ಬಾ."

"ಹೊಟೇಲಿಗೆ ಬರುವುದಕ್ಕೆ ಅಡ್ಡಿಯಿಲ್ಲ. ಆದರೆ ಹಣ ನೀನು ಕೊಡಬೇಕು."

"ಅದು ಹೇಗಾದರೂ ಆಗುತ್ತದೆ. ಕಾಫಿ ಕುಡಿದ ಬಳಿಕ."

ಹೀಗೆನ್ನುತ್ತ ಮಾರಪ್ಪ ಅಂಗಳಕ್ಕಿಳಿದ. ತನಿಯನೂ ಒಂದು ವಸ್ತ್ರವನ್ನು ಮೈಗೆ ಸುತ್ತಿಕೊಂಡು ಅವನನ್ನು ಹಿಂಬಾಲಿಸಿದ.

ಇಬ್ಬರೂ ಮೆಲ್ಲನೆ ಶೀನನಾಯ್ಕರ ಹೊಟೇಲಿಗೆ ಮಾತಾಡುತ್ತ ಹೋದರು. ಶೀನನಾಯ್ಕರು ಒಂದು ಬೆಂಚಿನ ಮೇಲೆ ಕುಳಿತು ಕೊಂಡು ಅವರ ಹಲವು ಗಿರಾಕಿಗಳು ಇಸ್ಪೀಟು ಆಡುವುದನ್ನು ನೋಡುತ್ತಿದ್ದರು.

"ಓ ನಿಮಗೆ ಇನ್ನೊಂದು ಜನ ಬೇಕೆನ್ನುತ್ತಿದ್ದಿರಲ್ಲ?" ನಾಯ್ಕರು ತನಿಯನನ್ನು ಕಂಡು ಕೇಳಿದರು. "ಇಕೊಳ್ಳಿ, ತನಿಯ ಬಂದಿದ್ದಾನೆ. ಏನೋ ತನಿಯ, ಇವತ್ತು ಕೆಲಸಕ್ಕೆ ಹೋಗಿಲ್ಲವೆ? ಈ ಹುಡುಗ ನಿನಗೆಲ್ಲಿ ಸಿಕ್ಕಿದ?"

"ಹುಡುಗರಿಗೇನು ಕಡಮೆ ನಾಯ್ಕರೆ? ಒಂದು ಗುಟುಕು ಕಾಫಿಯ ಆಸೆ ತೋರಿಸಿದರೆ ಸಾಕು, ಊರೂರು ಬರುವ ಹುಡುಗರಿ ಗೇನು ಕೊರತೆ ನಮ್ಮೂರಲ್ಲಿ?" ಎಂದ ತನಿಯ.

"ನಿಮಗೇನು, ಕಾಫಿಯೋ, ಚಹವೋ?" ನಾಯ್ಕರು ಉಪಚರಿಸಿದರು.

"ಚಹ" ತನಿಯನೆಂದ.

"ನನಗೆ ಕಾಫಿ" ಎಂದ ಮಾರಪ್ಪ.

"ಅಲ್ಲಿಯೂ ನಿನ್ನ ದಾರಿ ಬೇರೆಯೋ ಅಲ್ಲವೆ?" ಎಂದ ತನಿಯ ನಗುತ್ತ.

"ನಿಮಗೆ ತಿನ್ನಲಿಕ್ಕೆ ಏನು ಬೇಕು? ಒಳ್ಳೆಯ ಗೆಣಸಿನ

ಸೋಟಿ ಇದೆ. ಈಗ ತಾನೇ ಮಾಡಿದ ಅವಲಕ್ಕಿ ಉಪ್ಪಿಟ್ಟು ಇದೆ. ಫಸ್ಟ್ ಕ್ಲಾಸ್ ಬಾಳೆಯ ಹಣ್ಣಿದೆ."

ತನಿಯ ಮಾರಪ್ಪನ ಮುಖ ನೋಡುತ್ತ ತನಗೇನೂ ಬೇಡ ವೆಂದ. ಮಾರಪ್ಪನೂ ಮಾತಾಡಲಿಲ್ಲ.

ಇಸ್ಪೀಟು ಆಡುವವರು ಬಹಳ ಮೌನವಾಗಿದ್ದರು. ಇಸ್ಪೀಟಿನ ಎಲೆಗಳನ್ನು ಕಲೆಸುವ ಶಬ್ದ ಮಾತ್ರ ಕೇಳುತ್ತಿತ್ತು ವಿನಃ ಅವರ ಬಾಯಿಯಿಂದ ಒಂದು ಮಾತು ಹೊರಡುತ್ತಿದ್ದಿಲ್ಲ.

ನಾಯ್ಕರ ಹೊಟೇಲೆಂದರೆ ಎರಡು ತಲೆಮಾರಿನಿಂದ ನಡೆದು ಬಂದುದು. ಅವರ ಅಜ್ಜ ರಂಗನಾಯ್ಕರು ಎರಡು ಸಲ ದಿವಾಳಿ ತೆಗೆದವರು. ಅವರ ತಂದೆ ಕೃಷ್ಣನಾಯ್ಕರು ಅಕ್ಕಿ ವ್ಯಾಪಾರ, ಬೆಲ್ಲದ ವ್ಯಾಪಾರ, ಮೆಣಸಿನ ವ್ಯಾಪಾರ, ಜೀನಸಿನ ವ್ಯಾಪಾರ—ಇವನ್ನೆಲ್ಲ ಮಾಡಿ ಸಾಯುವುದರೊಳಗೆ ಮೂರು ಸಲ ದಿವಾಳಿ ತೆಗೆದಿದ್ದರು. ಶೀನನಾಯ್ಕರ ಪಾಲಿಗೆ ಸಿಕ್ಕಿದುದು ಈ ಹೊಟೇಲು ಮಾತ್ರ. ಅವರೂ ಕೆಲವು ಸಮಯ ಬೇರೆ ವ್ಯಾಪಾರಗಳನ್ನು ನಡೆಸಿದರು. ಆದರೆ ಅವರು ಒಂದು ಸಲ ಮಾತ್ರ ದಿವಾಳಿ ಕೊಟ್ಟಿದ್ದರು. ಅದೂ ಕಾಸರಕಿನ ಬೀಜಕ್ಕೆ ಮತ್ತು ಗೇರು ಬೀಜಕ್ಕೆ ಒಮ್ಮೆಲೇ ಕ್ರಯ ಇಳಿದುದರಿಂದಾಗಿ. ಅದರ ಪರಿಣಾಮವಾಗಿ ಅವರ ಸಾಲಗಾರರಿಗೆ ಕೇವಲ ಎಂಟು ಸಾವಿರ ರೂಪಾಯಿಗಳು ನಷ್ಟವಾದುವು. ಅಷ್ಟೆ. ಈಗ ಹೊಟೇಲು ಅವರ ಹೆಂಡತಿಯ ಹೆಸರಲ್ಲಿ ನಡೆಯುವುದು. ಆದರೆ ನಡೆಸುವವರು ಅವರೇ. ಸಂಸಾರವೇನೋ ಒಂದೆಡೆಯಿಂದ ಹೆಚ್ಚುತ್ತಲೇ ಬರುತ್ತಿತ್ತು. ಇನ್ನೊಂದೆಡೆಯಿಂದ ನಾಯ್ಕರ ಹೆಣ್ಣು ಮಕ್ಕಳು ಮದುವೆಗೆ ಸಿದ್ಧರಾಗುತ್ತಿದ್ದರು. ಇವೆಲ್ಲಕ್ಕೂ ನಾಯ್ಕ ರೊಡನೆ ಇದ್ದ ಒಂದೇ ಒಂದು ಪರಿಹಾರ ಸಾಧನವೆಂದರೆ ಅವರ ನಾಲಿಗೆ ಮಾತ್ರ: ಅವರು ತಮ್ಮ ನಾಲಿಗೆಯಿಂದಲೇ ಜೀವಿಸು ತ್ತಿರುವರು ಎಂದು ಊರಿನವರು ಕೂಡಾ ಹೇಳಿಕೊಳ್ಳುವುದಿತ್ತು.

"ಏನೋ ತನಿಯ", ನಾಯ್ಕರೆಂದರು. "ನಿಮ್ಮ ಮೇಸ್ತ್ರಿ ದಾಸಪ್ಪ ಬಹಳ ಮೋಸ ಮಾಡ್ತಾನಂತಲ್ಲ! ಸಾಹುಕಾರರು ಅವನನ್ನು ತೆಗೆದುಹಾಕುವುದರಲ್ಲಿದ್ದಾರಂತೆ."

"ನಿಮಗೆ ಸಿಕ್ಕದ ಸುದ್ದಿಯಿಲ್ಲಲ್ಲ ನಾಯ್ಕರೆ!" ಎಂದ ತನಿಯ.

ನಾಯ್ಕರು ಚಹ ಮಾಡತೊಡಗಿದರು. ತನಿಯ ಸ್ವಲ್ಪ ಒಳ್ಳೇದು ಮಾಡಿ ಎಂದಿದ್ದ. ಎಲ್ಲಾ ಗಿರಾಕಿಗಳೂ ಆ ಪೀಠಿಕೆಯನ್ನು ಹಾಕುವವರೇ. ಎಲ್ಲರಿಗೂ ನಾಯ್ಕರದೊಂದೇ ಉತ್ತರ: ಫಸ್ಟ್ ಕ್ಲಾಸ್ !

ಅವರ ನೀರು ಕುದಿಯುವ ಪಾತ್ರೆಗೆ ರಾತ್ರಿಹಗಲೂ ಬಿಡುವಿಲ್ಲ. ಒಲೆಯಲ್ಲಿ ಸದಾ ಬೆಂಕಿ ಉರಿಯುತ್ತಲೇ ಇದೆ. ಪಾತ್ರೆಗೆ ಮುಗಿದಂತೆಯೇ ನೀರು ಸೇರಿಸುತ್ತಲೇ ಇರುತ್ತಾರೆ. ಯಾವಾಗಲೋ ಅದರಲ್ಲಿ ಹಾಕಿದ ಅರ್ಧಾಣೆಯ ವಿಕ್ಟೋರಿಯಾ ರ್‍ಆಣಿಯ ತಾಂಬ್ರದ ನಾಣ್ಯ ನೀರು ಕುದಿಯುತ್ತಿರುವ ಸಂಜ್ಞೆಯನ್ನು ಸೂಚಿಸಲು ಠಣ್ ಠಣ್ ಎಂದು ಶಬ್ದ ಮಾಡುತ್ತಲೇ ಇದೆ. ಸುತ್ತಲಿದ್ದ ನೊಣಗಳನ್ನೋಡಿಸಿ ನಾಯ್ಕರು ಅದರಿಂದ ಒಂದು ಲೋಟ ಬಿಸಿ ನೀರನ್ನು ತೆಗೆದು ಚಹದ ಹುಡಿಯ ಮೇಲೆ ಸುರಿದರು. ಅದು ಗಾಳಿಸುವ ವಸ್ತ್ರದಲ್ಲಿ ಮೆಲ್ಲನೆ ಪಾತ್ರೆಗೆ ಸುರಿಯಿತು. ಗಾಳಿಸುವ ವಸ್ತ್ರವನ್ನು ಹಿಂಡಿ, ಪಾತ್ರೆಗೆ ಸ್ವಲ್ಪ ಹಾಲು ಮತ್ತು ಸಕ್ಕರೆ ಸೇರಿಸಿ ಒಂದು ಗ್ಲಾಸಿಗೆ ಹೊಯ್ದು ನಾಲ್ಕು ಸಲ ಅತ್ತಿತ್ತ ಧಾರೆ ಹಿಡಿದರು. ಗ್ಲಾಸಿನಲ್ಲಿ ಚಹದ ಮೇಲೆ ನೊರೆ ಗುಜು ಗುಜು ಎಂದು ಬಂತು. ಅದನ್ನು ತನಿಯ ಹೋಗಿ ತೆಗೆದುಕೊಂಡು, ಮೆಲ್ಲ ಮೆಲ್ಲನೆ ಊದುತ್ತ ಚೀಪತೊಡಗಿದ.

"ನಾಯ್ಕರಿಗೆ ಇದಕ್ಕೆ ಸಕ್ಕರೆ ಸೇರಿಸಲು ಮರೆತೇಹೋಗಿದೆಯೋ ಏನೋ !" ಎಂದನವ.

ನಾಯ್ಕರು ಕಾಫಿ ತಯಾರಿಸುತ್ತಿದ್ದವರು ಒಂದು ಸೌಟನಲ್ಲಿ ಸಕ್ಕರೆಯನ್ನು ತೆಗೆದು ತನಿಯನ ಚಹಕ್ಕೆ ಹಾಕಿದರು.

ನಿಮಗೆ, ಹುಳಿ ಹೆಂಡದ ರುಚಿ ಹಿಡಿದವರಿಗೆ ಚಹದ ರುಚಿ ಏನು ಗೊತ್ತು ? ಚಹವೆಂದರೆ ಪಾಯಸದಂತಿರಬೇಕು !"

ಎಂದು ಮತ್ತೆ ಕಾಫಿಯನ್ನು ಮಾರಪ್ಪನಿಗೆ ಕೊಡುವಾಗ ಅವರು ಉದ್ಗರಿಸಿದರು.

ಮಾರಪ್ಪನೇ ಅವರಿಗೆ ಹಣ ಕೊಟ್ಟ.

"ಆ ಹುಡುಗನ ಹಣ ತೆಗೆದುಕೊಳ್ಳಬೇಡಿ. ನಾನು ಕೊಡುತ್ತೇನೆ ನಾಯ್ಕರೆ. ಮತ್ತೆ ಅವನ ತಂದೆ ನಮಗೆಲ್ಲರಿಗೂ ಶಾಪ ಕೊಟ್ಟಾರು" ಎನ್ನುತ್ತ ತನಿಯ ಐದು ರೂಪಾಯಿಯ ನೋಟೊಂದನ್ನು ಅವರ ಕೈಗಿತ್ತ.

"ನನ್ನ ಹತ್ತಿರ ಚಿಲ್ಲರೆ ಇಲ್ಲವಲ್ಲ" ನಾಯ್ಕರು ಕೈಗಳನ್ನು ಕೆಳಗೆ ಮೇಲೆ ಮಾಡಿ ಹೇಳಿದರು. "ನಾಳೆ ನೀನು ಅವನಿಗೆ ಕಾಫಿ ಕೊಟ್ಟರಾಯಿತು. ಮಾರಪ್ಪನೇನು ಇನ್ನು ಯಜಮಾನನಾಗುವವನಲ್ಲವೆ? ನಿನಗೆ ಕಾಫಿ ಕುಡಿಸುವಷ್ಟು ಚೈತನ್ಯ ಅವನಿಗಿಲ್ಲವೆ ?"

"ಹ್ಹಂ! ನಿಮ್ಮದು ಒಳ್ಳೆಯ ವ್ಯಾಪಾರ" ತನಿಯನೆಂದ, ನಗುತ್ತ. "ಇವತ್ತು ನಾನು ಅವನಿಗೆ ಕೊಡುವುದು, ನಾಳೆ ನನಗೆ ಅವನು ಕೊಡುವುದು, ನಾಳಿದು ಪುನಃ ನಾನು ಅವನಿಗೆ....ಅಂತೂ ನಮ್ಮ ವ್ಯವಹಾರ ಸಾಗುವಾಗ ಹಣ ನಿಮಗೆ! ಒಳ್ಳೆಯ ಸಲಹೆ ನಿಮ್ಮದು !"

"ಹೂಂ. ಇನ್ನು ನೀವಿಬ್ಬರು ದಿನಕ್ಕೊಮ್ಮೆ ನನ್ನಲ್ಲಿ ಕಾಫಿ ಕುಡಿದು, ಅದರ ಲಾಭದಿಂದ ನನ್ನ ಮನೆಗೆ ಉಪ್ಪರಿಗೆ ಹಾಕುವುದೊಂದು ಉಳಿದಿದೆ. ಒಳ್ಳೆಯ ಮಾತು ಹೇಳಿದಿ. ಅದಿರಲಿ, ಇಸ್ಪೀಟಿನಲ್ಲಿ ಒಂದು ಕೈ ನೋಡುವುದಿಲ್ಲವೆ ?"

"ನೋಡೋಣ."

ಎನ್ನುತ್ತ ತನಿಯ ಅತ್ತ ಸರಿದ. ನಾಯ್ಕರು ಸ್ವತಃ ಆಡುವವರಲ್ಲ. ಆದರೆ ಅವರ ಹೊಟೇಲು ಅದಕ್ಕೇ ಮೀಸಲು. ಅವರಿಗೆ ಅದರಿಂದ ಲಾಭವೆಂದರೆ ಇಸ್ಪೀಟು ಆಡುವವರ ಕಾಫಿ.

ಕೆಲವರು ಒಮ್ಮೆ ಆಡಲಿಕ್ಕೆ ಕುಳಿತರೆ ಒಂದರ ಹಿಂದೊಂದಾಗಿ ಕಾಫಿ ಕುಡಿಯುವರು. ಕೆಲವರು ದಿನಗಟ್ಟಲೆ ಆಡುತ್ತಲೇ ಕುಳಿತು ಕೊಳ್ಳುವರು. ಮತ್ತೆ ಕೆಲವರ ಸಹಾಯ ನಾಯ್ಕರಿಗೂ ಬೇಕಾಗು ತ್ತಿತ್ತು: ಅವರು ರಾತ್ರೆಯಲ್ಲಿ ಹಳ್ಳಿಗೆ ಹೋಗಿ ಅಡಿಕೆ, ತೆಂಗಿನ ಕಾಯಿಗಳನ್ನು ತಂದು ನಾಯ್ಕರಿಗೆ ಹೇಳಿದ ಬೆಲೆಗೆ ಕೊಡುತ್ತಿದ್ದರು. ಕೆಲವರಿಂದ ನಾಯ್ಕರಿಗೆ ಬೇಕಾದಾಗ ಸ್ವಲ್ಪ ಸಾಲವೂ ದೊರೆ ಯುತ್ತಿತ್ತು.

ತನಿಯನಿಗೆ ಹೆಚ್ಚು ಆಡಲಿಕ್ಕೆ ತಿಳಿಯದು. ಅವನಿಗೆ ಪ್ರೀತಿಯ ಆಟವೆಂದರೆ ಸೆಟ್ ಒಂದೇ. ಪರೇಲ್ ಕೂಡಾ ಸ್ವಲ್ಪ ಸ್ವಲ್ಪ ತಿಳಿಯು ತ್ತಿತ್ತು. ಸೆಟ್ ಆಟಕ್ಕೆ ಹೆಚ್ಚು ಹಣ ಕಟ್ಟಲಾರನವ. ಕಾಲಾಣೆ, ಅರ್ಧಾಣೆ ಹೆಚ್ಚೆಂದರೆ ಎರಡಾಣೆಯ ವರೆಗೆ ಜೂಜು ಕಟ್ಟುತ್ತಿದ್ದ ಇಂದು ಏನಾದರೂ ವಿಶೇಷ ಕೆಲಸವಿಲ್ಲ. ಸಿಕ್ಕಿದರೆ ನಾಲ್ಕಾಣೆ ಕಾಫಿ ಗಾದರೂ ಆದೀತು ಎಂದು ಅವನಿಗೆ ತೋರಿತು.

ಅವನು ಮಾರಪ್ಪನೊಡನೆ, "ನಿನಗೆ ಸೆಟ್ ಆಡಲಿಕ್ಕೆ ತಿಳಿಯು ವುದೇ ?" ಎಂದು ಕೇಳಿದ.

ಮಾರಪ್ಪ ತನಗೆ ಇಸ್ಪೀಟು ಎಲೆಯ ಗುರುತೇ ಇಲ್ಲವೆಂದು ಉತ್ತರಿಸಿದ.

"ಎಂಥ ಜನ ನೀನು !" ತನಿಯನೆಂದ. "ಬರಹ ತಿಳಿದವನಿಗೆ ಇಸ್ಪೀಟು ಎಲೆಯ ಚುಕ್ಕೆಗಳ ಗುರುತಿಲ್ಲವೆಂದರೆ! ಆಶ್ಚರ್ಯ. ಮತ್ತೇನು ತಂದೆಯಂತೆ ಹಣ ಕೂಡಿಸಿಡುವುದೊಂದೇ ಗೊತ್ತೆ ?"

ನಾಯ್ಕರು ಈ ಸಂಭಾಷಣೆಯನ್ನು ದೂರದಿಂದ ಆಲಿಸುತ್ತಿದ್ದ ವರು ನಗುತ್ತ, "ಹಾಂ. ಅವನು ಚಿನ್ನದಂಥ ಹುಡುಗ. ಈ ತನಕ ಹಾಳಾಗಿಲ್ಲ. ನೀನು ಎಲ್ಲ ಕಲಿಸು. ನನ್ನ ಹೊಟೇಲಿನಲ್ಲಿ ಅವನು ಪಾಪ ಕಾಫಿ ಸಹಿತ ಯಾವಾಗಲೂ ಕುಡಿಯುವವನಲ್ಲ. ಹುಡುಗರು ಇದ್ದರೆ ಹೀಗಿರಬೇಕು. ಆದರೆ ಎಲ್ಲರೂ ಇವನ ಹಾಗೆಯೇ ಆದರೆ

ನಾನು ಖಂಡಿತ ವ್ಯಾಪಾರ ನಿಲ್ಲಿಸುತ್ತೇನೆ. ಇಲ್ಲವಾದರೆ ಮೂರಪ್ಪ ಒಂದು ಕೋಳಿ ಜೂಜಿಗೆ ಹೋಗುವುದು, ಒಂದು ಜಾತ್ರೆಗೆ ಹೋಗುವುದು ಏನಾದರೂ ಉಂಟೇ? ಅವನು ಆಯಿತು, ಅವನ ಕೆಲಸ ಆಯಿತು, ಪಾಪ! ಇನ್ನು ನೀನು ಅವನಿಗೆ ಇಸ್ಪೀಟು ಆಡಲಿಕ್ಕೆ ಕಲಿಸು, ಮತ್ತೆ ಹಣ ಇಟ್ಟು ಆಡಲು ಅಭ್ಯಾಸ ಮಾಡಿಸು. ನಿನ್ನ ಒಟ್ಟಿಗೆ ಯಾರಾದರೂ ಬರುವುದು ಅಪಾಯಕರ."

ತನಿಯನಿಗೆ ನಾಯ್ಕರ ವಾಗ್ಜಾಲ ತಿಳಿದುದೇ ಆಗಿತ್ತು. ಅದ್ದರಿಂದ ಅವನು ಅವರಿಗೆ ಉತ್ತರ ಕೊಡಲಿಲ್ಲ. ಅವರು ಯಾವಾಗಲೂ ಹೊಸಬರನ್ನು ಎತ್ತಿ ಪರ್ವತದ ಮೇಲೆ ಕುಳ್ಳಿರಿಸಿ ನೀನೇ ರಾಜ, ನೀನೇ ದೇವರು ಎಂಬಿತ್ಯಾದಿಯಾಗಿ ಹೊಗಳುವವರು. ಹಾಗೆ ಮಾತಾಡಿದರೇನೇ ಚಿಕ್ಕಹುಡುಗರಿಗೆ ಅಳಕು ಹೋಗಿ ಆತ್ಮವಿಶ್ವಾಸ ಹುಟ್ಟುವುದು ಎನ್ನುತ್ತಿದ್ದರವರು ಒಮ್ಮೊಮ್ಮೆ.

"ಎಂಥವನಿಗಾದರೂ ಧೈರ್ಯ ಬೇಕು. ಧೈರ್ಯವಿಲ್ಲದಿದ್ದರೆ ಒಂದೂ ಆಗದು. ಆ ಧೈರ್ಯವನ್ನು ತಂದೆತಾಯಿಗಳು ಮಕ್ಕಳಲ್ಲಿ ಹೊಗಳಿ ಹುಟ್ಟಿಸಬಹುದಲ್ಲದೆ, ಅವನ್ನು ಹೆದರಿಸುವುದರಿಂದಾಗದು. ಒಮ್ಮೆ ಅವಕ್ಕೆ ತಾವು ಏನನ್ನು ಮಾಡಬಲ್ಲೆವು, ತಮ್ಮನ್ನು ಮೆಚ್ಚುವವರು, ತಮ್ಮನ್ನು ಹೊಗಳುವವರು ಸುತ್ತುಮುತ್ತಲೂ ಇದ್ದರೆಂದು ತಿಳಿದೊಡನೆ, ಅವುಗಳ ಆತ್ಮವಿಶ್ವಾಸ ಬೆಳೆಯುವುದು. ಬುದ್ಧಿವಂತರೆಂದರೆ, ಹುಟ್ಟುವಾಗಲೇ ಬುದ್ಧಿವಂತರಲ್ಲ, ಮತ್ತೆ ಅವರನ್ನು ಬೆಳೆಸುವ ರೀತಿಯಲ್ಲಿ ಬುದ್ಧಿವಂತಿಕೆ ಬರುವುದು."

ಇದು ಅವರು ಜನರಿಗೆ ಸಾಮಾನ್ಯವಾಗಿ ಕೊಡುತ್ತಿದ್ದ ಬೋಧನೆ. ಆದರೆ ಕೆಲವರು ಅವರ ಮಕ್ಕಳ ಕುರಿತೂ ಆಗಾಗ ಕೇಳದಿಲ್ಲ.

"ಈಗ ನಿಮ್ಮ ಮಗ ಏನು ಮಾಡುತ್ತಾರೆ ನಾಯ್ಕರೆ? ಅವರು ಎಲ್ಲಿವರೆಗೆ ಕಲಿತಾಯಿತು?" ಎಂದು ಕೇಳಿದರೆ ನಾಯ್ಕರು ಒಬ್ಬೊಬ್ಬ

ರೊಡನೆ ಒಂದೊಂದು ವಿಧವಾಗಿ ಹೇಳುವರು. ಕೆಲವರೊಡನೆ ಅವನು ಮದ್ರಾಸಿನಲ್ಲಿ ಕಲಿಯುತ್ತಿದ್ದಾನೆನ್ನುತ್ತಿದ್ದರು. ಇನ್ನೂ ಕೆಲವರೊಡನೆ ಬೊಂಬಾಯಿಯಲ್ಲಿ ಆಫೀಸರನಾಗಿದ್ದಾನೆನ್ನುವರು. ಮತ್ತೆ ಕೆಲವ ರೊಡನೆ ಬೆಂಗಳೂರಿನಲ್ಲಿ ಕಾಫಿ ಹೊಟೇಲು ಇಟ್ಟಿದ್ದಾನೆನ್ನುವರು.

ನಿಜವಾಗಿಯಾದರೆ ಅವನು ಅವರೊಡನೆ ಕೆಲವು ವರ್ಷಗಳ ಹಿಂದೆ ಜಗಳ ಮಾಡಿ, ಮನೆಬಿಟ್ಟು ಹೋದವ, ಮಂಗಳೂರಲ್ಲೇ ಒಂದು ಕಡೆ ಅಡುಗೆಯ ಕೆಲಸಕ್ಕೆ ನಿಂತಿದ್ದ. ಇತ್ತೀಚೆಗೆ ಮನೆಯ ಖರ್ಚಿಗೆಂದು ಅವರಿಗೆ ತಿಂಗಳಿಗೆ ಹತ್ತು ರೂಪಾಯಿಗಳಂತೆ ಕಳಿಸುತ್ತಲೂ ಇದ್ದ. ಆದರೆ ನಾಯ್ಕರ ನಾಲಿಗೆಯಲ್ಲಿ ಸತ್ಯಕ್ಕಿಂತಲೂ ಸುಳ್ಳಿಗೆ ಹೆಚ್ಚು ಪ್ರಾಮುಖ್ಯತೆಯಿತ್ತು. ಮತ್ತೆ ಅವರ ಸುಳ್ಳನ್ನು ಕಂಡುಹಿಡಿಯು ವುದೂ ಸಾಮಾನ್ಯವಾದ ಕೆಲಸವಲ್ಲ.

ನಾಯ್ಕರು ಮಾರಪ್ಪನನ್ನು ಸುಮ್ಮನೆ ಮೇಲೇರಿಸುತ್ತಿರಲಿಲ್ಲ. ಅವನ ತಂದೆಯೊಡನೆ ಬಹಳ ಹಣವುಂಟೆಂಬುದು ಅವರಿಗೆ ತಿಳಿದಿತ್ತು. ಅದರೊಡನೆ ಮಾರಪ್ಪ ಹಸಿ ಯುವಕ. ನಾಯ್ಕರ ಪ್ರಾಯ ಬಂದ ಇಬ್ಬರು ಹೆಣ್ಣುಮಕ್ಕಳನ್ನೊಮ್ಮೆ ನೋಡಿದರೆ ಮತ್ತೆ ಅವರ ಕಾಫಿಯ ಕಾಯಂ ಗಿರಾಕಿಯಾಗಲೂ ಬಹುದು ಎಂಬ ಆಸೆ ಬೇರೆ. ಈ ರೀತಿ ಯಲ್ಲಿ ನಾಯ್ಕರ ಬಲೆಗೆ ಬಿದ್ದವರೂ ಹಲವು ಮಂದಿ ಇದ್ದರು.

ಅದೂ ನಾಯ್ಕರು, ಮಾರಪ್ಪನು ಅಂಗಡಿಯ ಒಳಗಡೆ ಇಣುಕು ವುದನ್ನು ಕಂಡಿದ್ದರು. ಅವರ ಮಗಳು ಗುಲಾಬಿ ಅಲ್ಲೇ ಕಿಟಕಿ ಯೊಳಗೆ ತಲೆ ಬಾಚುತ್ತಿದ್ದಳು. ಮಾರಪ್ಪ ಅವಳನ್ನು ಒಂದು ಸಲ ಕಂಡವ ಪದೇ ಪದೇ ಅಲ್ಲಿಗೇ ನೋಡುವುದನ್ನು ನಾಯ್ಕರು ಗಮನಿಸಿ ದ್ದರು. ಅಲ್ಲದೆ ಇನ್ನು ಅವನು ದಿನಕ್ಕೊಮ್ಮೆಯಾದರೂ ತನ್ನ ಹೊಟೇಲಿಗೆ ಬಾರದಿರಲಾರನೆಂದೂ ಊಹಿಸಿದ್ದರು.

ಅಷ್ಟೆಂದ ಮಾತ್ರಕ್ಕೆ ಅವರು ತನ್ನ ಮನೆಯ ಹೆಂಗಸರನ್ನು ಇತರರು ನೋಡುವಂತೆ ಪ್ರೋತ್ಸಾಹಿಸಿದ್ದರೆಂದಲ್ಲ. ಹೊಟೇಲು ತೆರೆ

ವಿರುವ ವೇಳೆಯಲ್ಲಿ, ಮನೆಯಿಂದ ಹತ್ತು ವರ್ಷ ಪ್ರಾಯ ಮಿಕ್ಕಿದ ಯಾವ ಹುಡುಗಿಯರೂ ಹೊರಗೆ ಬರಕೂಡದೆಂದು ಅವರ ಕಟ್ಟಾಜ್ಞೆ ಯಿತ್ತು. ಹೊರಗೆ ಕೇಳುವಂತೆ ಅವರು ಒಳಗಿಂದ ಗಟ್ಟಿಯಾಗಿ ಮಾತಾಡಬಾರದೆಂದೂ ಅವರು ನಿರ್ಬಂಧಿಸಿದ್ದರು. ಹೀಗಾಗಿ ಅವರ ಹೆಂಗಸರಿಗೆ ಉಳಿದ ಸ್ವಾತಂತ್ರ್ಯವೆಂದರೆ ಹೊಟೇಲಿಗೆ ತಾಗಿದ್ದ ಕಿಟಕಿ ಯಿಂದ ಮೃಗಾಲಯದ ಪ್ರಾಣಿಗಳಂತೆ ಹೊರಗೆ ಇಣುಕುವುದೊಂದು ಮಾತ್ರ. ನಾಯ್ಕರು ಅದನ್ನು ಮಾತ್ರ ಮುಚ್ಚಿರಲಿಲ್ಲ. ಅಲ್ಲಿ ತಾನು ಮಾಡುವ ಕಾಫಿಯ ರುಚಿಗಿಂತಲೂ ಹೆಚ್ಚಿನ ಆಕರ್ಷಣೆಯಿದೆ ಯೆಂಬುದು ಅವರಿಗೆ ಎಂದೋ ಸಿದ್ಧವಾದ ಸಂಗತಿ.

ಹಾಗೆಯೇ ತನಿಯ ಜೂಜಿನ ರಂಗದಲ್ಲಿ ಒಬ್ಬ ಎದ್ದು ಹೋದ ಒಡನೆ ಅಲ್ಲಿ ಕುಳಿತ. ತಾನು ಕಾಲಾಣೆಯ ಸೆಟ್ ಆಡುವೆನಲ್ಲದೆ, ಅದಕ್ಕಿಂತ ಹೆಚ್ಚಿಗೆ ಹಣವಿಡಲಾರೆನೆಂದ. ಮಾರಪ್ಪ ಅವನ ಹಿಂದೆ ಕುಳಿತುಕೊಂಡ.

ಇಸ್ಪೀಟಿನ ಎಲೆಗಳನ್ನು ಕಲಸಿದರು. ಕಡಿದರು. ಎಲ್ಲರಿಗೂ ಹಂಚಿಕೊಂಡರು. ತನಿಯ ಒಂದೊಂದೇ ಜಾತಿಯ ಎಲೆಗಳನ್ನು ಒಟ್ಟುಗೂಡಿಸಿದ. ಅವನ ಕೈಯಲ್ಲಿ ಸೆಟ್ ಆಗಲಿಕ್ಕೆ ಇನ್ನೂ ನಾಲ್ಕು ಎಲೆಗಳು ಬೇಕು.

ಸರಿ. ಎಲೆಗಳ ಆಟ ಆರಂಭವಾಯಿತು.

ತನಿಯನ ಬಳಿಯಿದ್ದವ ಒಂದು ರಾಜನನ್ನು ಕೆಳಗೆ ಹಾಕಿದ. ತನಿಯನೊಡನೆ ಅದೇ ಜಾತಿಯ ಗುಲಾಮ ಮತ್ತು ಹತ್ತು ಇದ್ದುವು. ಅಲ್ಲದೆ ಬೇರೊಂದು ಜಾತಿಯಲ್ಲಿ ಒಬ್ಬ ರಾಜನೂ ಇದ್ದ. ತನಿಯ ಆ ರಾಜನನ್ನು ಹೆಕ್ಕಿಕೊಂಡು ಕೈಯಲ್ಲಿದ್ದ ಒಂದು ಎಂಟನೆ ಎಲೆಯನ್ನು ಕೆಳಗೆ ಹಾಕಿದ. ಹೀಗೆ ಇನ್ನೊಂದು ಸುತ್ತು ಬರುವಾಗ ಮತ್ತೊಂದು ಎಂಟನೆಯ ಎಲೆಯೇ ಅವನಿಗೆ ಬಂತು. ಅದನ್ನು ಕೆಳಗೆ ಹಾಕಿದ.

ಆಟ ಹೀಗೆಯೇ ತಿರುಗತೊಡಗಿತು. ಕೊನೆಗೆ ತನಿಯನೊಡನೆ

ಮೂರು ಸೆಟ್‌ಗಳಾದುವು. ನಾಲ್ಕನೆಯ ಸೆಟ್ ಆಗಲಿಕ್ಕೆ ಮತ್ತೊಂದು ಎಲೆ ಮಾತ್ರ ಬೇಕಾಗಿತ್ತು. ಆಟ ಇನ್ನೂ ತಿರುಗತೊಡಗಿತು.

ತನಿಯ ಬೇರೆ ಬೇರೆ ಜಾತಿಯ ಎಲೆಗಳನ್ನು ಬಿಸಾಡತೊಡಗಿದ. ಅವನ ಎದುರಾಳಿಯೂ ಬಹಳ ವಿಚಕ್ಷಣತೆಯಿಂದ ತನಿಯನಿಗೆ ಅಗತ್ಯವಿಲ್ಲದ ಎಲೆಗಳನ್ನೇ ಬಿಸಾಡುತ್ತಿದ್ದ. ಅಷ್ಟರಲ್ಲಿ ತನಿಯನ ಮತ್ತೊಂದು ಸೆಟ್ ಕದಲಿತು. ಎದುರಾಳಿ ಅದನ್ನು ನಿರೀಕ್ಷಿಸಿ ಆ ಎಲೆಯನ್ನು ಬಚ್ಚಿಟ್ಟುಕೊಂಡ.

ಕೊನೆಗೆ ಒಬ್ಬನ ಸೆಟ್ ಆಯಿತು. ತನಿಯ ಅರ್ಧಾಣೆ ಕಳೆದುಕೊಂಡ. ಮಾರಪ್ಪ ನೋಡುತ್ತಿದ್ದ.

ಎರಡನೆಯ ಆಟಕ್ಕೆ ಪಣದ ಹಣವನ್ನು ಎರಡಾಣೆಗೆ ಏರಿಸಿದರು. ತನಿಯನೇ ಕಲಸುವವ. ಅವನು ಎಲ್ಲಾ ಎಲೆಗಳನ್ನೂ ಒಂದು ಮುಂದೆ ಮಾಡಿ ತಿರುಗಿಸಿ ತಿರುಗಿಸಿ ಕಲಸಿದ.

" ಏ ! ಹಾಗೆ ಕಲಸಿದರೆ ಎಲೆಗಳೆಲ್ಲ ಯದ್ವಾತದ್ವಾ ಆಗುತ್ತವೆ. ಆಟವೇ ಬರೋದಿಲ್ಲ. ಸ್ವಲ್ಪ ಕಲಸಿದರೆ ಸಾಕೋ" ಎಂದು ಒಬ್ಬ ಆಟಗಾರ ಬಿರುಸಾಗಿ ಹೇಳಿದ.

" ಸರಿಯಾಗಿ ಕಲಸದಿದ್ದರೆ ಒಬ್ಬೊಬ್ಬರಿಗೇ ಆಟ ಬಂದು ಹೋಗುತ್ತದೆ " ಎಂದು ತನಿಯ ನುಡಿದ.

" ಹೀಗೆ ನೀನು ಆಡಿದರೆ ಆಟ ಮುಗಿಯುವಾಗ ರಾತ್ರೆ ಬೆಳಗಾದೀತು ಮಹರಾಯ ! ಈಚೆ ಕೊಡು. ನಾನು ಕಡಿಯುತ್ತೇನೆ" ಎಂದು ತನಿಯನ ಬದಿಯಲ್ಲಿದ್ದವ ಆಗ್ರಹ ಪಡಿಸಿದ.

ತನಿಯ ಅಂತೆಯೇ ಕಡಿಸಿ, ಎಲೆಗಳನ್ನು ಹಂಚಿದ.

ಈ ಸಲ ಅವನಿಗೇ ಜೋಕರ್ ಬಂದಿತ್ತು. ಆದರೆ ಒಂದು ಜಾತಿಯಲ್ಲೂ ಸರಿಹೋಗುವ ಎಲೆಗಳಿದ್ದಿಲ್ಲ.

ಆಟ ಪುನಃ ತಿರುಗತೊಡಗಿತು. ತನಿಯನಿಗೆ ಬೇಡವಾದ ಎಲೆಗಳೆಲ್ಲಾ ಖಾಲಿಯಾಗುತ್ತ ಬಂದುವು. ಕೊನೆಗೆ ಅವನೇ ಗೆದ್ದ.

ಒಂಭತ್ತಾಣೆ ಅವನ ಕೈಗೆ ಬಂತು.

ಮಾರಪ್ಪನಿಗೆ ಈ ಹಣ ಬಂದುದನ್ನು ನೋಡಿ ತುಸು ಕುತೂಹಲವಾಯಿತು. ತಾನೂ ಈ ಆಟ ಕಲಿತರೆ ಸ್ವಲ್ಪ ಹಣ ಮಾಡಬಹುದೆಂದು ಎನಿಸಿತು. ಆದರೆ ಹಿಂದೊಮ್ಮೆ ತನ್ನ ತಂದೆ ಇಸ್ಪೀಟು ಆಟವನ್ನು ಆಡಬಾರದೆಂದು ಆಣೆ ಹಾಕಿದ್ದು ಅವನಿಗೆ ನೆನಪಾಯಿತು. ಇವರೇನೋ ಹೀಗೆ ಆಡಿ ಸಮಯವನ್ನು ಕಳೆಯಬಹುದು ವಿನಃ ಇದರಿಂದಲೇ ಐಶ್ವರ್ಯವಂತರಾಗಲಿಕ್ಕಿಲ್ಲವೆಂದುಕೊಂಡ. ಅದೂ, ಈ ಆಟಕ್ಕೆ ಅದೃಷ್ಟವೊಂದೇ ಸಾಲದು. ಬುದ್ಧಿವಂತಿಕೆಯೂ ಬೇಕು. ಇತರರು ತನಗೆ ಮೋಸ ಮಾಡುತ್ತಿರುವರೇ ಎಂದು ಸದಾ ನಿರೀಕ್ಷಿಸುತ್ತಿರಬೇಕು.

ಆಟ ಸಾಗುತ್ತಿದ್ದಂತೆಯೇ ಮಾರಪ್ಪ ಪುನಃ ನಾಯ್ಕರ ಮನೆಯ ಕಿಟಕಿಯತ್ತ ನೋಡತೊಡಗಿದ. ಅಲ್ಲಿ ಇನ್ನೊಂದು ಹುಡುಗಿ ನಿಂತುಕೊಂಡಿತ್ತು. ಅದು ಮೊದಲು ತಲೆ ಬಾಚಿಕೊಂಡಿದ್ದವಳಲ್ಲ. ಮಾರಪ್ಪ ಆಕೆಯ ಮುಖವನ್ನು ನೋಡಿ ಸಂತಸಗೊಂಡ. ಉದ್ದವಾದ ಜಡೆಯನ್ನು ಆಕೆ ಬೆನ್ನ ಮೇಲೆ ಇಳಿಯಬಿಟ್ಟಿದ್ದಳು. ತಲೆಯಲ್ಲಿ ಗುಲಾಬಿಯ ಹೂಗಳಿದ್ದುವು. ಕಣ್ಣಿಗೆ ಕಾಡಿಗೆಯನ್ನು ಸವರಿದ್ದಳು.

ಹಸುರು ಬಣ್ಣದ ಸೀರೆ ಉಟ್ಟಿದ್ದಳು. ಅದರೆಡೆಯಿಂದ ಚುಕ್ಕೆಯ ಕುಪ್ಪಸ ಇಣುಕುತ್ತಿತ್ತು.

ತನಿಯನಿಗೆ ಮರಳಿ ಒಂದು ರೂಪಾಯಿ ಸಿಗುವಾಗ ಮಾರಪ್ಪ ತನ್ನ ದೃಷ್ಟಿಯನ್ನು ಬದಲಿಸಿದ. ಅವರು ಪುನಃ ಎಲೆಗಳನ್ನು ಕಲಸಿ ಆಟವಾಡತೊಡಗಿದರು.

ಮಾರಪ್ಪ ತನಿಯನ ತಲೆಯ ಅಡ್ಡದಲ್ಲಿ ಮುಖವನ್ನಡಗಿಸಿ ಇನ್ನೂ ಕಿಟಕಿಯ ಕಡೆಗೇ ನೋಡತೊಡಗಿದ. ಅಲ್ಲಿಗೆ ಇನ್ನೊಂದು ಹುಡುಗಿ ಬಂತು. ಅವರಿಬ್ಬರೂ ಮಾತಾಡತೊಡಗಿದರು. ಆಕೆಯ ಮುಖವನ್ನು ಕಂಡಾಗ ಮಾತ್ರ ಮಾರಪ್ಪನಿಗೆ ಅವಳ ಗುರುತು ಸಿಕ್ಕಿತು. ಆಕೆ ಅವನೊಡನೆ ಶಾಲೆಯಲ್ಲಿ ಚಿಕ್ಕಂದಿನಲ್ಲಿ ಓದುತ್ತಿದ್ದ ರಮಾಬಾಯಿ.

ಅವನೂ ಅವಳೂ ಒಂದೇ ಬೆಂಚಿನಲ್ಲಿ ಆಗ ಕುಳಿತುಕೊಳ್ಳುತ್ತಿದ್ದರು.

ಮಾರಪ್ಪನಿಗೆ ಎಲ್ಲವೂ ನೆನಪಾಯಿತು. ಆಕೆಗೆ ಅವನು ಮಾವಿನ ಹಣ್ಣುಗಳನ್ನು ತಂದುಕೊಡುತ್ತಿದ್ದ. ಆಕೆ ಅವನಿಗೆ ಬದಲಾಗಿ ಚಕ್ಕುಲಿಯನ್ನು ಕೊಡುತ್ತಿದ್ದಳು. ಅವನಿಗೆ ತಿಳಿಯದ ಪಾಠಗಳನ್ನು ಹೇಳಿಕೊಡುತ್ತಿದ್ದಳು. ಲೆಕ್ಕಗಳನ್ನು ನಕಲು ಮಾಡಲು ಬಿಡುತ್ತಿದ್ದಳು. ಕೆಲವು ಸಲ ಅವರೊಳಗೆ ಜಗಳವೂ ಆದುದಿತ್ತು. ಒಮ್ಮೆ ಉಪಾಧ್ಯಾಯಿನಿಯೊಬ್ಬಳು ಈ ಹುಡುಗಿಯಿಂದ ಅವನಿಗೆ ಹೊಡೆಸಿಯೂ ಇದ್ದಳು. ಶಾಲೆ ಬಿಡುವಾಗ ಅವಳು ಸಾಧಾರಣ ದೊಡ್ಡವಳಾಗಿದ್ದಳು. ಅವಳು ಶಾಲೆ ಬಿಟ್ಟ ಬಳಿಕವೂ ಅವನು ಎರಡು ವರ್ಷ ಅಲ್ಲೇ ಒಂದೇ ಕ್ಲಾಸಿನಲ್ಲೇ ಫೇಲಾಗಿ ಕಲಿತಿದ್ದ....ಹೌದು, ಎಂದು ಅವನು ನೆನೆದ. ರಮಾ ಅಂದು ಹೇಗಿದ್ದಳು, ಇಂದು ಹೇಗಿದ್ದಾಳೆ. ಅಂದು ಅವಳ ದವಡೆಗಳ ಮೇಲೆ ಎಲಬುಗಳು ಕಾಣುತ್ತಿದ್ದುವು. ಮುಖ ಬಹಳ ನೀಳವಾಗಿತ್ತು. ಬಣ್ಣ ನಸು ಕಪ್ಪಾಗಿತ್ತು. ಹಲ್ಲುಗಳು ಸ್ವಲ್ಪ ಹಿಂದು ಮುಂದಾಗಿದ್ದುವು. ತುಟಿಗಳು ತೆಳುವಾಗಿ ಒಂದನ್ನೊಂದು ಅಂಟಿಕೊಂಡಂತಿದ್ದುವು. ಕೈಕಾಲುಗಳು ಬಿದಿರಿನ ಕೋಲುಗಳಂತೆ ಒಣಗಿಹೋಗಿದ್ದುವು. ಕಾಲುಗಳಲ್ಲಿ ಯಾವಾಗಲೂ ಹುಣ್ಣುಗಳಿದ್ದುವು. ತಲೆಗೆ ಓರೆಬೈತಲೆ ಹಾಕುತ್ತಿದ್ದಳು. ಇದು ಚಾರ್ಮಾಡಿಗೆ ಹೋಗುವ ಮಾರ್ಗವೆಂದು ಅವನೇ ಅವಳಿಗೆ ತಮಾಷೆ ಮಾಡುತ್ತಿದ್ದ. ಹಣೆಗೆ ಕುಂಕುಮ ಇಡುತ್ತಿದ್ದಳು........ಕುತ್ತಿಗೆಯಲ್ಲಿ ಚಿಕ್ಕದೊಂದು ಚಿನ್ನದ ತಾಯಿತವಿರುತ್ತಿತ್ತು. ಅದನ್ನಾಕೆ ಯಾವಾಗಲೂ ಬಾಯಿಯಲ್ಲಿ ಹಾಕಿಕೊಂಡು ಜಗಿಯುತ್ತಿದ್ದಳು. ಕಡಿವಾಣದ ಕುದುರೆಯೆಂದು ಹುಡುಗರೆಲ್ಲ ನಗುತ್ತಿದ್ದರು.

ಆಕೆ ಕಲಿಯುವುದರಲ್ಲಿ ಬಹಳ ಜಾಣೆಯೆಂದು ಶಾಲೆಯಲ್ಲಿ ಉಪಾಧ್ಯಾಯರು ಹೊಗಳುತ್ತಿದ್ದರು. ಒಂದೆರಡು ಸಲ ಮಕ್ಕಳ ನಾಟಕದಲ್ಲಿ ಅಭಿನಯಿಸಿ ಬಹುಮಾನ ಕೂಡಾ ಪಡೆದಿದ್ದಳು.

ಹೌದು, ಒಮ್ಮೆ ಆಕೆ ಬಾಲಕೃಷ್ಣನ ವೇಷ ಹಾಕಿದ್ದಳು. ಅದನ್ನು ನೋಡಿ ಅವನು ಮರುಳಾಗಿದ್ದ. ಅವನಿಗೆ ನಾಟಕದಲ್ಲಿ ಪಾತ್ರ ಕೊಡಲಿಕ್ಕೆ, ಮಾತಾಡಲಿಕ್ಕೆ ಸರಿಯಾಗಿ ಬರುವುದಿಲ್ಲವೆಂದು ಉಪಾಧ್ಯಾಯರು ತೆಗಳಿದ್ದರು, ಅವಳ ಮುಂದೆ. ಆಗ ಆಕೆ ಇಂಪಾಗಿ ಹಾಡುತ್ತಲೂ ಇದ್ದಳು.

ಮಾರಪ್ಪ ಹೀಗೆಂದು ಯೋಚಿಸುತ್ತ, ಸಮಯದಮೇಲೆ ಕುಳಿತು ಹಿಂದಕ್ಕೆ ಸವಾರಿ ಮಾಡಿದ್ದ. ಆದರೆ ಆ ದಿನಗಳು ಇನ್ನು ಬರಲಾರವು. ಎಲ್ಲ ಬಿಟ್ಟು, ಈಗ ರಮೆಯೊಡನೆ ಒಂದು ಮಾತನ್ನಾದರೂ ಆಡಲು ಸಾಧ್ಯವಿಲ್ಲ. ಆಕೆ ಬೆಳೆದಿದ್ದಾಳೆ ಮಾತ್ರವಲ್ಲ, ತುಂಬಾ ಸುಧಾರಿಸಿದ್ದಾಳೆ. ಅವನು ಶುದ್ಧ ಬೇಸಾಯಗಾರನಾಗಿದ್ದಾನೆ. ಅವಳ ಆ ಆಧುನಿಕ ಉಡುಪುಗಳೆಲ್ಲಿ, ಅವನ ಆ ಗಾಣದ ಕೆಲಸದ ದಪ್ಪವಸ್ತ್ರಗಳೆಲ್ಲಿ? ಅವನ ತಲೆಯಲ್ಲಿ ಉದ್ದವಾದ ಜುಟ್ಟು ಬೆಳೆದಿದೆ. ಗಡ್ಡ ಮೀಸೆಗಳನ್ನೂ ಸರಿಯಾಗಿ ತೆಗೆಯುತ್ತಿಲ್ಲ. ಈಗ ಅವಳನ್ನು ಮುಟ್ಟಲು ಕೂಡಾ ತಾನು ಅರ್ಹನಲ್ಲವೆಂದು ಅವನಿಗೆ ತೋರಿತು.

ತಾನು ಹಣವಿದ್ದವ. ಆದರೆ ತನ್ನ ಕಸಬು ಬೇಸಾಯ. ತನಗೆ ಯಾವಾಗಲೂ ಮಣ್ಣಿಗೆ ಸರಿಯಾದ ಉಡುಗೆ-ತೊಡಿಗೆ. ತಾನಿನ್ನು ದೊಡ್ಡ ಸಾಹುಕಾರನಾದರೂ ತನ್ನ ಚರ್ಯೆ ಬದಲುವುದು ದುರ್ಲಭ. ಆದರೆ ಈ ನಾಯ್ಕರು ತೀರ ಬಡವರು. ಅವರಿಗೆ ತನ್ನಂತೆ ಆಸ್ತಿ ಪಾಸ್ತಿಯಿಲ್ಲ; ಒಳಗೆ ಬಚ್ಚಿಟ್ಟ ಹಣವಿಲ್ಲ. ಆದರೂ ಅವರು ತನಗಿಂತ ಎಷ್ಟೋ ಪಾಲು ಶ್ರೇಷ್ಠರೆನ್ನಿಸಿಕೊಳ್ಳುತ್ತಾರೆ. ಅವರೊಡನೆ ತನಗೆ ಸಂಬಂಧ ಬೆಳೆಸಿಕೊಳ್ಳಲಾಗದು. ತಾನು ಅವರ ಮಗಳ ಹಂತಕ್ಕೆ ಏರಲಾರೆ. ಅವಳ ಕಣ್ಣಿಗೆ ಎಂದೂ ಒಪ್ಪಲಾರೆ.

"ನಾನು ಈಗ ಡೈಮನ್ ನೈಲವನ್ನು ಹಾಕಿದ್ದೆ. ನಿನ್ನ ಕೈಗೆ ಅದು ಹೇಗೆ ಬಂತು?" ಎಂದು ಆಟವಾಡುವವರಲ್ಲಿ, ಒಬ್ಬ ತನಿಯನನ್ನು ಜೋರಾಗಿ ಪ್ರಶ್ನಿಸತೊಡಗಿದ.

" ನನಗೆ ಈಗ ತೆಗೆಯುವಾಗ ಈ ಎಲೆ ಸಿಕ್ಕಿದ್ದು" ಎಂದು ತನಿಯ ಉತ್ತರಿಸಿದ. " ನೀವು ಬಹುಶಃ ಎಂಟನ್ನು ಹಾಕಿರಬೇಕು. ಇಲ್ಲವಾದರೆ ನನಗೆ ಈ ಎಲೆ ಹೇಗೆ ಬಂತು ?"

"ನೀನು ಕದ್ದಿರಬೇಕು."

"ನಿನ್ನ ಕೈಗೆ ಅದು ಹಾರಿರಲೂಬಹುದು" ಎಂದ ಮತ್ತೊಬ್ಬ.

"ಹಾಗೆಲ್ಲ ನೀವು ಇಲ್ಲದ್ದನ್ನು ಹೇಳಿದರೆ ನಾನು ಆಡಲಾರೆ. ನಾನು ಹೋಗುತ್ತೇನೆ" ಎನ್ನುತ್ತ ತನಿಯ ತನ್ನ ಕೈಯಲ್ಲಿದ್ದ ಎಲೆಗಳನ್ನೆಲ್ಲ ನೆಲಕ್ಕೆಸೆದ.

"ಹೂಂ !" ಎಂದು ಮೂವರೂ ಅವನನ್ನು ಹಿಡಿದುಕೊಂಡರು. "ನಮ್ಮ ಹಣವನ್ನೆಲ್ಲ ಒಳಗೆ ಹಾಕಿ ಈಗ ಓಡುತ್ತೀಯಾ ಕಳ್ಳ? ಒಳ್ಳೆಯ ಮಾತಿನಿಂದ ಆಡಿದೀ, ಆಡಿದೀ ! ಇಲ್ಲವಾದರೆ ನಮ್ಮ ಹಣವನ್ನು ಇಲ್ಲಿ ಇಟ್ಟು ಹೋಗು. ಇಗೋ ಎಲೆಯನ್ನು ಹಿಡಿ, ಬೇಗನೆ ಹಿಡಿ."

ತನಿಯ ಅವರ ಬಲಾತ್ಕಾರವನ್ನು ಎದುರಿಸಲು ಶಕ್ತನಿರಲಿಲ್ಲ. ಬದಲಾಗಿ ಪುನಃ ಎಲೆಗಳನ್ನು ತೆಗೆದುಕೊಂಡು ಆಡತೊಡಗಿದ. ಅವರ ಪೈಕಿ ಇಬ್ಬರೂ ಮೊದಲೇ ಅವನ ಪರಿಚಯದವರಿದ್ದು ಅವರ ಗುಣವನ್ನು ಅವನು ಸಂಪೂರ್ಣ ಅರಿತವನಾದ್ದರಿಂದ ಮತ್ತೆ ಮಾತಾಡಲಿಲ್ಲ.

ನಾಯ್ಕರು ನಾಲ್ಕು ಜನರಿಗೂ ಚಹ ಮಾಡಿ ತಂದು ಕೊಟ್ಟು ಅವರಿಂದ ಹಣ ಇಸಕೊಂಡು ಹೋದರು.

ಒಂದು ಆಟ ಮುಗಿದೊಡನೆ ಮಾರಪ್ಪ ತನಿಯನನ್ನು ಮನೆಗೆ ಹೋಗೋಣವೆಂದ. ತನಿಯ ಇನ್ನೊಂದು ಕಡೇ ಆಟವನ್ನಾಡಿ ಹೋಗುವ ಎಂದ.

ಮಾರಪ್ಪ ಕಿಟಕಿಯ ಕಡೆ ಪುನಃ ನೋಡುವಾಗ ರಮಾ ಅವನನ್ನು ನೋಡುತ್ತಿದ್ದಳು. ಅವನ ಕಣ್ಣುಗಳು ಅತ್ತ ತಿರುಗಿದೊಡನೆಯೇ ಅವಳು ನಸುನಕ್ಕು ಒಳಗೆ ಹೋಗಿ ಬಿಟ್ಟಳು. ಅವನಿಗೆ

ನಾಯ್ಕರೊಡನೆ ಅವಳ ವಿಚಾರ ಕೇಳಿ ಬಿಡೋಣವೆಂದೆನಿಸಿತು. ಆದರೆ ಅವರು ಯಾವ ಅರ್ಥ ಕಲ್ಪಿಸುವರೋ ಎಂದು ಅವನಿಗೆ ಹೆದರಿಕೆಯಾಯಿತು.

ತನಿಯನಿಗೆ ಮೂರು ಜೋಡಿಗಳಾಗಿವೆ. ಇನ್ನೊಂದು ಜೋಡಿಗಾಗಿ ಅವನು ಪರಿತಪಿಸುತ್ತಿದ್ದ.

ಮೂರು ಎಕ್ಕಗಳು, ಮೂರು ಏಳುಗಳು, ಒಂದು ಆಟೀನ್ ಹತ್ತು, ಗುಲಾಮ, ರಾಣಿ ಮತ್ತೆ ಎರಡು ರಾಜರು, ಒಂದು ಹತ್ತು ತನಿಯನ ಕೈಯ್ಯಲ್ಲಿದ್ದುವು.

ಆಟ ತಿರುಗುತ್ತಿತ್ತು ಒಂದೇ ಸವನೆ. ಎಂಟಾಣೆಯ ಪಣವಾಗಿತ್ತು.

ಎದುರಾಳಿ ಒಂದು ಹತ್ತನ್ನು ಬಿಸುಟ. ರಾಜನನ್ನು ಹೆಕ್ಕಿಕೊಂಡ.

ತನಿಯ ಹತ್ತನ್ನು ಹೆಕ್ಕಿಕೊಂಡ. ಒಬ್ಬ ರಾಜನನ್ನು ಬಿಸುಟ.

ಎದುರಾಳಿ ರಾಣಿಯನ್ನು ಬಿಸಾಡಿದ. ಗುಲಾಮನನ್ನು ಹೆಕ್ಕಿಕೊಂಡ.

ತನಿಯ ರಾಣಿಯನ್ನು ಹೆಕ್ಕಿ ರಾಜನನ್ನು ಬಿಸಾಡಿದ.

ಅದನ್ನು ಅವನ ಬದಿಯವ ಒಮ್ಮೆಲೇ ಹೆಕ್ಕಿದ.

ತನಿಯನಿಗೆ ಭಯವಾಯಿತು. ಹಿಂದೆ ಅವನು ಬಿಸುಟ ರಾಜನನ್ನು ಅವನೇ ಹೆಕ್ಕಿದ್ದ.

ಅವನು ಗೆದ್ದರೆ ಎರಡು ಮೂರು ರೂಪಾಯಿ ಹೋಗಬಹುದು.

ಪುನಃ ಎದುರಾಳಿ ಗುಲಾಮನನ್ನು ಬಿಸುಟ.

ತನಿಯ ದೀರ್ಘ ಕಾಲ ಯೋಚಿಸಿ ಗುಲಾಮನನ್ನು ಹೆಕ್ಕಿದ. ಮೂರು ಹತ್ತುಗಳಾದುವು. ಎರಡು ರಾಣಿ, ಎರಡು ಗುಲಾಮರಾದರು. ಹೋದರೆ ಹೋಯಿತೆಂದು ಒಂದು ರಾಣಿಯನ್ನು ಬಿಸುಟ.

ಅವನ ಬದಿಯವ ಅದನ್ನು ಹೆಕ್ಕಿಕೊಂಡು ಒಂದು ನಾಲ್ಕನ್ನು

ಬಿಸುಟ.

ಎದುರಾಳಿ ಇನ್ನೊಂದು ರಾಣಿಯನ್ನು ಬಿಸುಟ. ಅವನು ಒಂದು ಹತ್ತನ್ನು ಹೆಕ್ಕಿದ.

ತನಿಯ ತುಂಬ ಆಲೋಚನೆ ಮಾಡಿದ. ತನ್ನ ಬದಿಯ ಎದುರಾಳಿ ಯಾವ ಎಲೆಗಳ ಸೆಟ್ ಮಾಡುವನೆಂದೇ ಅವನಿಗೆ ತಿಳಿಯಲಾಗಲಿಲ್ಲ. ತಾನು ಬಿಸಾಡಿದ್ದನ್ನೇ ಅವನು ಮತ್ತೆ ಬಿಸಾಡುತ್ತಾನೆ. ಅಂತೂ ಆ ರಾಣಿಯನ್ನು ಹೆಕ್ಕಿದರೂ ತನಗೇನೂ ಪ್ರಯೋಜನವಿಲ್ಲ. ಅವನು ಒಂದು ಹತ್ತನ್ನು ಹಿಡಿದುಕೊಂಡು ಏನು ಮಾಡಬಹುದು? ಮುಂದಿನ ಆಟದಲ್ಲಿ ಹತ್ತನ್ನು ಬಿಸಾಡದಿರಲಾರನೆಂದು ಭಾವಿಸಿ ಅದನ್ನು ಹಾಗೆಯೇ ಬಿಟ್ಟ.

ಮುಂದಿನ ಸಲ ಎದುರಾಳಿ ಒಂದು ಎಂಟನ್ನು ಬಿಸುಟ. ಅದು ಕ್ಲಾವರ್ ಎಂಟು.

ತನ್ನೊಡನೆ ಕ್ಲಾವರ್ ಹತ್ತು ಇಲ್ಲ. ಕ್ಲಾವರ್ ಗುಲಾಮ ಇದೆ. ಅವನು ಬರೇ ಹತ್ತನ್ನು ಹಿಡಿದುಕೊಂಡು ಏನು ಮಾಡಲೂ ಸಾಧ್ಯವಿಲ್ಲ. ಬಹುಶಃ ಅವನು ತನ್ನ ಎಲೆಯನ್ನು ನೋಡಿರಬಹುದು!

ಮುಂದಿನ ಸಲ ಎದುರಾಳಿ ಕ್ಲಾವರ್ ಏಳನ್ನು ಬಿಸುಟ. ತನಿಯ ಅದನ್ನು ಬೇಗನೆ ಹೆಕ್ಕಿಕೊಂಡು ಒಂದು ರಾಣಿಯನ್ನು ಹಾಕಿದ.

ಅದನ್ನೂ ಅವನಾಚೆ ಕುಳಿತಿದ್ದವ ಹೆಕ್ಕಿಬಿಟ್ಟ. ಅವನು ಮೊದಲೇ ಎರಡು ರಾಣಿಗಳನ್ನು ಹೆಕ್ಕಿದುದು ತನಿಯನಿಗೆ ನೆನಪಿತ್ತು. ಈಗ ಆಟ ಹೋಯಿತೆಂದು ತನಿಯ ನೆನೆಸಿದ.

ಮತ್ತೆ ಅವನ ಈಚೆ ಬದಿಯವನ ಸರದಿ ಬಂತು. ಅವನು ಬಹಳ ಯೋಚಿಸುತ್ತಿದ್ದ.

ಆಗ ಹೊರಗಿನಿಂದ ಒಂದು ಮೋಟರಿನ ಹಾರ್ನು ಕೇಳಿತು. ನಾಯ್ಕರು ನೋಡುತ್ತಿದ್ದಂತೆಯೇ ಮೋಟರು ಅವರ ಹೊಟೇಲಿನ

ಮುಂದೆಯೇ ನಿಂತಿತು.

ಎದುರಾಳಿ ಹತ್ತನ್ನು ಕೊನೆಗೆ ಹಾಕಿದ.

ತನಿಯನಿಗೆ ಒಮ್ಮೆಲೇ ಸಂತೋಷ ಉಕ್ಕೇರಿತು. ಅದನ್ನು ಕೂಡಲೇ ಅವನು ಅಮುಕುವಾಗ ಹಿಂದಿನಿಂದ ಯಾರೋ ಅವನ ಕುತ್ತಿಗೆಯನ್ನು ಹಿಡಿದುಕೊಂಡಂತಾಯಿತು. ಅವನೊಡನೆ ಕುಳಿತಿದ್ದವರು ಅಷ್ಟರಲ್ಲೇ ಕಾಲುಕಿತ್ತಿದ್ದರು. ಮಾರಪ್ಪನೂ ದೂರ ನಿಂತಿದ್ದ.

" ಹಿಡಿ ಬೋಳಿಮಗನನ್ನು ಕಟ್ಟಿಹಾಕಿ! ಎಂಟ್ನೂರಿಪ್ಪತ್ತು, ಅವನ ಕೈಯ್ಯಲ್ಲಿದ್ದ ಹಣವನ್ನು ಎಳೆದು ಈಚೆ ಕೊಡು. ಆ ಓಡಿದ ಕಳ್ಳರನ್ನು ಹಿಡಿಯಿರಿ ಬೇಗ. ಇನ್ನೂರೆಪ್ಪತ್ತೆರಡು, ನಾಲ್ನೂರ್ರೊಂಭತ್ತು, ಓಡಿ ಓಡಿ ಬೇಗ."

ತನಿಯನ ಕುತ್ತಿಗೆಯನ್ನು ಅಲ್ಲಿಂದಲೇ ನೆಲಕ್ಕೆ ಒತ್ತಿ ಬಗ್ಗಿಸಿದರು. ಅವನಿಗೆ ಹಿಂದೆ ನೋಡಲಿಕ್ಕೆ ಕೂಡಾ ಸಾಧ್ಯವಿರಲಿಲ್ಲ.

" ಅಯ್ಯೋ ಸ್ವಾಮಿ, ಬಿಟ್ಟು ಬಿಡಿ ! ದಮ್ಮಯ್ಯ, ದಮ್ಮಯ್ಯ! ಎಲ್ಲಾ ಹಣ ಕೊಟ್ಟು ಬಿಡುತ್ತೇನೆ" ಎಂದು ಕೂಗಿದನವ.

ಅವನೆದುರಲ್ಲಿ ಪೋಲೀಸ್ ಅಧಿಕಾರಿ ನಿಂತು. ದವಡೆಗೊಂದು ಪೆಟ್ಟನ್ನೇರಿಸಿದ.

" ದಮ್ಮಯ್ಯ ಸ್ವಾಮಿ, ದಮ್ಮಯ್ಯಾ....!"

" ಅವರು ಓಡಿ ಹೋದವರು ಯಾರೆಂದು ಒಳ್ಳೇ ಮಾತಿನಲ್ಲಿ ಹೇಳಿಬಿಡು ಕಳ್ಳ. ಏನು ಈ ಊರಲ್ಲಿ ಯಾರೂ ಹೇಳುವವರು ಕೇಳುವವರು ಇಲ್ಲವೆಂದು ಭಾವಿಸಿದೆಯಾ ? ಎಂಟ್ನೂರಿಪ್ಪತ್ತು, ಈ ಕಳ್ಳನಿಗೆ ಎರಡು ಕೊಡು. ಇವನು ಬಾಯಿ ಬಿಡೋದಿಲ್ಲ, ರ್‍ಯಾಸ್ಕಲ್ !"

ತನಿಯನ ಬೆನ್ನುಹುರಿಯೇ ಒಮ್ಮೆಲೇ ಮುರಿದಂತಾಯಿತು. ಒಂದೇ ಪೆಟ್ಟಿನಲ್ಲಿ ಅವನಿಗೆ ಕಣ್ಣು ಕತ್ತಲೆ ಹೋಯಿತು.

ಉಳಿದವರನ್ನು ಅಟ್ಟಿಕೊಂಡು ಹೋದ ಮೂರು ಜನ ಪೋಲೀಸರೂ ಹಿಂದೆ ಬಂದರು. ಅವರು ಓಡಿ ಹೋಗಿ ಬಿಟ್ಟರಂತೆ.

"ನೀವು ಯಾಕೆ ಮತ್ತೆ ಕತ್ತೆಗಳೆ? ಅವರನ್ನು ನಿಮಗೆ ಹಿಡಿಯ ಲಿಕ್ಕಾಗಲಿಲ್ಲ. ಇವನು ಒಬ್ಬನಾದರೂ ನನ್ನಿಂದಾಗಿ ಸಿಕ್ಕಿಬಿದ್ದ. ಇಲ್ಲವಾದರೆ ನೀನೂ ಕಾಲು ಕೊಡುತ್ತಿದ್ದಿಯಲ್ಲ ನಾಯಿ?"

ಎನ್ನುತ್ತ ಅಧಿಕಾರಿಗಳು ಬೂಟ್ಸಿನಲ್ಲಿ ತನಿಯನಿಗೆ ಒಂದು ಒದೆದರು.

ಅವನು ಕೂಗುತ್ತ ಅತ್ತಿತ್ತ ನೋಡಿದ. ಮಾರಪ್ಪ ರಸ್ತೆಯಿಂದ ಹೋಗುತ್ತಿದ್ದ. ನಾಯ್ಕರು ಕಾಫಿ ಮಾಡುತ್ತಿದ್ದರು. ಪೋಲೀಸಿ ನವರು ಇಸ್ಪೀಟಿನ ಎಲೆಗಳನ್ನೂ, ಅವನೊಡನಿದ್ದ ಹಣವನ್ನೂ ಗಂಟು ಕಟ್ಟುತ್ತಿದ್ದರು.

"ಏ ಹೊಟೇಲಿನವರೇ, ನಮಗೆಲ್ಲ ಸ್ವಲ್ಪ ಕಾಫಿ ಕೊಡಿ" ಎಂದು ಪೋಲೀಸಿನವನೊಬ್ಬ ಹೇಳಿದ.

"ತರ್ತೇನೆ ಸ್ವಾಮಿ ತಯಾರಾಯಿತು," ಎಂದು ನಾಯ್ಕರು ಎಡವುತ್ತ ನುಡಿದರು.

ತನಿಯನ ಕೈಗೆ ಬೇಡಿ ಹಾಕಿದರು. ಅವನ ಕಣ್ಣಿನಿಂದ ಒಂದೇ ಸವನೆ ಕಣ್ಣೀರು ಹರಿಯುತ್ತಿತ್ತು. ಮೈಯೆಲ್ಲ ಬೆವರಿ ಹೋಗಿ ಅದನ್ನು ಉಜ್ಜಿಕೊಳ್ಳಲು ಕೂಡಾ ಅವನಿಗೆ ಸಾಧ್ಯವಿರಲಿಲ್ಲ. ಕುತ್ತಿಗೆಯ ಸಂದುಗಳು ಮತ್ತು ಬೆನ್ನು ಉರಿಯುತ್ತಿದ್ದುವು. ಅವನು ಮುಖ ಕೆಳಗೆ ಹಾಕಿದ.

ನಾಯ್ಕರು ಎಲ್ಲರಿಗೂ ಕಾಫಿಯನ್ನು ತಂದಿಟ್ಟರು.

ಸಬ್ ಇನ್ಸ್‌ಪೆಕ್ಟರರು ಒಂದು ಗ್ಲಾಸನ್ನು ಚೀಪುತ್ತ, "ಏನ್ರೀ, ಇಲ್ಲಿ ಆ ಕೇಡಿ ಮಮ್ಮದೆ ತಿರುಗಾಡುತ್ತಿದ್ದಾನಂತೆ ಅಲ್ಲವೆ? ನಿಮ್ಮ ಹೊಟೇಲಲ್ಲೇ ಜುಗಾರಿ ಆಡುತಾನಂತೆ" ಎಂದು ಕೇಳಿದರು.

"ಇಲ್ಲ ಸ್ವಾಮಿ" ನಾಯ್ಕರು ಕೈಗಳನ್ನು ತಿಕ್ಕುತ್ತ ಹೇಳಿದರು.

"ಇಲ್ಲಿ ಮಮ್ಮದೆ ಬಂದಿಲ್ಲ. ನಾನು ಅವನನ್ನು ನಮ್ಮ ಜಾತ್ರೆಯ ಸಮಯ ನೋಡಿದ್ದೆ, ಮತ್ತೆ ಇಲ್ಲ."

"ಹುಂ, ನಿಮ್ಮದು ಸುಳ್ಳು ಇದೆಯಲ್ಲ? ಇದಕ್ಕೆ ಸ್ವಲ್ಪ ಕಾಫಿಯ ಡಿಕೋಕ್ಶನ್ ಹಾಕಿ. ಹೂಂ ತಲೆನೋಯುತ್ತಿದೆ. ರಾತ್ರೆಯಿಂದ ತಿರುಗಾಡುತ್ತಿದೇವೆ."

ನಾಯ್ಕರು ಒಳಗೆ ಹೋಗಿ ಇನ್ನೊಂದು ಲೋಟ ಕಾಫಿ ಮಾಡಿ ತಂದು,

"ಆ ಮಣಿಹಳ್ಳದ ಖೂನಿಯಲ್ಲಿ ಯಾರಾದರೂ ಸಿಕ್ಕಿದರೆ ಸ್ವಾಮಿಾ ?" ಎಂದು ಅಂಜುತ್ತಂಜುತ್ತ ಕೇಳಿದರು.

"ಅದೇ ಆ ಬೋಳಿಮಕ್ಕಳನ್ನು ಹುಡುಕುವ ಕೆಲಸದಲ್ಲಿ ನಮಗೆಲ್ಲ ತಲೆ ಕರಡಾಗಿದೆ. ಆದರೆ ನೀವು ಇನ್ನು ಇಲ್ಲಿ ಯಾರಿಗೂ ಆಡಲಿಕ್ಕೆ ಸ್ಥಳ ಕೊಡಬೇಡಿ, ತಿಳಿಯಿತೆ ? ಮುಂಚೆ ಎರಡು ಸಲ ಹೇಳಿದ್ದೇನೆ. ಈಗ ಮಮ್ಮದೆ ಓಡಿಬಿಟ್ಟ. ಇರಲಿ."

"ಇಲ್ಲ ಸ್ವಾಮಿ" ನಾಯ್ಕರು ಬಹಳ ವಿನಯದಿಂದ ಅಂದರು "ಇವರೇನೋ ಸೆಟ್ ಆಡುತ್ತೇವೆ. ಹಣ ಇಟ್ಟು ಆಡೋದಿಲ್ಲವೆಂದರು. ಹಾಗೆ ನಾನು ಆದೀತೆಂದಿದ್ದೆ. ಹಣದ ಆಟವನ್ನು ನಾನು ಬಿಡುತ್ತೇನೆಯೆ ?"

ಕಾಫಿ ಕುಡಿದಾದ ಬಳಿಕ ಸಬ್ ಇನ್ಸ್‌ಪೆಕ್ಟರರು ಕಿಸೆಯಿಂದ ಒಂದು ಪುಸ್ತಕವನ್ನು ತೆಗೆದು ಅದನ್ನು ನೋಡಿದರು. ಮತ್ತೆ ಪೋಲೀಸಿನವನೊಡನೆ ಎಷ್ಟು ಹಣ ಸಿಕ್ಕಿತೆಂದು ಕೇಳಿದರು. ಅವನು ಹದಿನೇಳು ರೂಪಾಯಿ ಆರುವರೆ ಆಣೆಗಳನ್ನು ಅವರ ಬಳಿ ತಂದಿಟ್ಟ.

"ನೀನೇನಾದರೂ ಕಿಸೇಗೆ ಹಾಕಿದ್ದೀಯಾ ?" ಎಂದು ಅವರು ಕಣ್ಣರಳಿಸಿದರು.

"ಇಲ್ಲ ಸಾರ್" ಎಂದು ಸಟ್ಟನೆ ಉತ್ತರ ಬಂತು.

ಆ ಹಣವನ್ನು ಸಬ್‌ಇನ್ಸ್‌ಪೆಕ್ಟರರು ಲೆಕ್ಕ ಮಾಡುವಾಗ

ತನಿಯನ ಬಾಯಲ್ಲಿ ನೀರೂರುತ್ತಿತ್ತು. ಆದರೆ ಅವನು ಕೈದಿ. ಆ ಹಣ ಅವನದಲ್ಲ.

ಸಬ್‌ಇನ್ಸ್‌ಪೆಕ್ಟರರು ನಾಯ್ಕರೊಡನೆ ತನಿಯನ ವಿಚಾರ ಕೇಳಿದರು. ನಾಯ್ಕರು ಆದಷ್ಟು ಜಾಗ್ರತೆಯಿಂದ, ತನಿಯನು ನಿರಪರಾಧಿಯೆಂದು ವಿವರಿಸಿದರು. ಆದರೆ ಸಬ್‌ಇನ್ಸ್‌ಪೆಕ್ಟರರು ಅವರ ಮಾತುಗಳನ್ನು ಕಿವಿಗೆ ಹಾಕಿಕೊಳ್ಳಲಿಲ್ಲ.

"ನಮಗೆ ಕೇಸ್ ಸಿಕ್ಕದೆ ಏಳೆಂಟು ದಿನಗಳಾದುವು. ಆ ಮನ್ಮುದೆಯನ್ನು ಹಿಡಿಯದಿದ್ದರೆ ಬಹಳ ಕಷ್ಟ. ಈಗ ಇವನು ಏನೇ ಆಗಿರಲಿ, ನಾವು ಇವನನ್ನು ಬಿಡುವಂತಿಲ್ಲ."

—ಎನ್ನುತ್ತ, ತನಿಯನನ್ನು ಪೋಲೀಸ್ ಜೀಪಿಗೆ ಕರೆದು ಕೊಂಡು ಹೋದರು. ಅವನು ಮಧ್ಯದಲ್ಲಿ ಕುಳಿತ. ಅವನ ಆಚೆ ಈಚೆ ಕಡೆಗಳಲ್ಲಿ ಬಂದೂಕು ಹಿಡಿದ ಪೋಲೀಸರು ಕುಳಿತುಕೊಂಡರು. ಪರಿಣಾಮವಾಗಿ ತನಿಯನಿಗೆ ನಾಯ್ಕರನ್ನು ಕತ್ತು ತಿರುಗಿಸಿ ಪುನಃ ಒಮ್ಮೆ ನೋಡುವ ಧೈರ್ಯವೂ ಬರಲಿಲ್ಲ.

ಜೀಪ್ ಹೊರಡುವಾಗ ಸಬ್‌ಇನ್ಸ್‌ಪೆಕ್ಟರರು ನಾಯ್ಕರನ್ನು ಬಳಿಗೆ ಕರೆದು, "ನೀವು ಸಾಕ್ಷಿ ಹೇಳಬೇಕಾದೀತು, ತಿಳಿಯಿತೆ?" ಎಂದರು.

"ಹ್ವೋ ಸ್ವಾಮಿ, ಅದಕ್ಕೇನಡ್ಡಿ ?" ಎಂದು ನಾಯ್ಕರು ತಲೆದೂಗಿದರು.

ಜೀಪ್ ಮುಂದರಿಯಿತು.

"ತನಿಯನನ್ನು ಈಗ ಬೇಕಾದರೆ ಬಿಡಿಸಬಹುದಿತ್ತು. ಇಪ್ಪತ್ತೈದು ರೂಪಾಯಿ ಕೊಟ್ಟರೆ ಸಾಕಿತ್ತು. ಆ ಸಬ್‌ಇನ್ಸ್‌ಪೆಕ್ಟರರು ನನ್ನ ಪರಿಚಯದವರು" ಹೀಗೆಂದು ನಾಯ್ಕರು ಅಲ್ಲಿ ಕೂಡಿದವರಿಗೆ ಹೇಳಿದರು.

"ಅದೆಲ್ಲ ಇರಲಿ ನಾಯ್ಕರೆ, ನಿಮ್ಮ ಕಾಫಿಯ ಹಣ ಬಂತೇ ?" ಎಂದು ಒಬ್ಬ ಪ್ರಶ್ನಿಸಿದ.

"ಹಾಂ. ಹಾಗೆಲ್ಲ ಇಲಿ ಹೆಗ್ಗಣಗಳು ತಿಂದು ಹೋಗುವುದನ್ನು ನಾವು ಲೆಕ್ಕವಿಟ್ಟರೆ ಏನು ಕಡಿಮೆ !"

ಎಂದು ನಾಯ್ಕರು ವಿಮೋಚನೆಯ ನಗುವನ್ನು ನಕ್ಕರು.

೭

ಮಾರಪ್ಪನು ನಾಯ್ಕರ ಹೊಟೇಲಿನಿಂದ ಹೊರಬಿದ್ದವ ನೇರ ವಾಗಿ ತನ್ನ ಮನೆಗೆ ಹೋಗಿದ್ದ. ಅಲ್ಲಿ ಗಾಣದಲ್ಲಿ ಎಣ್ಣೆ ತೆಗೆಸಲಿಕ್ಕೆಂದು ಎರಡು ಮೂರು ಜನ ಬಂದು ಅವನನ್ನು ಕಾಯುತ್ತಿದ್ದರು. ಮೆಲ್ಲನೆ ತಂದೆಗೆ ತಿಳಿಯದಂತೆ ಅವನು ಒಳಗೆ ಹೋಗಿ ಊಟ ಮಾಡಿ ಗಾಣದ ಬಳಿಗೆ ಬಂದ. ಕೂಡಲೇ ಅವನ ಮೇಲೆ ಎಲ್ಲರೂ ಹುಲಿಗಳಂತೆ ಹಾರಿ ಬಿದ್ದರು. ಎಲ್ಲರಿಗೂ ಅಂದೇ ಎಣ್ಣೆಯಾಗಬೇಕಂತೆ.

ಅವನು ಹೊರಗೆ ಹೋಗಿ ಎತ್ತನ್ನು ತಂದು ಗಾಣದ ತುದಿಗೆ ಕಟ್ಟಿದ. ಒಬ್ಬೊಬ್ಬರದ್ದೇ ತೆಂಗಿನ ಕಾಯಿಗಳನ್ನು ಪಡೆದು ಅವನ್ನು ಬೇರೆ ಬೇರೆ ಇಟ್ಟ. ಒಬ್ಬನೊಡನೆ ಸ್ವಲ್ಪ ಎಳ್ಳು ಇತ್ತು.

ಅವನು ಗಾಣಕ್ಕೆ ತೆಂಗಿನಕಾಯಿಯನ್ನು ಮುಕಿಸತೊಡಗಿದ. ಕೆಲವು ಸರಿಯಾಗಿ ಒಣಗಿರಲಿಲ್ಲ. ಅವನ್ನು ಸರಿಯಾಗಿ ತುಂಡು ಮಾಡಿರಲೂ ಇಲ್ಲ. ಅಂತೂ ಎತ್ತು ತಿರುಗುತ್ತಿತ್ತು. ಗಾಣದಲ್ಲಿ ಕೆಳಗೆ ಎಣ್ಣೆ ಸುರಿಯುತ್ತಿತ್ತು. ಹಿಂಡಿ ಮೇಲೆ ಮೇಲೆ ಬರುತ್ತಿತ್ತು.

ಕೊನೆಯವನ ಎಳ್ಳೆಣ್ಣೆ ತೆಗೆಯುವಾಗ ಕತ್ತಲಾಯಿತು. ಹೇಗೋ ಎಲ್ಲರ ಎಣ್ಣೆ ಮತ್ತು ಹಿಂಡಿಗಳನ್ನು ಅವರವರ ಪಾತ್ರೆಗಳಲ್ಲಿ ಹಾಕಿ ಕೊಟ್ಟು ಅವರಿಂದ ಮಜೂರಿ ಪಡಕೊಂಡ. ಮತ್ತೆ ಸ್ನಾನ

ಮಾಡಿ, ಮೈಯ್ಯಲ್ಲಿ ಅಂಟಿದ್ದ ಎಣ್ಣೆಯನ್ನೆಲ್ಲ ತೊಳೆದು ಊಟ ಮಾಡಿ ಅಂಗಡಿಗೆ ಹೋಗಿ ಬರುತ್ತೇನೆಂದು ಹೇಳಿ ತನಿಯನ ಮನೆಯತ್ತ ನಡೆದ.

ದಾರಿಯಲ್ಲಿ ಹೋಗುತ್ತಿದ್ದಾಗ ಅವನಿಗೆ ತನಿಯನ ಸುದ್ದಿಯನ್ನು ಹೊನ್ನಮ್ಮನಿಗೆ ಹೇಗೆ ತಿಳಿಸಬೇಕೆಂದು ಗೊತ್ತಾಗಲಿಲ್ಲ. ಅವನನ್ನು ಪೋಲೀಸರು ಹಿಡಿದು ಹೊಡೆದರು, ಅವನ ಮೇಲೆ ಫಿರ್ಯಾದು ಮಾಡುತ್ತೇವೆಂದು ಕೊಂಡು ಹೋದರು — ಇವನ್ನೆಲ್ಲ ಹೇಳಿದರೆ ಅವಳೇನು ಮಾಡುವಳೋ ಎಂದು ಅವನಿಗೆ ತುಸು ಸಂಶಯವಾಯಿತು. ಒಮ್ಮೆ ಅವಳ ಮನೆಗೆ ತಾನು ಹೋಗದಿರುವುದೇ ಲೇಸೆಂದೂ ಭಾವಿಸಿದ. ಆದರೆ ಮತ್ತೆ ಅವಳು ಇನ್ನೂ ತನಿಯನ ದಾರಿ ಕಾಯುತ್ತ ಕುಳಿತಿರಲೂ ಬಹುದೆಂದು ಅವನಿಗೆ ಹೊಳೆಯಿತು. ಹೇಗಾದರೂ ಈ ವರ್ತಮಾನ ವನ್ನು ಆಕೆಗೆ ತಿಳಿಸದಿದ್ದರೆ ಆಕೆಗೆ ಗಾಬರಿಯಾಗಬಹುದೆಂದು ನೇರ ವಾಗಿ ಅವಳಲ್ಲಿಗೇ ಹೋದ.

ಅವನ ಒಂದು ಎಣಿಕೆ ನಿಜವಾಗಿತ್ತು: ಅವಳಿಗೆ ಆತನಕ ತನಿಯನಿಗೆ ಸಂಭವಿಸಿದ ದುರಂತದ ವರ್ತಮಾನ ತಲುಪಿರಲಿಲ್ಲ. ಆದ್ದರಿಂದ ಅವಳು ಒಳಗೆ ಅಡುಗೆ ಮಾಡಿಟ್ಟು ಅವನ ಬರವನ್ನೇ ಕಾಯುತ್ತಿದ್ದಳು. ಹೊರಗೆ ಜಗಲಿಯಲ್ಲಿ ಒಂದು ದೀಪ ಉರಿಯು ತ್ತಿತ್ತು.

ಮಾರಪ್ಪ ಅಂಗಳದಲ್ಲಿ ನಿಂತು ಅವಳನ್ನು ಕರೆದ. ಅವಳಿಗೆ ಆಶ್ಚರ್ಯವಾಯಿತು. ಅವನೆಂದೂ ಈ ಸಮಯದಲ್ಲಿ ಮನೆ ಬಿಟ್ಟು ಹೊರಡುವವನಲ್ಲ. ಅವಳು ದೀಪ ಹಿಡಿದುಕೊಂಡು ಜಗಲಿಯ ಬಳಿಗೆ ಬಂದು,

"ಅವರು ಬರಲಿಲ್ಲವೆ?" ಎಂದು ಕೇಳಿದಳು.

"ಊಹೂಂ" ಎಂದು ಅವನು ಉತ್ಸಾಹರಹಿತನಾಗಿ ಉತ್ತರಿಸಿದ.

"ಏನಾಯಿತು, ನೀನು ಅವರ ಒಟ್ಟಿಗೆ ಇರಲಿಲ್ಲವೆ ?"

"ಇದ್ದೆ. ಅವನನ್ನು ಪೋಲೀಸರು ಕೊಂಡು ಹೋದರು."

"ಏನು ? ಪೋಲೀಸರು ?...." ಹೊನ್ನಮ್ಮ ಅವಾಕ್ಕಾಗಿ ಪ್ರಶ್ನಿಸಿದಳು.

"ಹೌದು ಪೋಲೀಸರು" ಎನ್ನುತ್ತ ಮಾರಪ್ಪ ಜಗಲಿಗೆ ಬಂದ. "ನಾವು ಹೋದವರು ನಾಯ್ಕರ ಹೊಟೇಲಿನಲ್ಲಿ ಕಾಫಿ ಕುಡಿದೆವು. ತನಿಯಣ್ಣ ಮತ್ತೆ ಇಸ್ಪೀಟು ಆಡಲಿಕ್ಕೆ ಕುಳಿತ. ಸ್ವಲ್ಪ ಸಮಯದ ಬಳಿಕ ಪೋಲೀಸರು ಬಂದು ಅವನನ್ನು ಹಿಡಿದುಕೊಂಡು ಹೋದರು.

"ಯಾಕೆ ? ಅವರು ಯಾರಿಗಾದರೂ ಹೊಡೆದರೆ ?"

"ಇಲ್ಲ ಹಣವಿಟ್ಟು ಇಸ್ಪೀಟು ಆಡುವುದು ಕಾನೂನಿಗೆ ವಿರುದ್ಧವಂತೆ. ಹಾಗೆ ಅವನನ್ನು ಕೈದು ಮಾಡಿದರು."

ಹೊನ್ನಮ್ಮ ಒಮ್ಮೆಯೇ ಅಳಲಿಕ್ಕೆ ಪ್ರಾರಂಭಿಸಿದಳು.

"ನಾನು ಅವರಿಗೆ ಹಿಂದೆಯೇ ಎಷ್ಟೋ ಸಲ ಹೇಳಿದ್ದೆ, ಈ ಹಣದ ಆಟ ಬೇಡವೆಂದು. ಅದಕ್ಕಾಗಿ ಎಷ್ಟೋ ಹಣವನ್ನು ಹಾಳು ಮಾಡಿದರು. ಇನ್ನು ಜೈಲಿಗೆ ಹೋಗದಿದ್ದರೆ ಸಾಕು. ಅಯ್ಯೋ ನನ್ನವಸ್ಥೆಯೇ !" ಎಂದು ಅವಳು ಹಣೆಗೆ ಬಡಿದುಕೊಂಡಳು.

"ಅವನನ್ನು ಇವತ್ತೇ ಬಿಡಲೂ ಸಾಕಂತೆ," ಮಾರಪ್ಪ ಸಮಾಧಾನ ಹೇಳಿದ. "ಇಲ್ಲವಾದರೆ ಇನ್ನು ಕೆಲವು ದಿನಗಳಲ್ಲಿ ಜಾಮೀನಿನ ಮೇಲೆ ಬಿಟ್ಟಾರಂತೆ. ನಂಬ್ರವಾದರೆ ಜುಲುಮಾನೆ ಯಾದೀತಂತೆ. ಆ ಹಣವನ್ನು ತೆರದಿದ್ದರೆ ಮಾತ್ರ ಶಿಕ್ಷೆಯಾದೀತಂತೆ".

ಈ ಮಾತುಗಳನ್ನು ಅವನು ತನಿಯನನ್ನು ಕೊಂಡುಹೋಗು ವಾಗ ಅಲ್ಲಿ ನೆರೆದಿದ್ದ ಜನರ ಬಾಯಿಂದಲೇ ಕೇಳಿದ್ದ. ಆಗಲೇ ಅವನಿಗೆ ಹಣವಿಟ್ಟು ಇಸ್ಪೀಟು ಆಡುವುದೂ ತಪ್ಪೆಂದು ಗೊತ್ತಾದುದು ವಿನಃ ಅವನಿಗೆ ಜಾಮೀನು, ಜುಲುಮಾನೆ, ಶಿಕ್ಷೆ ಇತ್ಯಾದಿಗಳ ಕುರಿತಾಗಿ ಒಂದಿಷ್ಟೂ ಮಾಹಿತಿಯಿರಲಿಲ್ಲ.

ಹೊನ್ನಮ್ಮ ಬಿಕ್ಕಿಬಿಕ್ಕಿ ಅಳತೊಡಗಿದಳು.

ಮಾರಪ್ಪನಿಗೆ ಮತ್ತೆ ಅಲ್ಲಿ ನಿಲ್ಲಲಾಗಲಿಲ್ಲ. ಅವನು ಮೆಲ್ಲನೆ ಅಂಗಳಕ್ಕಿಳಿದು ಕತ್ತಲಲ್ಲೇ ಮನೆ ಸೇರಿದ.

ಹೊನ್ನಮ್ಮನಿಗೆ ಅಂದು ಮತ್ತೆ ಊಟ ಮಾಡಲೂ ಆಗಲಿಲ್ಲ, ಸ್ವಲ್ಪ ಸಮಯ ಅತ್ತಳು. ಬಳಿಕ ದೀಪ ನಂದಿಸಿ ಮಲಗಿಕೊಂಡಳು.

ತನ್ನ ಗಂಡನಿಗೆ ಪೋಲೀಸರು ಯಾವ ಯಾತನೆಯನ್ನು ಕೊಡುತ್ತಿರುವರೋ ಎಂದು ಆಕೆಗೆ ಯೋಚನೆಯಾಯಿತು. ಪೋಲೀಸರೆಂದರೆ ಶುದ್ಧ ಕ್ರೂರಿಗಳು, ಕರುಣೆಯಿಲ್ಲದವರು, ಅವಳ ಅಭಿಪ್ರಾಯದಲ್ಲಿ. ಅದೂ ತನ್ನ ಗಂಡನೇನೂ ಕದಿಯಲಿಲ್ಲ, ಖೂನಿ ನಡೆಸಿಲ್ಲ. ಕೇವಲ ಇಸ್ಪೀಟು ಆಡಿದುದು, ಅಷ್ಟೆ. ಅದಕ್ಕಾಗಿ ಏಕೆ ಶಿಕ್ಷೆ? ಪೋಲೀಸರು ಬಹುಶಃ ಲಂಚ ತಿನ್ನಲಿಕ್ಕಾಗಿ ಹೀಗೆ ಮಾಡಿರಬಹುದೆ? ಹಾಗಾದರೂ ಯಾರು ಲಂಚ ಕೊಡುವವರು? ತಾನೇ? ತಾನು ಈ ತನಕ ಪೋಲೀಸ್ ಸ್ಟೇಷನ್ ಕಂಡಿಲ್ಲ, ಮತ್ತೆ ಇಲ್ಲಿ ಯಾರೊಡನೆ ಹೇಳಬಹುದು? ಹೋಗುವುದಾದರೆ ಮಾರಪ್ಪ ಹೋಗಬೇಕು. ಅದೂ ಅವನ ತಂದೆ ಬಿಡಬೇಕಲ್ಲ? ಧನಿಯವರೊಡನೆ ಹೇಳಿದರೆ ಅವರು ಆ ಮಾತನ್ನೇ ಕಿವಿಗೆ ಹಾಕಿಕೊಳ್ಳರು.

ಈ ಯೋಚನೆಗಳೊಡನೆ ಅವಳಿಗೆ ಬೇಸರವೂ ಆಗುತ್ತಿತ್ತು. ಈಗ ತನಗೊಬ್ಬ ಮಗನಿರುತ್ತಿದ್ದರೆ ಅವನೆಲ್ಲ ನೋಡುತ್ತಿದ್ದನಲ್ಲ! ಎಂದೂ ಅವಳಿಗೆ ಹೊಳೆಯಿತು.

ಅವಳೆಂದೂ ರಾತ್ರಿ ಒಬ್ಬಳೇ ಆ ಮನೆಯಲ್ಲಿ ಇದ್ದವಳಲ್ಲ. ಇಂದು ಒಬ್ಬಳೇ ಇರುವಾಗ ಅವಳಿಗೆ ಅವ್ಯಕ್ತವಾದ ಹೆದರಿಕೆಯೂ ಆಗುತ್ತಿತ್ತು.

* * *

ಮಾರಪ್ಪ ಮರುದಿನ ಬೆಳಗ್ಗೆ ಊಟ ತೀರಿಸಿ, ಬಿಳಿಯ ಒಂದು ವಸ್ತ್ರವನ್ನು ಸುತ್ತಿಕೊಂಡು, ಶಾಲನ್ನು ಮತ್ತು ಬನಿಯನ್‌ಗಳನ್ನು ಕಂಕುಳಲ್ಲಿಟ್ಟುಕೊಂಡು ಹೊರಗೆ ಹೊರಟ.

ತಂದೆ ವೆಂಕಪ್ಪನೂ ಅಲ್ಲೇ ಇದ್ದ. ಅವನು ಮಾರಪ್ಪ ಹೋಗುತ್ತಿರುವುದನ್ನು ನೋಡಿ, ಎಲ್ಲಿಗೆ ಹೋಗುವುದೆಂದು ಕೇಳಿದ.

"ಮನೆಯಲ್ಲಿ ಮೆಣಸು ಇಲ್ಲವಂತೆ" ಎಂದು ಮಾರಪ್ಪ ಅಂಜುತ್ತ ಅಂಜುತ್ತ ಉತ್ತರಿಸಿದ.

"ಅದಕ್ಕೆ ಇಷ್ಟೆಲ್ಲ ಶೃಂಗಾರವಾಗಬೇಕೆ? ನಿನ್ನೆಯೂ ಬೆಳಗ್ಗೆ ಹೋದವ ಮತ್ತೆ ಸಂಜೆ ಬಂದಿದ್ದೀ. ಏನು ನಿನ್ನ ಸಮಾಚಾರ? ಹೀಗೆ ನೀನು ದೇವರಿಗೆ ಬಿಟ್ಟ ಬಸವನ ಹಾಗೆ ತಿರುಗಾಡಿದರೆ ಇಲ್ಲಿ ಯಾರು ಕೆಲಸ ಮಾಡುವುದು?" ಎಂದು ವೆಂಕಪ್ಪ ಆರ್ಭಟಿಸಿದ. ಅವನ ಕಣ್ಣುಗಳು ಕೋಪದಿಂದ ಕೆಂಪಗಾಗಿದ್ದುವು.

"ಇಲ್ಲ, ನಿನ್ನೆ ಅಂಗರನ ಒಂದು ಎತ್ತನ್ನು ನೋಡಲಿಕ್ಕೆ ಹೋಗಿದ್ದೆ. ಮಧ್ಯಾಹ್ನವೇ ಹಿಂದಿರುಗಿ ನಾಲ್ಕು ಜನರಿಗೆ ಎಣ್ಣೆ ತೆಗೆದು ಕೊಟ್ಟೆ."

"ಸರಿ, ಸರಿ. ಇನ್ನು ನನ್ನ ಇದಿರು ನಿಂತು ಮಾತಾಡಬೇಡ. ಕೆಲಸ ಸರಿಯಾಗಿ ಮಾಡದಿದ್ದರೆ ನೀನೇ ಭಿಕ್ಷೆಬೇಡಲಿಕ್ಕೆ ಹೋಗುತ್ತೀ. ನನಗೇನು?"

ಮಾರಪ್ಪ ತುಸುದೂರ ಹೋದ ಬಳಿಕ ಕಂಕುಳಲ್ಲಿದ್ದ ಬನಿಯನ್ನನ್ನು ಧರಿಸಿಕೊಂಡ. ಶಾಲನ್ನು ಹೆಗಲಿಗೆ ಹಾಕಿಕೊಂಡ.

ತಂದೆಯ ಮಾತಿನಿಂದ ಅವನಿಗೆ ಸ್ವಲ್ಪ ಕಳವಳವಾಯಿತು. ಅವನು ಒಂದು ಮಾತಾಡಿದರೆ ಅದರೊಡನೆ ಹತ್ತು ನೆನೆಸುವನೆಂದು ಮಾರಪ್ಪನಿಗೆ ಗೊತ್ತೇ ಇತ್ತು. ಈ ತನಕ ತನ್ನನ್ನು ಈ ರೀತಿ ವಿಚಾರಿಸಿದುದಿಲ್ಲ. ಅವನು ತಾನೆಲ್ಲಿ ಹೋಗುತ್ತೇನೆಂದು ನೋಡಲು, ತನ್ನನ್ನು ಹಿಂಬಾಲಿಸಿ ಬರಲೂ ಸಾಕೆಂದು ದಾರಿ ನಡೆಯುವಾಗ ಅನೇಕ ಸಲ ತಿರುಗಿ ತಿರುಗಿ ನೋಡಿದ.

ಅಷ್ಟರಲ್ಲೇ ನಾಯ್ಕರ ಹೊಟೇಲು ಬಂತು. ಮಾರಪ್ಪ ಅದರೊಳಗೆ ಹೊಕ್ಕು ನಾಯ್ಕರೊಡನೆ ಕಾಫಿ ಕೊಡಿ ಎಂದ.

" ಬಿಸಿಬಿಸಿ ಚಕ್ಕುಲಿ ಇದೆ. "ನಾಯ್ಕರೆಂದರು. "ಎರಡು ಚಕ್ಕುಲಿ ಕೊಡಲೇ ? "

" ಹೊಂ " ಎಂದು ಮಾರಪ್ಪ ಮುಂಚಿನ ದಿನ ನೋಡಿದ ಕಿಟಕಿ ಮತ್ತೆ ನೋಡತೊಡಗಿದ. ಸ್ವಲ್ಪ ಸಮಯ ಅಲ್ಲಿ ಯಾರೂ ಕಾಣಲಿಲ್ಲ.

" ಅಂಗಿ ಎಲ್ಲ ಹಾಕಿಕೊಂಡು ಬೆಳಗ್ಗೆ ಎಲ್ಲಿಗೆ ಹೊರಟಿದ್ದೀ ಮಾರಪ್ಪ ?" ಎಂದು ನಾಯ್ಕರು ಕಾಫಿಯ ಗ್ಲಾಸನ್ನು ಕೊಡುತ್ತ ಕೇಳಿದರು.

" ಓ ಅಲ್ಲಿಗೆ ಒಂದು ಕೋಣವನ್ನು ನೋಡಲಿಕ್ಕೆ ಹೋಗಬೇಕಿತ್ತು " ಎಂದ.

" ನಿನ್ನ ತಂದೆ ಏನು ಮಾಡುತ್ತಾನೆ ? "

" ಮನೆಯಲ್ಲಿದ್ದಾರೆ. "

ನಾಯ್ಕರಿಗೆ ಮತ್ತೊಬ್ಬ ಗಿರಾಕಿ ಬಂದ. ಅವನಿಗೆ ಕಾಫಿ ಮಾಡಲಿಕ್ಕೆ ಅವರು ಹೋದರು.

" ಏನು ನಾಯ್ಕರೆ ?" ಗಿರಾಕಿ ಕೇಳಿದ. " ನಿನ್ನೆ ನಿಮ್ಮಲ್ಲಿ ಗಲಾಟೆಯಂತೆ ಅಲ್ಲವೆ ? ಪಾಪ, ಆ ತನಿಯನನ್ನು ಕಡೆಗೆ ಪೋಲೀಸರು ಹಿಡಿದುಕೊಂಡು ಹೋದರಂತೆ."

" ಹೌದು. ಪೋಲೀಸರಿಗೂ ಒಂದು ಕೆಲಸ ಬೇಕಲ್ಲ ? ಏನೋ ಪಾಪದವ ಸಿಕ್ಕಿದ. ಹತ್ತಿಪ್ಪತ್ತು ರೂಪಾಯಿಗಳೂ ಸಿಕ್ಕಿದುವು : ಕೊಂಡು ಹೋದರು " ಎಂದು ನಾಯ್ಕರು ನಗುತ್ತ ಹೇಳಿದರು.

" ಇವತ್ತು ಯಾರೂ ಬಂದಿಲ್ಲವೆ ?" ಎಂದು ಅವನು ಪುನಃ ಕೇಳಿದ.

" ಅಕೋ ಆ ಕೋಣೆಯಲ್ಲಿದ್ದಾರೆ. ನೀನೂ ಬೇಕಾದರೆ ಒಂದು ಕೈ ನೋಡಿಬಿಡು "

" ಯಾರ್‍ಯಾರು ? "

" ಮಮ್ಮದೆ, ದೂಮಪ್ಪ, ಸಾಂತುಸೆಟ್ಟಿ ಮತ್ತೆ ಶಿವಪ್ಪ ಪೂಜಾರಿ

ಇವರೆಲ್ಲ ಇದ್ದಾರೆ.”

“ಒಹ್, ಮುಮ್ಮದೆ ಇದ್ದಾನೆಯೆ ? ನನಗೆ ಬೇಡಪ್ಪ!”

“ಜೋರು ಮಾತಾಡಬೇಡ. ಅವನಿಗೆ ಕೇಳಬಹುದು” ಎಂದರು ನಾಯ್ಕರು.

ಮಾರಪ್ಪ ಕಿಟಕಿಯ ಕಡೆ ನೋಡುವುದನ್ನು ಬಿಟ್ಟು ಇವರ ಸಂಭಾಷಣೆಯನ್ನು ಆಲಿಸಿದ. ಚಕ್ಕುಲಿಯ ಹುರಿ ಬೇಗನೆ ಮುರಿಯು ತ್ತಿದ್ದಿಲ್ಲ. ಆಚೆ ಕೋಣೆಯಿಂದ ಮಾತಾಡುತ್ತಿದ್ದುದೂ ಅವನಿಗೆ ಕೇಳ ಬಂತು.

ಪುನಃ ಕಿಟಕಿಯ ಕಡೆ ಕಣ್ಣಿಕ್ಕುವಾಗ ರಮಾ ಅಲ್ಲಿ ಒಂದು ವಸ್ತ್ರವನ್ನು ಕೈಯ್ಯಲ್ಲಿ ಹಿಡಿದುಕೊಂಡು ನಿಂತಿದ್ದಳು. ಇಬ್ಬರೂ ಒಬ್ಬರ ನ್ನೊಬ್ಬರು ನೋಡಿಕೊಂಡರು. ಅವಳು ನಸುನಕ್ಕಂತೆ ಅವನಿಗೆ ಭಾಸ ವಾಯಿತು. ತನ್ನ ಗುರುತು ಅವಳಿಗೆ ತಿಳಿದಿರಬೇಕೆಂದು ಅವನು ಭಾವಿಸಿದ.

ಅವಳನ್ನು ನೋಡುತ್ತಲೇ ಚಕ್ಕುಲಿ ಜಗಿಯತೊಡಗಿದ. ಅವಳು ವಸ್ತ್ರವನ್ನು ಮಡಚುತ್ತಿದ್ದಳು. ಮಾರಪ್ಪ ಮನಸ್ಸು ಮಾಡಿದ್ದರೆ ಆ ಎರಡು ಚಕ್ಕುಲಿಗಳನ್ನೂ ಒಂದೇ ಸಲ ಗನಗವನೆ ಜಗಿದುಬಿಡಬಹು ದಿತ್ತು. ಆದರೆ ಅವನ ಕೈಗಳೂ, ಬಾಯಿಯೂ ಬಹಳ ಮೆಲ್ಲನೆ ಕೆಲಸ ಮಾಡುತ್ತಿದ್ದುವು. ಬೇಕೆಂದೇ ಅದನ್ನು ಸಣ್ಣ ಸಣ್ಣ ತುಣುಕುಗಳನ್ನಾಗಿ ಮಾಡಿ ಬಾಯೊಳಗೆ ಹಾಕಿಕೊಳ್ಳುತ್ತಿದ್ದ.

ಅವಳು ಮತ್ತೊಮ್ಮೆ ನೋಡಿದಳು.

ಈಗ ಅವಳ ಮುಖದಲ್ಲಿ ನಗುವಿನ ಛಾಯೆಯನ್ನು ಸ್ಪಷ್ಟವಾಗಿ ಕಂಡಂತೆ ಮಾರಪ್ಪನಿಗೆ ತೋರಿತು. ತನ್ನ ತಲೆಕೂದಲುಗಳ ಮೇಲೆ ಒಮ್ಮೆ ಕೈಯ್ಯಾಡಿಸಿದ. ಒಮ್ಮೆ ಹೆಗಲಿನಲ್ಲಿದ್ದ ಶಾಲಿನ ಮೇಲೆ ಕೈ ಹಾಕಿದ. ಮತ್ತೊಮ್ಮೆ ಬನಿಯನನ್ನು ಕೆಳಗೆ ಎಳೆದ. ತನ್ನ ಇಂದಿನ ಉಡಿಗೆ ತೊಡಿಗೆಗಳು ಅವಳಿಗೆ ಹಿಡಿಸಿರಬಹುದೆಂದು ಅವನಿಗೆ

ಮನವರಿಕೆಯಾಯಿತು. ಆದರೆ ಮುಂದರಿಯುವುದು ಹೇಗೆ ಎಂಬುದು ಮಾತ್ರ ಅವನಿಗೆ ತಿಳಿಯಲಿಲ್ಲ.

ಚಕ್ಕುಲಿ ತಿಂದಾದೊಡನೆ ಕಾಫಿಯ ಲೋಟ ತೆಗೆದುಕೊಂಡು ಒಂದೊಂದೇ ಗುಟುಕನ್ನು ಕುಡಿದ. ಕಾಫಿ ತಣ್ಣಗಾಗಿ ಹೋಗಿತ್ತು.

ಅಷ್ಟರಲ್ಲಿ ಹೊರಗಿನಿಂದ ಯಾರೋ ಮಾತಾಡುತ್ತಿರುವುದು ಕೇಳಿಸಿತು. ಅದನ್ನೇ ಆಲಿಸಿದ. ಅದು ತನ್ನ ತಂದೆಯ ಸ್ವರವೆಂದು ತಿಳಿಯುವಾಗ ವೆಂಕಪ್ಪ ಹೊಟೇಲಿನೊಳಗೆ ಕಾಲಿಟ್ಟಾಗಿತ್ತು.

ಮಾರಪ್ಪನ ದೇಹವಿಡೀ ಒಮ್ಮೆ ಕಂಪಿಸಿತು. ತಂದೆ ತನಗೆ ಕೋಪದ ಭರದಲ್ಲಿ ಹೊಡೆದುಬಿಡಲೂ ಬಹುದೆಂದು ಅವನು ಹೆದರಿದ. ಆದರೆ ಅದು ಸುಳ್ಳಾಯಿತು.

"ಓಹೋ, ನೀನು ನಾಯ್ಕರಲ್ಲಿಂದ ಮೆಣಸು ತರಲಿಕ್ಕೆ ಬಂದವನೋ, ಹ್ಹ ಹ್ಹ ಹ್ಹ!" ಎಂದಿಷ್ಟು ಮಾತ್ರ ವೆಂಕಪ್ಪ ಹೇಳಿ ದೂರ ಕುಳಿತುಕೊಂಡ. ಅಷ್ಟೆ.

ನಾಯ್ಕರೂ ಹೋಗಿ ವೆಂಕಪ್ಪನ ಬಳಿಯಲ್ಲಿ ಕುಳಿತುಕೊಂಡುದನ್ನು ನೋಡಿ ಮಾರಪ್ಪನಿಗೆ ಇನ್ನೂ ಆಶ್ಚರ್ಯವಾಯಿತು. ಅವರು ಒಂದೇ ಮನೆಯಲ್ಲಿ ಹುಟ್ಟಿ ಬೆಳೆದವರಂತೆ ಮಾತಾಡಿಕೊಳ್ಳುತ್ತಿದ್ದರು. ಆಗ ನಾಯ್ಕರ ಚಿಕ್ಕ ಮಗುವೊಂದು ಬಂದು ವೆಂಕಪ್ಪನ ತೊಡೆಯ ಮೇಲೆ ಕುಳಿತುಕೊಂಡಿತು.

ಮಾರಪ್ಪ ಎರಡಾಣೆಯ ಪಾವಲಿಯೊಂದನ್ನು ನಾಯ್ಕರ ಬಳಿ ಇಟ್ಟು ಹೊರ ನಡೆದ. ನಾಯ್ಕರಿಗೂ ತನ್ನ ತಂದೆಗೂ ಇಷ್ಟು ಅನ್ಯೋನ್ಯತೆಯುಂಟೆಂಬುದು ಅವನಿಗೆ ಆತನಕ ತಿಳಿಯದ ವಿಚಾರ. ನಾಯ್ಕರೇನೋ ಎಂದಾದರೊಮ್ಮೆ ಮನೆಗೆ ಬರುತ್ತಿದುದನ್ನು ನೋಡಿದ್ದನವ. ಕೆಲವು ಸಮಯ ವೆಂಕಪ್ಪನು ಅವರಿಗೆ ಅಕ್ಕಿಯ ಮುಡಿಗಳನ್ನು ಕಳಿಸುವುದನ್ನೂ ಕಂಡಿದ್ದ. ಆದರೆ ಈಗ ನಾಯ್ಕರ ಸ್ಥಿತಿಯನ್ನು ನೆನೆಯುವಾಗ ಅವರಿಗೆ ಮುಡಿ ಮುಡಿ ಗಟ್ಟಲೆ ಅಕಿ

ಯನ್ನು ಪಡಕೊಳ್ಳುವ ಚೈತನ್ಯವುಂಟೇ ಎಂದು ತನ್ನೊಳಗೇ ಕೇಳಿಕೊಂಡ.

ಅದೂ ನಾಯ್ಕರ ಚಿಕ್ಕ ಮಗುವಿಗೂ ತನ್ನ ತಂದೆಯೊಡನೆ ಅಷ್ಟು ಸಲಿಗೆ !

ಅವನು ತನ್ನ ಮನೆಯಲ್ಲೆಂದೂ ಮಕ್ಕಳನ್ನು ಜಾಲೈಸುವವನಲ್ಲ. ಎಲ್ಲ ಬಿಟ್ಟು ತನ್ನ ತಂಗಿಯ ಮಗುವನ್ನು ಕೂಡಾ ತನ್ನ ತಂದೆ ಹಿಡಿದುಕೊಂಡುದು ಅವನಿಗೆ ನೆನಪಿಲ್ಲ. ಅವನು ಉಣ್ಣುತ್ತಿರುವಾಗಲೋ, ಕುಳಿತಿದ್ದಾಗಲೋ ಅದೇನಾದರೂ ಹತ್ತಿರ ಬಂದರೆ ಅದನ್ನು ಗದರಿಸಿ ಓಡಿಸುವವನವ. ಮತ್ತೆ ತನ್ನನ್ನು ಅವನು ಚಿಕ್ಕವನಿರುವಾಗ ಕೂಡಾ ಎತ್ತಿಕೊಂಡದ್ದು, ಇಲ್ಲವೇ ಪ್ರೀತಿಯಿಂದ ನಾಲ್ಕು ಮಾತು ಆಡಿದ್ದು ಮಾರಪ್ಪನಿಗೆ ನೆನಪಿಲ್ಲ. ತನ್ನ ಸತ್ತ ತಾಯಿಯೊಡನಂತೂ ಮಾತಾಡುತ್ತಲೇ ಇರಲಿಲ್ಲ. ಅವಳಿಗೆ ಎಷ್ಟೋ ಸಲ ಹೊಡೆದು ಹಿಂಸಿಸುತ್ತಿದ್ದ.

ಇಂಥ ಕಲ್ಲು ಹೃದಯಿಗೂ ಇಷ್ಟು ಮಮತೆಯುಂಟೇ ? ಎಂದು ಮಾರಪ್ಪನಿಗೆ ಹೊಳೆಯಿತು.

ಪುನಃ ಅವನಿಗೆ ರಮೆಯ ನೆನಪಾಯಿತು. ಅವಳ ಆ ಉರಿಯುವ ಕಣ್ಣುಗಳು, ಆ ನೀಳವಾದ ಕಪ್ಪು ಹುಬ್ಬುಗಳು........

ಇಂದು ತಾನು ಅಲ್ಲಿಗೆ ಹೋಗಲೇ ಬಾರದಿತ್ತೆಂದು ಮತ್ತೆ ಅವನಿಗೆ ಅನ್ನಿಸಿತು. ತನಗೆ ಕಾಫಿ ಕುಡಿಯುವ ಇಚ್ಛೆ ನಿಜವಾಗಿಯೂ ಇರಲಿಲ್ಲ. ಮತ್ತೇಕೆ ತಾನು ಸುಮ್ಮನೆ ಅಲ್ಲಿಗೆ ಹೋದೆ ? ನಾಯ್ಕರ ಮನೆಯವರಿಗೂ ತನಗೂ ಎಂದೂ ನಿಕಟವಾದ ಸಂಬಂಧ ಬೆಳೆಯದು. ಅದೂ ಈಗ ತನ್ನ ತಂದೆ ಅವರ ಆಪ್ತನೆಂದಾದ ಮೇಲಂತೂ, ರಮೆಯ ಯೋಚನೆಯನ್ನೇ ಬಿಟ್ಟು ಬಿಡಬೇಕು. ಈ ಮನಸ್ಸು ಏಕೆ ಹೀಗೆ ಗಾಳಿ ಬಂದತ್ತ ವಾಲುತ್ತದೆ ? ತನಗೆ ಈ ಒಳಗೇ ಮದುವೆಯಾಗಿ ಬಿಡುತ್ತಿದ್ದರೆ ಎಷ್ಟೋ ಒಳ್ಳೆಯದಿತ್ತು. ಹೀಗೆಲ್ಲ

ಸಿಕ್ಕಲ್ಲಿ ಹೋಗುತ್ತಿದ್ದಿಲ್ಲ. ಏನೇನೋ ನೆನೆಯುತ್ತಿದ್ದಿಲ್ಲ....

'ಹೂಂ ಈಗಲೇ ಮನೆಗೆ ಹೋಗಿ ಏನು ಮಾಡಬೇಕಾಗಿದೆ? ತಂದೆಯಂತೂ ಇನ್ನು ಮಧ್ಯಾಹ್ನವೋ ಸಂಜೆಯೋ ಮರಳುವುದು. ಹೊನ್ನಮ್ಮನನ್ನೊಮ್ಮೆ ನೋಡಿದರೆ ಒಳ್ಳೆಯದು. ಪಾಪ, ಗಂಡನಿಲ್ಲದೆ ಅವಳು ಎಷ್ಟು ಕೊರಗುತ್ತಿದ್ದಾಳೋ!....ಈಗ ನನಗೆ ಸಾಮರ್ಥ್ಯ ವಿರುತ್ತಿದ್ದರೆ ಅವನನ್ನು ಕೂಡಲೇ ಏನಾದರೂ ಮಾಡಿ ಬಿಡಿಸಿ ಕೊಂಡು ಬರುತ್ತಿದ್ದೆ. ಆದರೆ ನಾನು ಯಾವುದಕ್ಕೂ ಪ್ರಯೋಜನ ವಿಲ್ಲದ ಹೇಡಿ.'

—ಹೀಗೆ ಯೋಚಿಸುತ್ತಾ ಮಾರಪ್ಪ ಹೊನ್ನಮ್ಮನ ಮನೆಯ ಮೆಟ್ಟಲನ್ನೇರಿದ. ಆಕೆ ಒಳಗೆ ಅಡುಗೆ ಮಾಡುತ್ತಿದ್ದಳು. ಒಳಗಿಂದ ಬೀಸುತ್ತಿದ್ದ ಹೊಗೆ ಮಾರಪ್ಪನ ಕಣ್ಣಿನಲ್ಲೂ ತುಂಬಿ ಅವನಿಗೆ ಒಂದು ಕೆಮ್ಮು ಬಂತು.

ಕೆಮ್ಮಿನ ಶಬ್ದ ಕೇಳಿದೊಡನೆ ಹೊನ್ನಮ್ಮ ಹೊರಗೆ ಬಂದಳು. ಮಾರಪ್ಪ ಎದ್ದು ನಿಂತ.

"ಇವತ್ತೇನಾದರೂ ಸುದ್ದಿಯಿದೆಯೆ ಮಾರಪ್ಪಾ?" ಎಂದು ಆಕೆ ಕೇಳಿದಳು.

"ಏನೂ ಇಲ್ಲ" ಎಂದು ಮಾರಪ್ಪ ತಣ್ಣಗೆ ಉತ್ತರಿಸಿದ.

ಅವಳು ಮತ್ತೆ ಒಳಗೆ ಹೋದಳು.

ಮಾರಪ್ಪನಿಗೆ ಮತ್ತೂ ಮಾತಾಡಬೇಕೆಂದಿತ್ತು. ಆದರೆ ಹೇಗೆ ಎಂಬುದು ಗೊತ್ತಿಲ್ಲ. ಅವನ ನಾಲಗೆಯ ಪಸೆ ಆರಿಹೋಗಿತ್ತು. ಮೈ ಸ್ವಲ್ಪ ನಡುಗುತ್ತಿತ್ತು. ಸ್ವರ ಕೂಡಾ ಗಂಟಲಿನಿಂದ ಸರಿಯಾಗಿ ಹೊರಡುತ್ತಿದ್ದಿಲ್ಲ. ಈಗ ಇರುವವಳು ಅವಳೊಬ್ಬಳೇ. ತನಿಯನ ಹೆದರಿಕೆಯಿಲ್ಲ.

ಫಕ್ಕನೆ ಅವನು ಥೂ! ಎಂದು ತನ್ನನ್ನು ತಾನೇ ಜರೆದು ಕೊಂಡ. ತನಿಯ ಪಾಪ ಸ್ಟೇಷನ್ನಿಗೆ ಹೋಗಿದ್ದಾನೆ. ಈಕೆ ಒಬ್ಬಂಟಿಗ

ಳಾಗಿದ್ದಾಳೆ. ತಾನು ಎಂಥ ಅನ್ಯಾಯ ನೆನೆಸುತ್ತಿದ್ದೇನೆ! ಇನ್ನು ತನ್ನ ಮನೆಯಲ್ಲಿ ಹೆಂಗಸರಿಲ್ಲವೆ? ತನ್ನ ತಂಗಿಯೇ ಈ ಸ್ಥಿತಿಗೆ ಬಂದರೆ, ಮೂರನೆಯವನೊಬ್ಬ ಇದರಿಂದ ಲಾಭ ಪಡೆಯಲು ಹವಣಿಸಿಯಾನೆ? ಎಲ್ಲ ಬಿಟ್ಟು ತನಗೆ ಮದುವೆಯಾದ ಬಳಿಕ ತನ್ನ ಹೆಂಡತಿಯೇ ಹೀಗಾದರೆ?

ಇಲ್ಲ, ಇಲ್ಲ. ಹೊನ್ನಮ್ಮನ ಪರಿಸ್ಥಿತಿ ಭಿನ್ನವಾದುದು. ಅವಳಿಗೆ ತನ್ನಮೇಲೆ ಸ್ವಲ್ಪ ಪ್ರೀತಿಯಿದೆ. ಅವಳು ತನ್ನನ್ನು ಬಹುಶಃ ಬಯಸು ತ್ತಾಳೆ. ಅದಕ್ಕೆ ಇದೇ ಸುಸಂದರ್ಭ. ತಾನೇನೂ ಇದರಿಂದ ತಪ್ಪು ಮಾಡಿದಂತಾಗುವುದಿಲ್ಲ. ಅವಳ ಇಂಗಿತವನ್ನು ಪೂರ್ತಿಗೊಳಿಸಿದರೆ ತನಗೆ ಒಳ್ಳೆಯದು ವಿನಃ ಕೆಡುಕಿಲ್ಲ. ತಾನೇನೂ ಅವಳ ಮನಸ್ಸಿನ ವಿರುದ್ಧ ಹಾಯಲಾರೆ.

ಆದರೆ ಹೊನ್ನಮ್ಮ ಹೊರಗೆ ಬರಲೇ ಇಲ್ಲ. ಅವನು ಸುಮ್ಮನೆ ಕೆಲಹೊತ್ತು ಅಲ್ಲೇ ಕುಳಿತುಕೊಂಡು ಮತ್ತೆ ಮನೆಯ ಕಡೆಗೆ ಹೊರಟ. ಹೊಟ್ಟೆಯಲ್ಲಿ ಹಸಿವೂ ಆಗುತ್ತಿತ್ತು.

ಮನೆಗೆ ಅವನು ತಲಪುವಾಗ ವೆಂಕಪ್ಪ ಬಂದಿದ್ದ. ಅವನು ಮಾರಪ್ಪನನ್ನು ಗಮನಿಸಲೂ ಇಲ್ಲ.

* * *

ತನಿಯನನ್ನು ಸ್ಟೇಷನ್ನಿನಲ್ಲಿ ಪೋಲೀಸರು ತುಂಬಾ ಹಿಂಸೆಗೊಳ ಪಡಿಸಿದ್ದರು. ಅವನ ಸೊಂಟದಲ್ಲಿದ್ದ ಎಂಟು ರೂಪಾಯಿಗಳನ್ನು ಅವರು ಮೊದಲೇ ಕಸಿದಾಗಿತ್ತು. ತನಿಯನಿಗೆ ಅಂದು ರಾತ್ರೆ ಒಂದು ಮುಷ್ಟಿ ಅನ್ನ ಒಂದಿಷ್ಟು ಸಾರು ಇವುಗಳನ್ನು ಕೂಡಾ ಉಣ್ಣುವುದು ಕಷ್ಟವಾಯಿತು.

ಮರುದಿನ ಬೆಳಗ್ಗೆ ಪುನಃ ಸಬ್‌ಇನ್ಸ್‌ಪೆಕ್ಟರರು ಅವನನ್ನು ವಿಚಾರಿಸಿದರು.

"ಮಮ್ಮದೆಗೂ ನಿನಗೂ ಎಷ್ಟು ಸಮಯದಿಂದ ಸ್ನೇಹಾಚಾರ

ವಿದೆ? ಸತ್ಯ ಹೇಳು. ಇಲ್ಲವಾದರೆ ನಿನ್ನನ್ನು ಅವನ ಒಟ್ಟಿಗೇ ಕಳಿಸುತ್ತೇವೆ."

ತನಿಯ ಅವರ ಹೊಳೆಯುವ ಚರ್ಮದ ಬೂಟ್ಸುಗಳನ್ನೂ, ಕೈಯ್ಯಲ್ಲಿದ್ದ ಚರ್ಮ ಸುತ್ತಿದ ಬೆತ್ತವನ್ನೂ ನೋಡಿ ನಡುಗುತ್ತಿದ್ದ. ಅವನಿಗೆ ಉತ್ತರ ಕೊಡಲು ಕೂಡಾ ಬಹಳ ಕಷ್ಟವಾಯಿತು.

"ನಾನು ಎರಡು ವರ್ಷಗಳ ಹಿಂದೆ ಒಮ್ಮೆ ಅವರೊಡನೆ ಆಡಿದ್ದೆ. ಆಮೇಲೆ ಸುಮಾರು ಏಳು ತಿಂಗಳ ನಂತರ ಒಮ್ಮೆ ಆಡಿದ್ದೆ. ಅಷ್ಟೆ, ಮತ್ತೆ ನನಗೆ ಅವರೊಡನೆ ಮಾತನಾಡಿ ಪರಿಚಯವಿಲ್ಲ."

"ಉಹ್ಹೂಂ. ಅವನು ಶುದ್ಧ ಕಳ್ಳನೆಂಬುದು ನಿನಗೆ ತಿಳಿದಿದೆಯೆ?"

"ಏನೋ ಹಾಗೆ ಹೇಳುವುದನ್ನು ಕೇಳಿದ್ದೇನೆ. ಒಮ್ಮೆ ನಮ್ಮಲ್ಲಿಂದಲೂ ಒಂದು ಕೋಳಿಯನ್ನು ನಾನಿಲ್ಲದಾಗ ನನ್ನ ಹೆಂಡತಿಯನ್ನು ಬೆದರಿಸಿ ಕೊಂಡುಹೋಗಿದ್ದನಂತೆ."

"ಒಹ್ಹೋ! ನಿನಗೆ ಹೆಂಡತಿಯೂ ಇದ್ದಾಳೆಯೆ? ಅವಳಿಗೆಷ್ಟು ಪ್ರಾಯ?"

"ನನಗಿಂತ ಸ್ವಲ್ಪ ಚಿಕ್ಕವಳು."

"ಮಮ್ಮದೆ ನಿನ್ನ ಮನೆಗೆ ಆಗಾಗ ಬರುತ್ತಿರುವನೇ?"

"ಇಲ್ಲ ಸ್ವಾಮಿ. ನಾನು ಅವರನ್ನು ಕಂಡಿಲ್ಲ."

"ಅವನೊಟ್ಟಿಗೆ ನೀನೂ ಕಳ್ಳತನ ಮಾಡಲಿಕ್ಕೆ ಹೋಗಿದ್ದಿಯಾ?"

ಹೀಗೆ ಕೇಳುವಾಗ ಸಬ್‌ಇನ್ಸ್‌ಪೆಕ್ಟರರ ಕೈಯ್ಯಲ್ಲಿ ಬೆತ್ತ ನಲಿಯುತ್ತಿತ್ತು.

"ಇಲ್ಲ ಸ್ವಾಮಿ, ದೇವರಾಣೆ ಎಂದೂ ಇಲ್ಲ" ಎಂದು ತನಿಯ ಆ ಬೆತ್ತವನ್ನು ನೋಡುತ್ತ ಉತ್ತರಿಸಿದ.

"ನಿನಗೇನು ಕೆಲಸ?"

"ಬೇಸಾಯ ಮತ್ತು ಕಲ್ಲು ತುಂಡುಮಾಡುವುದು."

"ಹಾಗಾದರೆ ನೀನು ನಿನ್ನೆಯೇಕೆ ಅಲ್ಲಿ ಆಡಲಿಕ್ಕೆ ಕುಳಿತಿದ್ದೆ?

ನಿನ್ನೆ ಕೆಲಸವಿರಲಿಲ್ಲವೆ ?"

"ನಿನ್ನೆ ಕೆಲಸಕ್ಕೆ ಹೋಗಿರಲಿಲ್ಲ. ಸ್ವಲ್ಪ ತೋಟದ ಕೆಲಸ ವಿತ್ತು. ಮತ್ತೆ ಹಾಗೆಯೇ ಹೊಟೇಲಿಗೆ ಬಂದವನಿಗೆ ನಾಯ್ಕರು ಆಡಲಿಕ್ಕೆ ಹೇಳಿದರು."

"ಥೂ ನಾಯಿ ! ನಾಯ್ಕರು ಹೇಳಿದ್ದರಿಂದಲೇ ನೀನು ಆಡಿದ್ದೇ. ಇಲ್ಲವಾದರೆ ಬಹಳ ಒಳ್ಳೆಯ ಜನ ನೀನು" ಎನ್ನುತ್ತ ಇನ್ಸ್‌ಪೆಕ್ಟರರು ಅವನ ಬೆನ್ನಿಗೊಂದು ಏಟನ್ನಿತ್ತರು.

ತನಿಯ ಪೆಟ್ಟಿನ ನೋವನ್ನು ತಾಳಲಾರದೆ ಅಲ್ಲೇ ಕೂಗುತ್ತ ಬಿದ್ದು ಬಿಟ್ಟ.

"ಏಳು ಏಳು ! ನಿನ್ನ ಫಾರ್ಸ್ ಎಲ್ಲ ಬೇಡ, ಸತ್ಯ ಹೇಳು" ಎನ್ನುತ್ತ ಅಲ್ಲಿಗೇ ಇನ್ಸ್‌ಪೆಕ್ಟರರು ಒಂದು ಒದೆತ ಕೊಟ್ಟರು.

ತನಿಯ ಮೆಲ್ಲನೆ ಎದ್ದು ನಿಂತು ಧೂಳನ್ನು ಒರಸಿಕೊಂಡ. ಕಣ್ಣಿನಲ್ಲಿ ನೀರು ಇಳಿಯುತ್ತಿತ್ತು. ತಾನು ತಂದೆ-ತಾಯಂದಿರಿಂದ ಕೂಡಾ ಈ ರೀತಿ ಪೆಟ್ಟು ತಿಂದಿರಲಿಲ್ಲವೆಂದು ಅವನಿಗೆ ತೋರಿತಾಗ.

"ಆ ಮಮ್ಮದೆ ಹೆಚ್ಚಾಗಿ ಎಲ್ಲಿರುವನೆಂದು ನಿನಗೆ ಗೊತ್ತೇ ?"

"ಹೆಚ್ಚಾಗಿ ನಾಯ್ಕರ ಹೊಟೇಲಿನಲ್ಲೇ ಇರುತ್ತಾನೆ."

"ಅವನಿಗೆ ಸ್ವಂತ ಮನೆಯಿಲ್ಲವೆ ?"

"ನನಗೆ ಗೊತ್ತಿದ್ದ ಮಟ್ಟಿಗೆ ಇಲ್ಲ. ಊರಲ್ಲೆಲ್ಲ ತಿರುಗಾಡುತ್ತಿರುವನೆಂದು ಜನರು ಹೇಳುವುದನ್ನು ಕೇಳಿದ್ದೇನೆ."

"ನಿಮ್ಮ ಹಳ್ಳಿಯಲ್ಲಿ ಭೂತಗಳಿಗೆ ಕೂಡಾ ಮನೆಯಿರುವಾಗಲೇ ಈ ಕಳ್ಳನಿಗೆ ಇರಲಾರದೆ? ನಿನಗೆ ಗೊತ್ತಿದ್ದುದನ್ನೆಲ್ಲ ಹೇಳಿಬಿಡು."

"ಸ್ವಾಮಿ, ನನ್ನನ್ನು ಬೇಕಾದರೆ ಕೊಂದುಬಿಡಿ. ಆದರೆ ಅವರ ವಿಚಾರ ನನಗೆ ಗೊತ್ತಿಲ್ಲ. ನಾನೊಬ್ಬ ಬಡ ಗೇಣಿಒಕ್ಕಲು. ನನ್ನ ಕೆಲಸವೂ ಆಯಿತು, ನಾನೂ ಆಯಿತು. ನಾನು ಯಾರೊಡ

ನೆಯೂ ಹೆಚ್ಚು ಸ್ನೇಹವಿರುವವನಲ್ಲ."

ಎನ್ನುತ್ತ ತನಿಯ ಸಬ್‌ಇನ್ಸ್‌ಪೆಕ್ಟರರ ಕಾಲುಗಳನ್ನು ಗಟ್ಟಿಯಾಗಿ ಅಪ್ಪಿಕೊಂಡು ರೋದಿಸತೊಡಗಿದ. ಅವರು ಅವನನ್ನು ಕಾಲಿನಿಂದ ಅತ್ತ ದೂಡಿದರು.

"ನನ್ನ ಮನೆಯಲ್ಲಿ ನಾನು ಮತ್ತು ನನ್ನ ಹೆಂಡತಿ ಮಾತ್ರ ಇರುವುದು. ಅವಳಿಗೆ ನಾನು ಹೋಗದಿದ್ದುದರಿಂದ ಎಷ್ಟು ಗಾಬರಿಯಾಗಿದೆಯೋ ಏನೋ! ನನ್ನನ್ನೊಮ್ಮೆ ಬಿಟ್ಟು ಬಿಡಿ" ಎಂದು ಅವನು ಪ್ರಾರ್ಥಿಸಿದ.

"ನಿನ್ನ ಮನೆಯಲ್ಲಿ ಯಾರೂ ಇಲ್ಲದಿದ್ದರೆ ಮಮ್ಮರದೆ ಇರಬಹುದು. ನಿನ್ನನ್ನು ಬಿಡಬೇಕಾದರೆ ಜಾಮೀನು ತರಬೇಕು. ನಾಳೆ ನಿನ್ನನ್ನು ಮೆಜಿಸ್ಟ್ರೇಟರ ಮುಂದೆ ಹಾಜರು ಮಾಡುತ್ತೇವೆ"

ಎಂದು ಸಬ್‌ಇನ್ಸ್‌ಪೆಕ್ಟರರು ಒಂದು ಸಿಗರೇಟನ್ನು ಸೇದತೊಡಗಿದರು. ತನಿಯನನ್ನು ಪೋಲೀಸಿನವನೊಬ್ಬ ಮರಳಿ ಕೋಣೆಯಲ್ಲಿ ಹಾಕಿದ.

ತನಿಯನಿಗೆ ಇಡೀ ಲೋಕವೇ ಶೂನ್ಯವಾಗಿ ಕಂಡಿತು. ಮನೆಯ ಕೆಲಸದ ಚಿಂತೆ ಒಂದು, ಹೆಂಡತಿ ಕೊರಗು ಇನ್ನೊಂದು, ತನ್ನ ಹಣ ಹೋದ ಬೇಸರ ಮತ್ತೊಂದು. ಪೋಲೀಸಿನವರು ಮತ್ತೊಂದು ಕ್ಷಣದ ಬಳಿಕ ಬರುತ್ತಿದ್ದರೆ ಇಪ್ಪತ್ತು ರೂಪಾಯಿಗಳು ಕೈಗೆ ಸಿಗುತಿದ್ದುವಲ್ಲಾ! ಎಂಬ ಹಂಬಲ ಬೇರೆಯೇ. ತನಗೆ ಈತನಕ ಇಸ್ಪೀಟು ಆಟದಲ್ಲಿ ಹಣ ಬಂದುದೆಂದಿರಲಿಲ್ಲ. ಈಗ ಹೋದ ಹಣವನ್ನು ಭರ್ತಿ ಮಾಡಿಕೊಳ್ಳಬಹುದಿತ್ತು. ಅದರ ಬದಲಾಗಿ ತನ್ನೊಡನಿದ್ದ ಎಂಟು ರೂಪಾಯಿಗಳೂ ಹೋದುವು. ತನಿಯನಿಗೆ ಆ ಸೆರೆಮನೆಯ ಕಿಟಕಿಯ ಸರಳುಗಳಲ್ಲಿ ಬೆಂಕಿ ಏಳುತ್ತಿರುವಂತೆ ಕ್ಷಣ ಕಾಲ ತೋರಿತು.

ಮತ್ತೆ ದೇಹದ ಎಲ್ಲಾ ಭಾಗಗಳೂ ನೋಯುತ್ತಿವೆ, ಉರಿಯು

ತ್ತಿವೆ. ಈಗಲೇ ಅವರು ತನ್ನನ್ನು ಬಿಟ್ಟುಬಿಟ್ಟರೂ ಈ ನೋವುಗಳು ಉಪಶಮನವಾಗಲು ಕನಿಷ್ಠಪಕ್ಷ ಒಂದು ತಿಂಗಳಾದರೂ ಬೇಕಾದೀತೆಂದು ಅವನಿಗೆ ಹೊಳೆಯಿತು. ಕೆಲವು ಗಾಯಗಳಲ್ಲಿ ಆಗಲೇ ಕೀವು ಹುಟ್ಟಿತ್ತು.

* * *

ಅಂದು ಸಂಜೆಯೇ ಪುನಃ ಮಾರಪ್ಪ ಹೊನ್ನಮ್ಮನಲ್ಲಿಗೆ ಬಂದ. ಒಬ್ಬ ಪೋಲೀಸಿನವನು ತನ್ನ ತಂದೆಯೊಡನೆ ತನಿಯನ ವಿಚಾರ ಹೇಳಿದ ನಂತೆ: ತನಿಯನಿಗೆ ಹೆಚ್ಚೆಂದರೆ ಒಂದು ತಿಂಗಳು ಶಿಕ್ಷೆಯಾಗಬಹು ದಂತೆ. ಈಗಲೂ ಯೋಗ್ಯ ಜಾಮೀನು ಕೊಟ್ಟರೆ ಅವನನ್ನು ಬಿಟ್ಟು ಬಿಡಬಹುದಂತೆ. ಹೀಗೆಂದು ಅವಳೊಡನೆ ಹೇಳಿದನವ.

"ಅವರಿಗೆ ನಾನು ಮೊದಲಿಂದಲೂ ಹೇಳಿದ್ದೆ, ಈ ಜೂಜಿನ ಆಟ ಬೇಡವೆಂದು. ಇದ್ದ ಹಣವನ್ನೆಲ್ಲಾ ಅದರಲ್ಲೇ ಹಾಳು ಮಾಡುತ್ತಿದ್ದರು ಹಿಂದೆ. ಆದರೆ ಈಗೀಗ ಬಹಳ ಕಡಿಮೆ ಮಾಡಿದ್ದರು. ಇದೆಲ್ಲ ಗ್ರಹಚಾರ. ಇಲ್ಲವಾದರೆ ನಿನ್ನೆ ಅಲ್ಲಿಗೆ ಪೋಲೀಸರು ಬರಬೇಕಿತ್ತೆ?"

"ಹೌದು. ನಾನೂ ಹೋಗೋಣವೆಂದೆ. ಕೊನೆಯ ಆಟವೆಂದ. ಹಣವೂ ಹತ್ತಿಪ್ಪತ್ತು ರೂಪಾಯಿಯಷ್ಟು ಸಿಕ್ಕಿತ್ತು. ಪೋಲೀಸರು ಮಿಂಚಿನಂತೆ ಬಂದರು. ನಾನೆಣಿಸಿದೆ, ತನಿಯಣ್ಣ ಅವರನ್ನು ನೋಡಿ ಓಡುವನೆಂದು. ಆದರೆ ಅವನು ಆಟದಲ್ಲೇ ಮಗ್ನನಾಗಿದ್ದ. ಜತೆಗಾರ ರೆಲ್ಲ ಓಡಿಹೋದದ್ದೂ ಅವನಿಗೆ ಗೊತ್ತಾಗಲಿಲ್ಲ. ಪೋಲೀಸರು ಅವನನ್ನು ಹಿಡಿಯುವಾಗಲೂ ಇಸ್ಪೀಟಿನ ಎಲೆಗಳು ಅವನ ಕೈಯಲ್ಲೇ ಇದ್ದುವು."

"ಎಲ್ಲವೂ ಹಾಗೆಯೇ ಮಾರಪ್ಪ. ಆ ದಿನ ಅವರ ತಂಗಿ ಬಂದವಳು ನನ್ನಮೇಲೆ ಒಂದಷ್ಟು ಚಾಡಿ ಹೇಳಿದಳು. ಇನ್ನೊಂದು ಮದುವೆ ಮಾಡಿಕೊಳ್ಳೆಂದು ಕೂಡಾ ಹೇಳಿಕೊಟ್ಟಳು. ಸರಿ, ಅವರು ಏನೊಂದೂ ವಿಚಾರಿಸದೆ ನನ್ನೊಡನೆ ಹತ್ತುದಿನ ಮಾತು ಬಿಟ್ಟರು."

"ಇನ್ನೊಂದು ಮದುವೆ!" ಮಾರಪ್ಪ ನಕ್ಕ. "ಏಕೆ ನೀನೊಬ್ಬಳು ಅವನಿಗೆ ಸಾಲದೆ?"

"ಮಕ್ಕಳು ಬೇಕಂತೆ. ನನಗೆ ಮಕ್ಕಳನ್ನು ಪ್ರೀತಿಸಲು ಗೊತ್ತಿಲ್ಲವಂತೆ. ಅದೇ ಹೇಳಿದೆನಲ್ಲ, ಅವರಿಗೆ ಯಾರಾದರೂ ಏನನ್ನಾದರೂ ಹೇಳಿದರೆ ಸಾಕು. ಮತ್ತೆ ಅವರ ತಲೆಯಲ್ಲಿ ಅದೇ ಸುಳಿಯುವುದು."

ಮಾರಪ್ಪ ನಿಟ್ಟುಸಿರುಬಿಟ್ಟ. ಆಗಲೇ ಕತ್ತಲಾಗಿತ್ತು. ಹೊನ್ನಮ್ಮ ದೀಪ ಉರಿಸಿ ಹೊರಗೆ ತಂದಳು.

"ಅಯ್ಯೋ ಅಕ್ಕ, ನಿನಗೆ ರಾತ್ರಿ ಒಬ್ಬಳಿಗೇ ಹೆದರಿಕೆಯಾಗುವುದಿಲ್ಲವೆ?" ಎಂದು ಮಾರಪ್ಪ ನಗುತ್ತ ಕೇಳಿದ.

"ಹೆದರಿಕೆಯಾದರೆ ಏನು ಮಾಡಬಹುದು? ಬಂದುದನ್ನೆಲ್ಲ ಸಹಿಸಿಕೊಳ್ಳಬೇಕಲ್ಲ!"

"ಹೂಂ. ಕತ್ತಲಾಯಿತು. ನಾನು ಹೋಗಲೇ?"ಎಂದು ಅವನು ಕೇಳಿದ.

"ಬೇಕಾದರೆ ಊಟ ತೀರಿಸಿ ಹೋಗಬಹುದು" ಎಂದಳಾಕೆ ತುಸು ನಗುತ್ತ.

"ನಿಜವಾಗಿಯೂ?"

"ನಿಜವಾಗಿಯೂ. ಬೇಕಾದರೆ ನಾಳೆಯೇ ಹೋಗಿಬಿಡು. ನನಗೇನು?"

"ಕಳ್ಳರು ಬಾರದ ಹಾಗಾಯಿತು."

"ಕಳ್ಳರು ಯಾರು?"

"ಆ ಮಮ್ಮದೆಯನ್ನು ಪೋಲೀಸರು ಹುಡುಕುತ್ತಿದ್ದಾರೆ. ಅವನ ವಿಷಯದಲ್ಲಿ ಅವರಿಗೆ ನಿನ್ನ ಗಂಡನ ಮೇಲೂ ಸಂಶಯವಿದೆಯಂತೆ."

"ಆಯಿತು. ಇವರಿಗೆ ಮತ್ತೂ ಒಳ್ಳೆಯದಾಯಿತು."

"ಪೋಲೀಸರು ಇಲ್ಲಿಗೂ ಹುಡುಕಲು ಬಂದರೆ?"

"ಅದ ಹಾಗೆ ಆಗುತ್ತದೆ."

"ಆಯಿತು. ನನಗೆ ಅತ್ತಿತ್ತ ಹೋಗಿ ಆಯಾಸವಾಗಿದೆ. ಗಾಣದಲ್ಲಿ ಎತ್ತು ಸರಿಯಾಗಿ ಎಳೆಯಲೂ ಇಲ್ಲ. ಹೋಗುತ್ತೇನೆ. ಊಟ ಮಾಡಬೇಕು" ಎಂದು ಮಾರಪ್ಪ ಎದ್ದು ನಿಂತ.

"ಇಲ್ಲೇ ಊಟ ಮಾಡುವೆನೆಂದಿಯಲ್ಲ ?"

"ಇಲ್ಲ ಮನೆಯಲ್ಲಿ ತಂಪೆ ಗದರಿಸಿಯಾರು" ಎನ್ನುತ್ತ ಅವನು ಮೆಲ್ಲನೆ ಅಂಗಳಕ್ಕಿಳಿದ. ಆದರೂ ಅವನ ಕಾಲು ಮುಂದರಿಯುತ್ತಿದ್ದಿಲ್ಲ.

ಕಲವು ಮಾರು ಆ ಕತ್ತಲಲ್ಲೇ ಹೋಗಿ ಪುನಃ ಅಂಗಳದಿಂದ ಜಗಲಿಗೆ ಬಂದ. ಹೊನ್ನಮ್ಮ ಆಗಲೇ ಒಳಗೆ ಹೋಗಿದ್ದಳು.

"ಊಟ ಹಾಕುವೆನೆಂದಿಯಲ್ಲ ? ಎಲ್ಲಿ ಬರಲಿ" ಎಂದನವ ಗಟ್ಟಿಯಾಗಿ.

"ಹೊ. ಮುಖ ತೊಳೆದು ಬಾ" ಎಂದಳು ಅವಳು.

ಊಟಕ್ಕೆ ಕುಳಿತ. ಆಕೆ ಅನ್ನ ಬಡಿಸಿದಳು. ಇಬ್ಬರೂ ಮಾತಾಡಲಿಲ್ಲ. ಮಾರಪ್ಪನ ಕೈ ಬೆರಳುಗಳು ಕೂಡಾ ನಡುಗುತ್ತಿದ್ದುದು ಹೊನ್ನಮ್ಮನಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ಬಾಯಿಯೊಳಗೆ ಅನ್ನವನ್ನು ಎಷ್ಟು ಜಗಿದರೂ ಅದು ಒಳಗೆ ಹೋಗುವಂತೆ ತೋರುತ್ತಿದ್ದಿಲ್ಲ.

ಹೊನ್ನಮ್ಮನೂ ಊಟ ಮಾಡತೊಡಗಿದಳು.

ಊಟ ಮುಗಿದಾದ ಬಳಿಕ ಪುನಃ ಮಾರಪ್ಪ "ಹೋಗಲೇ ?" ಎಂದು ಕೇಳಿದ.

"ಎಷ್ಟು ಸಲ ನನ್ನನ್ನು ಕೇಳುತ್ತೀಯಾ ಹುಚ್ಚ ? ಹೋಗಬೇಕಾದರೆ ಹೋಗಿಬಿಡು" ಎಂದಳವಳು ತುಸು ಆವೇಶ ಪೂರ್ಣವಾಗಿ.

"ಅಲ್ಲ, ಇರಬೇಕಾದರೆ ಇದ್ದು ಬಿಡಬಹುದಲ್ಲ ?" ಎಂದ ನಗುತ್ತ

ಆಕೆ ಉತ್ತರಿಸಲಿಲ್ಲ.

ಅವನು ಹೋಗಲೂ ಇಲ್ಲ.

೮

ತನಿಯನ ವಿಚಾರಣೆಯ ದಿನ ಬಂತು.

ಆವರೆಗೂ ಅವನು ಪೋಲೀಸರ ವಶದಲ್ಲೇ ಇರಬೇಕಾಯಿತು. ಅವನಿಗೆ ಯಾರೂ ಜಾಮೀನೂ ನಿಲ್ಲಲಿಲ್ಲ. ಪೋಲೀಸಿನವರು ಮಮ್ಮದೆಯ ತಕ್ಷೀರಿನಲ್ಲಿ ಇವನಿಗೂ ಒಂದು ಕೈ ಇದ್ದಿರಬಹುದೆಂದು ನಂಬಿ ಅವನನ್ನು ಹೀಗೆಯೇ ಬಿಟ್ಟುಕೊಡಲೂ ಒಪ್ಪಲಿಲ್ಲ. ಆದರೆ ಅವರ ಲಾಕಪ್ಪಿನಲ್ಲಿ ಇನ್ನೂ ಅನೇಕ ಅಪಾದಿತರು ಬಂದು ಸೇರಿದ್ದರಿಂದ ತನಿಯನಿಗೆ ಮತ್ತೆ ಪೆಟ್ಟು ಬೀಳಲಿಲ್ಲ. ಹೆಚ್ಚು ಕಡಿಮೆ ಅವರು ಅವನ ಗೊಡವೆಯನ್ನೇ ಬಿಟ್ಟರು.

ವಿಚಾರಣೆಯಂದು ನಾಯ್ಕರೂ ಬಂದಿದ್ದರು. ಅವರು ಮತ್ತೆ ಗ್ರಾಮದ ಉಗ್ರಾಣಿ ಪೋಲೀಸರ ಕಡೆಯಲ್ಲಿ ಸಾಕ್ಷಿಗಳಾಗಿದ್ದರು.

ತನಿಯನನ್ನು ಮ್ಯಾಜಿಸ್ಟ್ರೇಟರರ ಮುಂದೆ ತಂದು ನಿಲ್ಲಿಸಿದರು. ಮ್ಯಾಜಿಸ್ಟ್ರೇಟರು ಅವನ ಕಡೆಯಲ್ಲಿ ವಕೀಲರಿಲ್ಲವೆ? ಎಂದು ಕೇಳಿದರು. ಅವನು ತಲೆಯಲ್ಲಾಡಿಸಿದ. ಅವರು ಹೇಳಿದ್ದು ಅವನಿಗೆ ಏನೆಂದು ಅರ್ಥವಾಗಲಿಲ್ಲ.

ಮ್ಯಾಜಿಸ್ಟ್ರೇಟರು ಅವನ ಅಪರಾಧವನ್ನು ಓದಿ ಹೇಳಿದರು. ಒಬ್ಬ ಗುಮಾಸ್ತರು ಅದನ್ನು ತುಳುವಿನಲ್ಲಿ ಭಾಷಾಂತರಿಸಿದರು.

ಅವನು ಕಳ್ಳತನ ಮಾಡಲಿಕ್ಕೆಂದು ಕೆಲವರನ್ನು ಕೂಡಿಹಾಕಿಸಿದ್ದನಂತೆ. ಪೋಲೀಸರು ಅವನನ್ನು ಕತ್ತಲೆಯಲ್ಲಿ ಹಿಡಿಯುವಾಗ ಅವರಿಗೆ ಚೂರಿ ತೋರಿಸಿ ಹೆದರಿಸಿದನಂತೆ.

"ನೀನು ಈ ತಪ್ಪನ್ನು ಮಾಡಿದ್ದಿಯೋ?" ಎಂದು ಅವರು ಕೊನೆಗೆ ಕೇಳಿದರು.

ತನಿಯನಿಗೆ ಇದನ್ನು ಕೇಳಿ ದಂಗು ಬಡೆದಂತಾಯಿತು.

"ಇಲ್ಲ ಸ್ವಾಮಿ. ನನ್ನನ್ನು ಜುಗಾರಿ ಆಡಿದ್ದಕ್ಕೆ ಪೋಲೀಸರು ಹಿಡಿದರು" ಎಂದನವ.

"ಅದೆಲ್ಲ ನಮಗೆ ತಿಳಿಯದು. ನೀನು ಈ ತಪ್ಪನ್ನು ಒಪ್ಪಿಕೊಳ್ಳುವಿಯೋ ಇಲ್ಲವೋ?"

"ಇಲ್ಲ ಸ್ವಾಮಿ. ಅವರು ನನ್ನ ಕೈಯಿಂದ ಹಣ ಕೂಡಾ ಎಳೆದಿದ್ದಾರೆ" ಎಂದು ಅವನು ಹೇಳುವಷ್ಟರಲ್ಲೇ ಮ್ಯಾಜಿಸ್ಟ್ರೇಟರ ಪೇದೆ ಅವನನ್ನು ಮೂಲೆಗೆ ಕರೆದುಕೊಂಡು ಹೋದ.

"ಸರಿ. ಒಂದನೇ ಸಾಕ್ಷಿ ಶಿವ, ಅಲ್ಲ, ಶೀನನಾಯ್ಕ" ಎಂದು ಪೇದೆ ಸುತ್ತೆ ಕರೆದ.

ಶೀನನಾಯ್ಕರು ಏನು ಹೇಳಿದರೆಂಬುದು ತನಿಯನಿಗೆ ಅರ್ಥವಾಗಲಿಲ್ಲ. ಆದರೆ ಅವರು ಹೆಚ್ಚಿನ ಪ್ರಶ್ನೆಗಳಿಗೆ ಹೌದೆಂದು ತಲೆ ಅಲ್ಲಾಡಿಸುವುದು ಅವನಿಗೆ ತಿಳಿಯಿತು. ಕತ್ತಲೆ, ಚೂರಿ, ಕಳ್ಳ ಇತ್ಯಾದಿ ಶಬ್ದಗಳೂ ಅವನಿಗೆ ಅರ್ಥವಾದುವು.

ಎರಡನೆಯ ಸಾಕ್ಷಿ ಗ್ರಾಮದ ಉಗ್ರಾಣಿಯೇ. ಅವನೂ ಶೀನನಾಯ್ಕರಂತೆಯೇ ತಲೆಯಲ್ಲಾಡಿಸಿದ.

ಮ್ಯಾಜಿಸ್ಟ್ರೇಟರು ಕಾಫಿ ಕುಡಿಯಲಿಕ್ಕೆ ಎದ್ದು ಹೋದರು. ತನಿಯನನ್ನು ಪೋಲೀಸರು ಕೋಣೆಗೆ ಕರೆದೊಯ್ದು ಅಲ್ಲಿ ಎರಡೇಟು ಕೊಟ್ಟರು.

"ಕಳ್ಳ. ನೀನು ಸುಳ್ಳು ಹೇಳ್ತೀಯಾ? ನೋಡು! ನಿನಗೆ

ಈಗ ಆರು ತಿಂಗಳ ಸಿಪ್ಪೆ ಗುದ್ದುವ (ಜೈಲಿನಲ್ಲಿ ತೆಂಗಿನ ಸಿಪ್ಪೆಯನ್ನು ಗುದ್ದಿ ಹುರಿಹಗ್ಗ ಮಾಡಿಸುವ) ಕೆಲಸ ಸಿಗುತ್ತದೆ!"

ತನಿಯ ಉಸುರೆತ್ತಲಿಲ್ಲ. ಅವನ ಕಡೆಯಿಂದ ಮ್ಯಾಜಿಸ್ಟ್ರೇಟರೊಡನೆ ಹೇಳುವವರು ಯಾರೂ ಇಲ್ಲವೆಂದು ಅವನಿಗೆ ಗೊತ್ತಿತ್ತು. ನಾಯ್ಕರೊಮ್ಮೆ ಅವನನ್ನು ಇಣಿಕಿ ನೋಡಿದರು. ಆದರೆ ಮಾತಾಡಲಿಲ್ಲ. ಮಾತಾಡಲಿಕ್ಕೆ ಪೋಲೀಸರ ಮಧ್ಯೆ ಸಾಧ್ಯವೂ ಇರಲಿಲ್ಲ. ಆದರೆ ಅವರು ತನ್ನ ವಿರುದ್ಧ ಸುಳ್ಳು ಸಾಕ್ಷಿ ಹೇಳಿದರೆಂದು ಮಾತ್ರ ಅವನಿಗೊಮ್ಮೆ ಕೋಪ ಬಂತು. ಅವರು ತನ್ನಿಂದ ಎಷ್ಟೋ ಲಾಭ ಪಡೆದಿರಬಹುದು; ಕೆಲವು ಸಲ ಊಟಕ್ಕೆ ಅಕ್ಕಿಯಿಲ್ಲದಾಗ ಅವರಿಗೆ ಅಕ್ಕಿ ಸಹಾ ತಾನು ಕಡಿಮೆ ಬೆಲೆಗೆ ಸಾಲವಾಗಿ ಕೊಟ್ಟದ್ದಿ; ಆದರೂ ಅವರು ಇಂದು ತನ್ನ ಮೇಲೆ ದಯೆತೋರಲಿಲ್ಲ. ಮತ್ತೆ ಉಗ್ರಾಣಿ ತನ್ನ ಮನೆಗೆ ಒಂದು ವರ್ಷಕ್ಕೆ ಎರಡು ಕೋಳಿಗಳನ್ನಾದರೂ ಏನೇನು ನೆವನ ಹೇಳಿ ಕೊಂಡುಹೋಗದಿಲ್ಲ. ಆದರೆ ಅವನೂ ತನ್ನ ಆವಸ್ಥೆಯನ್ನು ನೋಡದೆ, ಕಣ್ಣಿನಲ್ಲಿ ನೋಡದ್ದನ್ನು ಇಂದು ಹೇಳಿಬಿಟ್ಟ.

ಇವನ್ನೆಲ್ಲ ನೆನೆಯುವಾಗ ತನಿಯನಿಗೆ ಅಳು ಬಂತು.

ಕೋರ್ಟಿನ ಫಲಹಾರ ವಿರಾಮ ಮುಗಿದು ಪುನಃ ಮ್ಯಾಜಿಸ್ಟ್ರೇಟರು ಬಂದರು. ತನಿಯನನ್ನು ಪೋಲೀಸರು ಪುನಃ ಅವರ ಮುಂದೆ ನಿಲ್ಲಿಸಿದರು.

ಮ್ಯಾಜಿಸ್ಟ್ರೇಟರು ಏನೋ ಬರೆಯತೊಡಗಿದರು. ತನಿಯನಿಗೆ ನಿಂತು ನಿಂತು ಕಾಲು ಸೋತುಹೋಯಿತು. ಆಗಲೇ ಹೊಡೆದ ಪೆಟ್ಟಿನಿಂದಾಗಿ ಬಾಯೊಳಗೆ ಹಲ್ಲೊಂದು ನೋವಾಗುತ್ತಿತ್ತು.

ತನ್ನ ಕಡೆಯಲ್ಲಿ ಸಾಕ್ಷಿಯವರು ಯಾರೂ ಇಲ್ಲವೆಂದುಕೊಂಡ ಅವನು. ತನ್ನ ಪಕ್ಷದಲ್ಲಿ ಯಾರು ಬರಬೇಕು? ತನಗೊಬ್ಬ ಮಗನಾದರೂ ಇರುತ್ತಿದ್ದರೆ ಅವನಾದರೂ ಸ್ವಲ್ಪ ಸಹಾಯ ಮಾಡುತ್ತಿದ್ದ. ಈಗ ಹೆಂಡತಿಯೊಬ್ಬಳೇ ಏನು ಮಾಡಬಲ್ಲಳು? ಆಕೆ ಒಂದಿಷ್ಟು

ತಿಳಿಯದಸಳು. ಆಕೆಯ ಜೀವನವೇ ಈಗ ಹೇಗೆ ನಡೆಯುತ್ತಿದೆಯೋ ತಿಳಿಯದು. ಆಕೆಗೆ ಒಂದು ಸುದ್ದಿ-ವರ್ತಮಾನವನ್ನು ಕಳಿಸಿಬಿಡೋಣ ವೆಂದರೂ ಕೋರ್ಟಿನಲ್ಲಿ ಯಾರೂ ಇಲ್ಲ. ಅಂತೂ ನಾಯ್ಕರು ಈ ಸುದ್ದಿಯನ್ನು ಕೇಳಲೇ ಪಸರದೆ ಬಿಡರು. ಆಗ ಅವಳಿಗೂ ತಿಳಿದೀತು.

ಹೀಗೆ ಯೋಚಿಸುತ್ತ ಮ್ಯಾಜಿಸ್ಟ್ರೇಟರ ಮುಖವನ್ನೊಮ್ಮೆ ಅವನು ನೋಡಿದ. ಅವರು ಎತ್ತರದ ಕುರ್ಚಿಯಲ್ಲಿ, ಒಂದು ದೊಡ್ಡ ಮೇಜಿನ ಹಿಂದೆ ಕುಳಿತಿದ್ದರು. ತಲೆಗೆ ರುಮಾಲಿತ್ತು. ಕಣ್ಣಿಗೆ ಕನ್ನಡಕವಿತ್ತು. ಮುಖ ಗಂಭೀರವಾಗಿತ್ತು. ಚಿನ್ನದ ಟೊಪ್ಪಿಯ ಲೆಕ್ಕಣಿಯಲ್ಲಿ ಅವರು ಒಂದೇ ಸಮನೆ ಬರೆಯುತ್ತಿದ್ದರು. ಏನು ಅಧಿಕಾರ ಅವರದು! ಎಂದು ಅವನು ಚೋದ್ಯಪಟ್ಟ. ನೋಡಹೋದರೆ, ಅವರೂ ತನ್ನಂತೆಯೇ ಕೇವಲ ಮನುಷ್ಯ. ಆದರೆ ಅಧಿಕಾರದಲ್ಲಿ ಅವರು ತನ್ನ ಮೇಲಿನವರು. ತನ್ನ ಜೀವವನ್ನು ತೆಗೆದುಬಿಡುವಷ್ಟು ಅಧಿಕಾರವಿದೆ ಅವರಿಗೆ. ಅವರೆಂದೂ ತನ್ನ ಸ್ಥಾನದಲ್ಲಿ ಅಪಾದಿತರಾಗಿ ನಿಂತುಕೊಳ್ಳರು....ಬಹುಶಃ.

ಆದರೆ ಅವರದೇನು ತಪ್ಪು? ಅಲ್ಲೇ ಪೋಲೀಸ್ ಅಧಿಕಾರಿ ನಿಂತುಕೊಂಡಿದ್ದಾನೆ. ಅವನ ಹೊಟ್ಟೆ ಎಷ್ಟು ದೊಡ್ಡದು! ಕಣ್ಣುಗಳು ಸುತ್ತಲಿನ ಮಾಂಸದಿಂದ ಮುಚ್ಚಿಹೋಗಿವೆ! ಅವನ ಮೀಸೆಯ ಅಬ್ಬರವೇನು! ಅವನು ನಿಂತು ಅತ್ತಿತ್ತ ನೋಡುವ ಠೀವಿಯೇನು! ಭುಜಗಳಲ್ಲಿ ಅವನ ಅಧಿಕಾರದ ಅಕ್ಷರಗಳು ಹೊಳೆಯುತ್ತಿವೆ. ಕಾಲಿನಲ್ಲಿ ಹೊಳೆಯುವ ಬೂಟ್ಸುಗಳಿವೆ. ಅವನು ಎಲ್ಲರಿಗಿಂತಲೂ ಮೇಲಾದವ. ತನ್ನಂಥ ಎಷ್ಟು ಮಂದಿಯನ್ನು ಹದಮಾಡಬಲ್ಲ ವ್ಯಕ್ತಿ ಅವ.........ಆದರೆ ಅವನಿಗೂ ಒಂದು ಮನೆಯಿರಬೇಕು, ಹೆಂಡತಿ ಮಕ್ಕಳಿರಬೇಕು.

ಆ ಪೋಲೀಸರೂ ಠೀವಿಯಲ್ಲಿ ಮತ್ತು ಅಬ್ಬರದಲ್ಲಿ ಕಡಿಮೆಯವರಲ್ಲ. ಅವರ ಮುಷ್ಟಿಯ ಬಲ ಮತ್ತು ಕಂಠದ ಧ್ವನಿಗಳನ್ನು

ಪರೀಕ್ಷಿಸಿಯೋ ಸರ್ಕಾರದವರು ಅವರಿಗೆ ಕೆಲಸ ಕೊಟ್ಟಿರಬೇಕು. ತಲೆಗೊಂದು ಕೆಂಪು ಪೇಟಾ! ಅಲ್ಲಿ ಅವರ ಹೆಸರೋ ನಂಬರೋ ಏನೋ ಇದೆ. ಅವರು ತನ್ನಂತೆ ಎಂದೂ ಇಸ್ಪೀಟು ಆಡುವವರಲ್ಲ. ಹಣವಿಟ್ಟು ಆಡಿ ಅವರಿಗೆ ಗೊತ್ತೇ ಇಲ್ಲ. ಪುಣ್ಯವಂತರು, ಭಾಗ್ಯವಂತರು....

ತನಿಯ ಹೀಗೆ ಯದ್ವಾತದ್ವಾ ಯೋಚಿಸುತ್ತಿದ್ದಾಗ, ಮ್ಯಾಜಿಸ್ಟ್ರೇಟರು ಲೆಕ್ಕಣಿಯನ್ನು ಕೆಳಗಿಟ್ಟು ಗಂಟಲು ಸರಿಮಾಡಿದರು. ಎಲ್ಲರೂ ಅವರನ್ನೇ ನೋಡಿದರು.

"ಇಗೋ" ಅವರು ಹೇಳಿದರು. "ನಿನ್ನ ಮೇಲಿನ ಅಪರಾಧ ಸಿದ್ಧವಾಗಿದೆ. ನಾಯ್ಕರೂ ಉಗ್ರಾಣಿಯೂ ತಕ್ಷೀರನ್ನು ಸಮರ್ಥಿಸಿದ್ದಾರೆ. ನಿನಗೆ ಹೆಚ್ಚು ಶಿಕ್ಷೆ ಕೊಡಬೇಕಾಗಿತ್ತು. ಇದೇನಾದರೂ ಚಿಲ್ಲರೆ ಅಪರಾಧವಲ್ಲ. ಆದರೆ ನೀನು ಈ ತಪ್ಪನ್ನು ಮೊದಲ ಸಲ ಮಾಡಿದ್ದರಿಂದ ನಿನಗೆ ಕೇವಲ ಎರಡು ತಿಂಗಳ ಶಿಕ್ಷೆ ವಿಧಿಸಿದ್ದೇನೆ."

ತನಿಯನಿಗೆ ಅದನ್ನು ಗುಮಾಸ್ತರು ಭಾಷಾಂತರಿಸಿ ಹೇಳಿದರು.

ತನಿಯ ಮಾತಾಡಲಿಲ್ಲ. ತಾನು ಆ ತಕ್ಷೀರನ್ನು ಮಾಡಿಲ್ಲವೆಂದು ಪುನಃ ಅವರಿಗೆ ಹೇಳಬೇಕೆಂದು ಅವನಿಗನ್ನಿಸಿದರೂ ಅವನಿಗೆ ಉಸಿರೆತ್ತಲಾಗಲಿಲ್ಲ.

ಪೋಲೀಸರು ಮತ್ತು ಸಬ್‌ಇನ್ಸ್‌ಪೆಕ್ಟರರು ಇದನ್ನು ಕೇಳಿ ನಸುನಗುತ್ತಿದ್ದರು.

ತನಿಯನೊಮ್ಮೆ ಹಲ್ಲು ಕಡೆದ. ಅಷ್ಟೆ. ಅವನ ಕೈಗೆ ಪುನಃ ಬೇಡಿ ಬಿದ್ದೇ ಬಿತ್ತು.

* * *

ನಾರಾಯಣ ತಂತ್ರಿಯವರಿಗೆ ತನಿಯನ ಖಟ್ಲೆಯ ವರ್ತಮಾನ ನಾಯ್ಕರಿಂದಲೇ ಮೊದಲು ಸಿಕ್ಕಿತು.

"ಏನು ಸ್ವಾಮಿ", ನಾಯ್ಕರೆಂದರು "ತನಿಯನಿಗೆ ಇನ್ನು

ಎರಡು ತಿಂಗಳ ಮಟ್ಟಿಗೆ ಧರ್ಮದ ಅನ್ನ ಸಿಗುವಂತಾಯಿತು."

"ಕೇವಲ ಜುಗಾರಿ ಆಡುತ್ತಿದ್ದುದಕ್ಕೆ ಅಷ್ಟು ಶಿಕ್ಷೆಯಾಯಿತೆ?" ತಂತ್ರಿಯವರು ಮೂಗಿನ ಮೇಲೆ ಕೈಯಿಟ್ಟರು. "ನಾನು ಈವರೆಗೆ ಇದನ್ನು ಕೇಳಿಲ್ಲ. ಹೆಚ್ಚಾಗಿ ಜುಗಾರಿ ಆಡುವವರ ಹಣವನ್ನು ಪೋಲೀಸರು ಒಳಗೆ ಹಾಕಿ ಅವರಿಗೆ ಎರಡು ಹೊಡೆದು ಬಿಟ್ಟುಬಿಡುವ ಕ್ರಮ ನನಗೆ ಗೊತ್ತು."

"ಅದೆಲ್ಲ ನಿಮಗೆ ತಿಳಿಯದು ಸ್ವಾಮಿ. ತನಿಯನೇನೂ ಸಾಧಾರಣದವನಲ್ಲವಂತೆ. ದಿನಾಲೂ ಕದಿಯುತ್ತಿದ್ದನಂತೆ."

"ಓಹೋ, ಕದ್ದುದರಿಂದಾಗಿ ಅಷ್ಟು ಶಿಕ್ಷೆಯಾಯಿತೆ? ಹಾಗೆ ಹೇಳಿ—ಆದರೆ ನನಗೆ ತನಿಯ ಕದಿಯುತ್ತಿದ್ದುದು ಗೊತ್ತಿರಲಿಲ್ಲ. ಪಾಪದವರ ಹಾಗೆ ಕಾಣುತ್ತಿದ್ದ."

"ಏನೋ! ಪೋಲೀಸರೊಡನೆ ಬಹಳ ರುಜುವಾತು ಇತ್ತು..."

"ಸಾಕ್ಷಿ?"

"ನಮ್ಮ ಉಗ್ರಾಣಿ – ಮತ್ತೆ – ನಾನು."

"ನೀವೂ ಕದ್ದದ್ದು ಹೌದೆಂದು ಹೇಳಿದಿರಾ?"

"ಇಲ್ಲ. ಅವರೇನೋ ಎಂದರು. ನಾನು ಹೌದೆಂದೆ."

"ಒಳ್ಳೆಯ ಮನುಷ್ಯರಯ್ಯಾ ನೀವು! ಪಾಪದವರಿದ್ದರೆ ಏನೂ ಮಾಡುವಿರಿ" ಎಂದು ತಂತ್ರಿಗಳು ನಕ್ಕರು.

ನಾಯ್ಕರಿಗೆ ತುಸು ಸಂಕೋಚವಾಯಿತು. ತಾನು ತಂತ್ರಿಗಳಿಗೆ ಕೊಟ್ಟ ವಿವರಣೆ ಅಷ್ಟು ಸಮಂಜಸವಾಗಿರಲಿಲ್ಲವೆಂದು ಅವರಿಗೆ ಹೊಳೆಯಿತು. ಆದರೂ ನೇರವಾಗಿ ಪೋಲೀಸರು ಹೇಳಿಕೊಟ್ಟಂತೆ ಹೇಳಿದೆನೆಂದು ಮಾತ್ರ ಹೇಳಲು ಒಣಹೆಮ್ಮೆ ಬಿಡಲಿಲ್ಲ.

"ಸ್ವಲ್ಪ ಕಾಫಿ ಮಾಡಿಕೊಡಲೇ ಸ್ವಾಮಿ? ಎಲ್ಲಾ ಶುದ್ಧವಿದೆ" ಎಂದು ನಾಯ್ಕರು ಕೇಳಿದರು.

"ಹ್ಞೂ! ಮತ್ಸ್ಯಂ ಸರ್ವತ್ರ ವರ್ಜಯೇತ್!" ತಂತ್ರಿಯವರು

ಗಹಗಹಿಸಿ ನಕ್ಕರು. "ನನಗೆ ಬೇಡಪ್ಪ."

ನಾಯ್ಕರಿಗೆ ತಂತ್ರಿಯವರ ಸಂಸ್ಕೃತ ಅರ್ಥವಾಗಲಿಲ್ಲ. ಆದರೆ ಅವರು ಕೂಡಲೇ ನಕ್ಕಿದುದರಿಂದ ಏನೋ ತಮಾಷೆಯಿರಬೇಕೆಂದು ನಾಯ್ಕರೂ ನೆಗಾಡಿದರು.

"ತನಿಯನ ಗೇಣಿ ಬಾಕಿ ಇದೆಯೆ?" ಎಂದು ನಾಯ್ಕರು ಮಾತಿನ ಸರಣಿಯನ್ನು ಮುಂದರಿಸಿದರು.

"ಯ್ಯೆ! ಗೇಣಿ ಬಾಕಿಯಾದರೆ ಎಲ್ಲಿ ಹೋಗುತ್ತದೆ" ಎನ್ನುತ್ತ ತಂತ್ರಿಯವರು ಆಗ ಹೊಟೇಲಿನಿಂದ ಹೊರಗೆ ಕಾಲಿಟ್ಟರು.

ಅವರು ನಾಯ್ಕರೊಡನೆ ಅಷ್ಟು ಸುಲಭವಾಗಿ ತನಿಯನ ಗೇಣಿಯ ವಿಚಾರವನ್ನು ಗಾಳಿಗೆ ಬಿಟ್ಟರೂ ಮನೆಗೆ ಹೋಗುವಾಗ ದಾರಿಯಲ್ಲಿ ಅದನ್ನೇ ವಿಚಾರಿಸುತ್ತಿದ್ದರು. ತನಿಯನ ಗೇಣಿ ಹಿಂದಿನದು ಬಾಕಿಯಿದೆ. ಈಗಲೂ ಬಾಕಿಯಿದೆ. ಇನ್ನು ಅವನು ಜೈಲಿನಿಂದ ಬರುವಾಗ ಏನಾದೀತೆಂದು ಹೇಳಲಾಗದು. ಇಡೀ ಗೇಣಿಯನ್ನೇ ತಿಂದು ಓಡಿಹೋಗಲೂ ಸಾಕು. ಬಲಾತ್ಕಾರದಿಂದ ಮತ್ತೂ ಎರಡು ಬೆಳೆಯನ್ನು ಬೆಳಸಿ ತನ್ನಿಂದ ಕೃತ ಪಡಕೊಂಡು ಹೋಗಲೂ ಸಾಕು. ಅಂತೂ ಈ ಕುರಿತು ಈಗಲೇ ತಕ್ಕ ಉಪಾಯ ಕೈಕೊಳ್ಳದಿದ್ದರೆ ಅನರ್ಥವಾದೀತೆಂದೆಣಿಸಿ ಅವರು ಹೊನ್ನಮ್ಮನನ್ನು ಬರಹೇಳಲು ಆಳನ್ನು ಅಟ್ಟಿದರು.

ಹೊನ್ನಮ್ಮ ಮರುದಿನ ಬೆಳಗ್ಗೆ ಅಂಜುತ್ತ ಅಂಜುತ್ತ ತಂತ್ರಿಯವರಲ್ಲಿಗೆ ಬಂದಳು. ಆಕೆಗೆ ಅವರು ಏಕೆ ಹೇಳಿಕಳಿಸಿದರೆಂಬುದು ಅರ್ಥವಾಗಲಿಲ್ಲ. ಅವಳು ಆತನಕ ಹೀಗೆ ಒಬ್ಬಂಟಿಗಳಾಗಿ ಧನಿಗಳಲ್ಲಿ ಹೋದವಳೂ ಅಲ್ಲ. ಎಲ್ಲದಕ್ಕೂ ತನಿಯನೇ ಹೋಗುವುದಿತ್ತು.

"ಹ್ಹೊ! ಬಂದೇಬಿಟ್ಟೆಯಾ!" ಅವಳನ್ನು ನೋಡಿ ಅವರು ಉದ್ಗರಿಸಿದರು. "ನೀನು ಮನೆಯಲ್ಲಿ ಈಗ ಒಬ್ಬಳೇ ಇದ್ದುದರಿಂದ ಬರುವಿಯೋ ಇಲ್ಲವೋ ಎಂದೆಣಿಸಿ ನಾನೇ ಸಂಜೆಗೆ ಅತ್ತ ಬರೋಣ

ಎಂದಿದ್ದೆ."

ಹೊನ್ನಮ್ಮ ಮುಖ ಕೆಳಗೆ ಹಾಕಿಕೊಂಡು ನಿಂತುಕೊಂಡಳು.

"ಯಾಕೆ ನಿಂತಿದ್ದೀ. ಅಲ್ಲಿ ಕುಳಿತುಕೋ. ಬಾಯಾರಿಕೆ ಏನಾದರೂ ಬೇಕೆ ?" ಎಂದು ತಂತ್ರಿಯವರು ಉಪಚರಿಸಿದರು.

ಆಕೆ ಬಾಯಾರಿಕೆ ಬೇಡವೆಂದಳು. ಮತ್ತೆ ತಂತ್ರಿಯವರು ಸ್ವಲ್ಪ ಎಲೆಯಡಿಕೆಯನ್ನು ತಂದು ಅವಳಿಗಿತ್ತರು.

ತನ್ನ ಧನಿಯವರು ಇಷ್ಟು ಸಾಧು ಪ್ರಭಾವದವರೆಂದು ಅವಳಿಗೆ ಈ ತನಕವೂ ಗೊತ್ತಿಲ್ಲ. ತನ್ನ ಗಂಡನಂತೂ ಅವರು ಕ್ರೂರಿಗಳು, ಅನ್ಯಾಯ ಮಾಡುವವರು ಎಂಬುದಾಗಿ ಏನೇನೋ ಹೇಳಿದ್ದ. ಆದರೆ ಈಗಿನ ಅವರ ವರ್ತನೆ ಅವಳ ಎಲ್ಲ ಕಲ್ಪಿತ ಹೆದರಿಕೆಗಳನ್ನೂ ಹೊಡೆದೋಡಿಸಿದುವು.

ತಂತ್ರಿಯವರದು ದೊಡ್ಡ ದೇಹ, ದೊಡ್ಡ ಮನೆ; ದೊಡ್ಡ ಹೆಸರು. ಸಾಲದ್ದಕ್ಕೆ ಆರು ಜನ ಮಕ್ಕಳು ಬೇರೆ. ಹೊನ್ನಮ್ಮನಿಗೆ ಅವರ ಹಂಚಿನ ಮನೆಯ ವಿಸ್ತೀರ್ಣವನ್ನು ನೋಡಿಯೇ ಬೆರಗಾಯಿತು. ಮೂರು ಉಪ್ಪರಿಗೆಗಳು ! ಮನೆಯ ಉಪ್ಪರಿಗೆ ಬಹಳ ದೊಡ್ಡದು. ಚಾವಡಿಯ ಉಪ್ಪರಿಗೆಯೂ ಚಿಂತೆಯಿಲ್ಲ. ಮತ್ತೆ ಕೊಟ್ಟಿಗೆಯ ಉಪ್ಪರಿಗೆ ಸ್ವಲ್ಪ ಚಿಕ್ಕದಾಗಿ ಕಂಡರೂ ಅದು ಉಳಿದವುಗಳಿಗಿಂತ ಎತ್ತರವಿತ್ತು. ಅಂಗಳದಲ್ಲಿ ದೊಡ್ಡದಾದ ಒಂದು ತುಳಸಿಯ ಕಟ್ಟೆ. ಸ್ವಲ್ಪ ಆಚೆ ದೊಡ್ಡದಾದ ಬೈಹುಲ್ಲಿನ ರಾಶಿ. ಕೊಟ್ಟಿಗೆಯಲ್ಲೆಲ್ಲ ಭತ್ತ. ಕಾಗೆಗಳು, ಗುಬ್ಬಚ್ಚಿಗಳು ಮತ್ತು ಪಾರಿವಾಳಗಳು ಒಂದೇ ಸವನೆ ಅದನ್ನು ತಿನ್ನುತ್ತಿವೆ.

ತಂತ್ರಿಯವರು ಒಳಗೆ ಹೋದವರು ಬಹಳ ಹೊತ್ತು ಹೊರಗೆ ಬರಲೇ ಇಲ್ಲ. ಅವರ ಎರಡು ಚಿಕ್ಕ ಮಕ್ಕಳು ಅಲ್ಲೇ ಆಡುತ್ತಿದ್ದುವು. ಅವುಗಳಲ್ಲಿ ಒಂದು ಮಗು ಬಹಳ ಚಂದವಿತ್ತು. ಹೊನ್ನಮ್ಮನಿಗೆ ಅದನ್ನೊಮ್ಮೆ ಹಿಡಿದು ಆಡಿಸಬೇಕೆಂದು ಆಸೆಯಾಯಿತು. ಅದೂ

ಅವಳ ಬಳಿಗೆ ಬಂತು.

ಅದರ ನಸುಗೆಂಪಾದ ತಲೆಗೂದಲುಗಳನ್ನು ಸ್ವಲ್ಪ ಬಾಚಿದ್ದರು. ಅವಳು ಅದನ್ನು ಕೈಯಲ್ಲಿ ಅಮುಕಿಕೊಂಡು, ಅದರ ಕೂದಲನ್ನು ಸವರತೊಡಗಿದಳು. ಮಗು ನಗುತ್ತಿತ್ತು. ಕೇಕೆ ಹಾಕುತ್ತಿತ್ತು. ಒಮ್ಮೆ ಅವಳ ಕಣ್ಣಿಗೆ ಒಂದು ಬೆರಳನ್ನು ಹಾಕಿತು. ಮತ್ತೊಮ್ಮೆ ಅದರ ಪುಟ್ಟ ಕೈಯನ್ನು ಅವಳ ಬಾಯಿಯೊಳಗೆ ದೂಡಿತು. ಅವಳ ತೊಡೆಗಳನ್ನು ಕಾಲುಗಳಿಂದ ಒದೆಯುತ್ತ ನಲಿಯತೊಡಗಿತು. ಅವಳ ಮುಖಕ್ಕೆಲ್ಲ ಉಗುಳಿತು. ಮತ್ತೆ ಅದರಷ್ಟಕ್ಕೆ ತೊದಲು ಮಾತಿನಲ್ಲಿ ಹಾಡುಗಳನ್ನು ಚಪ್ಪಾಳೆ ಹಾಕುತ್ತ ಹೇಳತೊಡಗಿತು.

" ರೊಟ್ಟಿ ಮಾಡಿತು, ಮಗು
ರೊಟ್ಟಿ ಮಾಡಿತು ।
ರೊಟ್ಟಿ ಮಾಡಿ ಮಕ್ಕಳಿಗೆಲ್ಲ
ಸುಟ್ಟಿ ತಂದಿತು ।
ರೊಟ್ಟಿಯನ್ನು ಮತ್ತೆ ಮಗು
ಅಟ್ಟವೇರಿ ಇಟ್ಟಿತು ।
ಅಲ್ಲಿಂದೊಂದು ಗಂಡು ಬೆಕ್ಕು
ಹಾರಿಕೊಂಡು ಹೋ ऽ ऽ ऽ ऽ ಯ್ತು ।"

ಆಗ ಹೊನ್ನಮ್ಮನೂ ಅದರೊಡನೆ " ಹೋ ऽ ऽ ऽ ऽ ಯ್ತು ।" ಎಂದು ದನಿಗೂಡಿಸಿದಳು.

ಮತ್ತೆ ಪುನಃ ಮಗು ಅವಳ ಕೈಯ್ಯನ್ನು ತಪ್ಪಿಸಿಕೊಂಡು ದೂರ ಹೋಗಿ ನೆಲಕ್ಕೆರಡು ಕೈಗಳನ್ನಿಟ್ಟು ಕುಳಿತುಕೊಂಡು ಹೊಟ್ಟೆಯನ್ನು ಆಡಿಸುತ್ತ :

" ಗ್ಹೂಂಕ್ ಗೂಂಕ್ ಗ್ಹೂಂಕ್ऽ
ಗೂಂಕ್ ದನವ ಹುಲಿ ಹಿಡಿಯಿತೆ !
ಇನ್ನೊಂದು ದನವ ನೋಡದೆ !

ಗೂಂಕ್ ಗೂಂಕ್ ಗೂಂಕ್s

ಹೊನ್ನಮ್ಮನ ಆನಂದಕ್ಕೆ ಪಾರವೇ ಇರಲಿಲ್ಲ. ಅವಳಿಗೆ ತಾನೆಲ್ಲಿದ್ದೇನೆಂಬ ಸ್ಮೃತಿಯೂ ಕ್ಷಣಕಾಲ ಇಲ್ಲದಂತಾಯಿತು. ಅವಳು ಮಗುವನ್ನು ಪುನಃ ಅಪ್ಪಿಕೊಂಡಳು. ಅದರ ನುಣುಪಾದ ಕಪೋಲಗಳನ್ನು ಮುದ್ದಿಸಿದಳು. ಅದರ ದವಡೆಗಳನ್ನು ಕೈ ಬೆರಳುಗಳಿಂದ ಹಿಚುಕಿದಳು. ಅದರ ತುಟಿಗೆ ತನ್ನ ತುಟಿಯನ್ನು ಒತ್ತಿದಳು. ಅದು ಅವಳ ತಲೆಗೂದಲುಗಳನ್ನು ಚದರಿಸಿತು. ಅವಳ ಸೀರೆಯ ಸೆರಗನ್ನು ಸೆಳೆದು ಅದನ್ನು ತಿರುಗಿಸಿತು. ಅವಳ ಕುತ್ತಿಗೆಯಲ್ಲಿದ್ದ ಕರಿಮಣಿ ಸರಕ್ಕೆ ಒಮ್ಮೆ ಕೈ ಹಾಕಿತು. ಅವಳ ಹೆಗಲ ಮೇಲೆ ಏರಲು ನೋಡಿತು. ಬೆನ್ನ ಹಿಂದೆ ಬಂದು ಅವಳ ಬೆನ್ನಿಗೆ ಎರಡೂ ಕೈಗಳಿಂದ ಹೊಡೆಯಿತು. ಅವಳು ಅದರ ಗಲ್ಲಕ್ಕೆ, ಎದೆಗೆ, ಹೊಟ್ಟೆಗೆ, ಕಾಲುಗಳಿಗೆ ಎಲ್ಲ ಮುದ್ದಿಟ್ಟಳು.

ಅಷ್ಟರಲ್ಲಿ ಮತ್ತೊಂದು ಮಗುವೂ ಬಂತು. ಅವುಗಳೆರಡೂ ಆಡತೊಡಗಿದವು. ಸ್ವಲ್ಪ ಸಮಯ ಒಂದನ್ನು ಇನ್ನೊಂದು ಓಡಿಸಿತು. ಮತ್ತೆ ಎರಡೂ ನೆಲದ ಮೇಲೆ ಉರುಳಾಡಿದುವು. ಒಂದರ ಕಿವಿಯನ್ನು ಮತ್ತೊಂದು ಹಿಂಡಿತು. ಅದು ಕಣ್ಣಿನೊಳಗೆ ಕೈ ಹಾಕಿತು. ಮತ್ತೊಂದು ಅದನ್ನು ಕಚ್ಚಿತು. ಎರಡೂ ಅಳತೊಡಗಿದುವು.

ಹೊನ್ನಮ್ಮ ಸಣ್ಣ ಮಗುವನ್ನು ಪುನಃ ಎತ್ತಿಕೊಂಡು ಬಂದು ತೊಡೆಯ ಮೇಲೆ ಕುಳ್ಳಿರಿಸಿ ಅದರ ಮೈಯನ್ನು ತಟ್ಟುತ್ತ ಹಿಂದೆ ಮುಂದೆ ವಾಲಿಸುತ್ತ ಸಮಾಧಾನ ಪಡಿಸಿದಳು.

"ನೋಡುವ, ಒಮ್ಮೆ ರೊಟ್ಟಿ ಮಾಡಿ" ಎನ್ನಲು ಮಗು ಚಪ್ಪಾಳೆ ಹಾಕುತ್ತ ರೊಟ್ಟಿ ಮಾಡುವ ಪದ್ಯವನ್ನು ಹಾಡತೊಡಗಿತು.

ಅವಳಿಗೆ ಅದನ್ನು ಹಿಡಿದುಕೊಂಡಷ್ಟೂ ಸಾಕೆನ್ನಿಸಲಿಲ್ಲ. ಅದು ಅಷ್ಟು ಮುದ್ದಾಗಿತ್ತು ಮಾತ್ರವಲ್ಲ, ಅದರ ಲೀಲೆಗಳು ಅಷ್ಟು ಅವಳಿಗೆ ಹುಚ್ಚು ಹಿಡಿಸಿದ್ದುವು. ಅದು ಮತ್ತೆ ಆಡುತ್ತ ಆಡುತ್ತ ಅವಳ

ವೈ ಮೇಲೆಯೇ ಮೂತ್ರವನ್ನು ಸುರಿದು ಬಿಟ್ಟಿತು. ಅವಳಿಗೆ ಆಗ ಸ್ವಲ್ಪ ಹೇಸಿಗೆಯಾಗಿ ವಸ್ತ್ರವನ್ನು ಹಿಂಡಿದಳು. ಆಗ ಮಗು ಮೂತ್ರಕ್ಕೆ ಕೈ ಹಾಕಿ ಅವಳ ಮುಖವನ್ನಪ್ಪಿತು.

"ಥೂ ಮೂತ್ರ ಮಾಡಿ ಅದರಲ್ಲೇ ನಲಿಯುವುದೆ?" ಎಂದು ಅವಳು ಮೃದುವಾಗಿ ಅದರ ಬೆನ್ನನ್ನು ತಟ್ಟಿದಳು.

"ಥೂ !" ಎಂದಿತು ಅದು.

"ನಿಮ್ಮ ಹೆಸರೇನು ?" ಎಂದು ಆಕೆ ಕೇಳಿದಳು.

"ನಿನ್ನೆ ಮನ್ನೆ" ಎಂದು ನೆಗಾಡಿತು.

"ಅಲ್ಲ, ನಾಳೆ ನಾಳದೆ ?"

"ನಿನ್ನ ಈ ಬಳೆ ನನಗೆ ಕೊಡು."

"ಏಕೆ ?"

"ಗಾಡಿ ಮಾಡಲಿಕ್ಕೆ."

"ಗಾಡಿ ಅಪ್ಪನ ಹತ್ತಿರ ಇದೆಯಲ್ಲ ?"

"ಅದು ಅವರಿಗೆ. ನನ್ಗೆ ಬೇರೆ—ಆಗ್ಬೇಕು"

"ಯಾಕೆ ? "

"ಗಂಡನ್ಮನೆಗೆ ಹೋಗ್ಲಿಕ್ಕೆ."

"ಹ್ಹೋ ಚಿನ್ನ. ಗಂಡನ ಮನೆಗೆ ಹೋಗ್ಲಿಕ್ಕೇ ?" ಎಂದು ಹೊನ್ನಮ್ಮ ಎರಡೂ ಕೈಗಳಲ್ಲಿ ಮೇಲೆತ್ತಿ ಹಿಡಿದಳು. ಆಗ ಅದು ಅವಳ ಮುಖಕ್ಕೆ, ತಲೆಗೆ, ಕಣ್ಣುಗಳಿಗೆ — ಎಲ್ಲ ಒದೆಯ ತೊಡಗಿತು.

"ನನಗೆ ನೋವಾಗೋದಿಲ್ಲವೆ ?" ಎಂದು ಆಕೆ ನಗುತ್ತಲೇ ಕೇಳಿದಳು.

"ನೋವಾಗ್ಲಿ ಏನಾಯ್ತು?" ಎಂದಿತದು.

ಅಷ್ಟರಲ್ಲಿ ಒಳಗಿನಿಂದ, "ಲೀಲಾ ಲೀಲಾ, ಎಲ್ಲಿದ್ದೀ ಮಗೂ?" ಎಂದು ಯಾರೋ ಹೆಂಗಸು ಕರೆಯಿತು. ಹೊನ್ನಮ್ಮ ಮಗುವನ್ನು

ಆಗ ಕೆಳಗೆ ಬಿಟ್ಟಳು.

"ಬಂದೆ ಅಮ್ಮಾ" ಎಂದಿತು ಮಗು.

"ಎಲ್ಲಿದ್ದೀ ನೀನು?" ಎಂದು ಕೇಳಿದರು.

"ಇಲ್ಲಿ ಜಗ್ಲಿಯಲ್ಲಿ."

"ಏನು ಮಾಡುತ್ತಿದ್ದೀ? ಬೇಗ ಬಾ" ಎನ್ನುತ್ತ ತಂತ್ರಿಯವರ ಹೆಂಡತಿ ಹೊರಗೆ ಬಂದರು.

ಹೊನ್ನಮ್ಮನಿಗೆ ಅವರ ಗುರುತು ಇತ್ತು. ಅವರನ್ನು ನೋಡಿ ದೊಡನೆ ಅವಳು ಮಗುವನ್ನು ಬಿಟ್ಟು ಎದ್ದುನಿಂತಳು.

"ನೀನು ಅವಳನ್ನು ಮುಟ್ಟಿದೆಯಾ?" ಎಂದು ಅವರು ಕೇಳಿದರು.

"ಹೌದು. ನನ್ನೊಡನೆ ಆಡುತ್ತಿದ್ದರು" ಹೊನ್ನಮ್ಮ ಉತ್ತರಿಸಿದಳು.

"ಹ್ಞ! ಮಡಿ-ಮೈಲಿಗೆ ಒಂದೂ ನಿನಗೆ ತಿಳಿಯದಲ್ಲ? ಇನ್ನು ಮಗುವನ್ನು ಯಾರು ಮೀಯಿಸುವುದು? ಒಳ್ಳೆಯ ಕೆಲಸ ಇದು" ಎಂದು ಅವರು ಹೊನ್ನಮ್ಮನಿಗೆ ಗದರಿಸಿದರು.

ಹೊನ್ನಮ್ಮ ಮಾತಾಡಲಿಲ್ಲ.

ಅಷ್ಟರಲ್ಲಿ ಅವರ ದೊಡ್ಡ ಮಗಳು ಬಂದು ಮಗುವನ್ನೆತ್ತಿಕೊಂಡು ಸ್ನಾನದ ಮನೆಗೆ ಹೋದಳು.

ಹೊನ್ನಮ್ಮನಿಗೆ ತಂತ್ರಿಯವರ ಹೆಂಡತಿ ಮತ್ತೆ ಒಳಗೆ ಗೊಣಗುಟ್ಟುತ್ತಿರುವುದು ಕೇಳುತ್ತಿತ್ತು: ಈ ಮಕ್ಕಳಿಲ್ಲದ ಬಸವಿ ಮಗುವನ್ನು ಮುಟ್ಟಿದರೆ ಮೈಲಿಗೆಯಾಗುತ್ತದೆಂದು ಕೂಡಾ ನೋಡದೆ ಅದನ್ನು ಹಿಡಿದುಕೊಂಡಳು. ಎಲ್ಲಾದರೂ ಅದರ ಕೈಯಲ್ಲಿದ್ದ ಬಳೆ ಯನ್ನು ತೆಗೆಯಲೂ ಯತ್ನಿಸಿದಳೋ ಏನೋ! ಇವಳ ಬಂಗಾರದ ಬೀಸಣಿಗೆಯನ್ನು ಬೀಸಿಕೊಂಡು ಬೆಳಗ್ಗೆಯೇ ಏಕೆ ಮೂಡಿದಳೋ! ಅವಳು ನೋಡಿ ಮಗುವಿಗೆ ದೃಷ್ಟಿಯಾಗಿರಲೂಬಹುದು — ಹೀಗೆಂದು

ಏನೇನೋ ಅವರು ಒದರುತ್ತಿದ್ದರು. ಅವಳಿಗೆ ಈ ಮಾತುಗಳನ್ನು ಕೇಳಿ ತುಂಬಾ ಖೇದವಾಯಿತು.

ಮಗುವನ್ನು ತಾನಾಗಿ ಬಳಿಗೆ ಕರೆದಿರಲಿಲ್ಲ ಅವಳು. ಅದಾಗಿಯೆ ಅವಳ ಬಳಿಗೆ ಬಂದು ಆಡತೊಡಗಿತ್ತು. ಅವಳೇನಾದರೂ ಅದನ್ನು ನೋಯಿಸಿರಲಿಲ್ಲ; ಅದಕ್ಕೆ ಬೈದಿರಲಿಲ್ಲ. ಬದಲಾಗಿ ಅವಳು ಅದನ್ನು ಪ್ರೀತಿಸಿದ್ದಳು. ಅದನ್ನು ಆಡಿಸಿದ್ದಳು. ಮತ್ತೇನು? ಮೈಲಿಗೆ?... ಹೂಂ. ತಾನು ಮಾಂಸಾಹಾರಿ, ನಿಜ. ಆದರೆ ಆ ಮಾಂಸವನ್ನು ತನ್ನೊಡನೆ ತಂದಿಲ್ಲ. ಮಗುವಿಗೆ ಕೊಟ್ಟಿಲ್ಲ. ಕೇವಲ ಅದನ್ನು ಮುಟ್ಟಿದ ಮಾತ್ರಕ್ಕೇ ಅದು ಮೈಲಿಗೆಯಾದೀತೆ? ಅಂತೂ ಧನಿಗಳ ಹೆಂಡತಿಗೆ ತನ್ನಮೇಲೆ ಮಕ್ಕಳಿಲ್ಲದವಳೆಂದು ಬಹುಶಃ ತಾತ್ಸಾರವಿದೆ. ಇಲ್ಲವೇ ಜೈಲಿಗೆ ಹೋದವನ ಹೆಂಡತಿಯೆಂಬ ಜಿಗುಪ್ಸೆಯಿದೆ. ಅವರು ಶ್ರೀಮಂತರು. ಅವರು ಮಾಡಿದ್ದೆಲ್ಲಾ ನಡೆದು ಹೋಗುವುದು. ತಾನು ಬಡವಳು. ತನ್ನನ್ನು ನೋಯಿಸಲು, ತನ್ನನ್ನು ಹಿಂಸಿಸಲು ಅಗಣಿತ ಸಂದರ್ಭಗಳು ಅವರಿಗೆ ಸಿಗುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಅವರೂ ಆ ಮಗುವಿನಂತೆ ಒಂದಲ್ಲ ಒಂದು ದಿನ ವರ್ತಿಸಿರ ಬೇಕು. ಅವರೂ ಮಡಿ-ಮೈಲಿಗೆಗಳ ಸೂತಕವಿಲ್ಲದೆ, ಆಚಾರ-ವಿಚಾರ ಗಳ ಬಂಧನವಿಲ್ಲದೆ, ಎಲ್ಲರೊಡನೆ ಸಮವರ್ತಿಯಾಗಿ ಜೀವಿಸಿರಲೇ ಬೇಕು. ಆದರೆ ಅವರ ನಂತರದ ವಾತಾವರಣ, ಸಂಸ್ಕಾರ, ಸಾಂಪ್ರದಾಯಗಳು ಈ ಸ್ವಯಂಶ್ರೇಷ್ಠ ಭಾವನೆಯನ್ನು ಉಂಟು ಮಾಡಿರಬೇಕು. ಇನ್ನುಮುಂದೆ ಆ ಮಗುವೂ ಅವರ ನಡತೆಯನ್ನು ಅನುಕರಿಸದಿರದು. ಅದೂ ಇನ್ನು ಕೆಲವರ್ಷಗಳ ಬಳಿಕ ಮೈಲಿಗೆ ಯಿಂದ ದೂರವಾಗಬಹುದು.

ಹೀಗೆ ಹೊನ್ನಮ್ಮ ನೆನೆಯುತ್ತಿದ್ದಾಗ ತಂತ್ರಿಯವರು ಹೊರಗೆ ತೇಗುತ್ತ ಬಂದರು. ಅವಳು ಎದ್ದು ನಿಂತುಕೊಂಡಳು. ಅವರು ಮೇಲೆ ಹೋಗಿ ತಲೆದಿಂಬಿಗೆ ಒರಗಿ ಕುಳಿತುಕೊಂಡರು.

ಹೊನ್ನಮ್ಮನಿಗೆ ಆಗ ಹಸಿವಾಗುತ್ತಿತ್ತು. ತಂತ್ರಿಯವರು ಏಕೆ ತನ್ನನ್ನು ಕರೆದಿದ್ದರೆಂಬುದು ಇನ್ನೂ ಅವಳಿಗೆ ಗೊತ್ತಾಗಿರಲಿಲ್ಲ. ಏನಾದರೂ ವಿಶೇಷ ಸಂಗತಿಗಳಿಲ್ಲದೆ ಅವರು ಬರಹೇಳರು. ಈಗಂತೂ ತನ್ನ ಗಂಡನ ವಿಚಾರವೊಂದು ಹೇಗಾದರೂ ಇದ್ದೇ ಇದೆ.

"ನಿನ್ನ ಗಂಡನಿಗೆ ಕದಿಯಲು ಸನ್ನಾಹ ಮಾಡುತ್ತಿದ್ದನೆಂದು ಎರಡು ತಿಂಗಳು ಜೈಲಾಯಿತಂತೆ" ಎಂದರವರು.

ಹೊನ್ನಮ್ಮನಿಗೆ ಈ ಸುದ್ದಿ ಈತನಕ ಸಿಕ್ಕಿರಲಿಲ್ಲ. ಎರಡು ತಿಂಗಳು ಜೈಲು ಎಂದೊಡನೆ ಅವಳಿಗೆ ಏನನ್ನೂ ಹೇಳಲಾಗಲಿಲ್ಲ. ಬದಲಾಗಿ ಕ್ಷಣ ಕಾಲ ಕಣ್ಣಮುಂದೆ ಕತ್ತಲು ಕವಿದಂತಾಯಿತು. ಈ ಎರಡು ತಿಂಗಳ ಸಮಯದ ಅಂತರ ಅಭೇದ್ಯವಾಗಿ ಅನಂತವಾಗಿ ತೋರಿತವಳಿಗಾಗ.

"ಅವನು ಕದಿಯಲು ಹೋಗುತ್ತಿದ್ದುದು ನಿನಗೆ ತಿಳಿದಿದೆಯೆ?" ಎಂದು ಅವರು ಸ್ವಲ್ಪ ಹೊತ್ತು ಕಳೆದ ಬಳಿಕ ಕೇಳಿದರು.

"ಇಲ್ಲ."

"ಅಲ್ಲಿ ಇದ್ದುದನ್ನು ಹೇಳಿಬಿಡು. ಅವನಿಗಂತೂ ಶಿಕ್ಷೆಯಾಗುವುದು ಆಗಿ ಬಿಟ್ಟಿದೆ."

"ನನಗೆ ತಿಳಿಯದಪ್ಪ!" ಎಂದು ಅವಳು ಅಳ ತೊಡಗಿದಳು.

"ನಿನ್ನೊಡನೆ ಏನಾದರೂ ಹಣವಿರುತ್ತಿದ್ದರೆ ಅಪೀಲು ಮಾಡಬಹುದಿತ್ತು."

"ನನ್ನೊಡನೆ ಇಲ್ಲ ಧನಿಯವರೆ. ನೀವೇ ಏನಾದರೂ ಸಹಾಯ ಮಾಡುತ್ತಿದ್ದರೆ ಅವರು ಮರಳಿದ ಬಳಿಕ ಹಿಂದೆ ಕೊಡುತ್ತಿದ್ದರು."

"ಹೊಂ. ಈಗ ಅವನು ಕಳ್ಳತನ ಮಾಡದೆಯೇ ಇರಬಹುದೆನ್ನೋಣ. ನನಗೆ ಎಷ್ಟೋ ವರ್ಷಗಳಿಂದ ಅವನು ತಿಳಿದವ. ಯಾರಿಗೂ ಉಪದ್ರ ಕೊಡದವ. ಅವನು ಕದ್ದಿದ್ದಾನೆಂದು ಯಾರು ಹೇಳಿದರೂ ನಾನು ಫಕ್ಕನೆ ನಂಬಲಾರೆ. ಆದರೆ ಈಗ ಕೋರ್ಟಿನಲ್ಲಿ

ಕೊಟ್ಟ ಹೇಳಿಕೆಗಳು, ಸಾಕ್ಷಿಗಳ ರುಜುವಾತುಗಳು – ಇವನ್ನೆಲ್ಲ ನೋಡುವಾಗ ನನಗೂ ಸಂಶಯ ಬರುತ್ತದೆ."

"ಏನೋ ಜುಗಾರಿ ಆಡಿದ್ದರಂತೆ. ಪೋಲೀಸರು ಆಗ ಅವರನ್ನು ಹಿಡಿದುದಂತೆ. ವೆಂಕಪ್ಪಣ್ಣನ ಮಗ ಮಾರಪ್ಪನೂ ಅಲ್ಲೇ ಇದ್ದನಂತೆ. ಅವನು ಹಾಗೆಂದ."

"ನಿನಗೆ ಅಷ್ಟು ಧೈರ್ಯವಿದ್ದರೆ ಅಪೀಲು ಮಾಡಿಯೋ ಬಿಡೋಣ. ಮತ್ತೆ ಯಾಕೆ ಈ ಹಣ, ಈ ಸಂಪತ್ತು? ಋಣಂ ಕೃತ್ವಾ ಘೃತಂ ಪಿಬೇತ್ ಎಂದು ಹೇಳುತ್ತಾರೆ. ಅಂದರೆ ಸಾಲ ಮಾಡಿಯಾದರೂ ತುಪ್ಪವನ್ನು ಕುಡಿಯಬೇಕೆಂದು. ಈಗ ಅಂಥದೇ ಸಂದರ್ಭವಿದು. ನಿನ್ನೊಡನೆ ಇದ್ದುದನ್ನೆಲ್ಲಾ ಖರ್ಚು ಮಾಡಿಯಾದರೂ ಇದರಲ್ಲಿ ಸಾಧನೆ ಮಾಡಬೇಕು. ಅವನಿಗೆ ಹಾಳು ಹೆಸರು ಬಾರದಂತೆ ಯತ್ನಿಸಬೇಕು."

"ನನ್ನೊಡನೆ ಏನಿದೆ ಧನಿಯವರೇ!" ಎಂದು ಹೊನ್ನಮ್ಮ ಅಳುತ್ತ ಹೇಳಿದಳು. "ಇದ್ದುದೆಲ್ಲ ಈಗ ಖರ್ಚಾಗಿದೆ. ಅವರಿಗೆ ಕಳೆದ ವರ್ಷ ಕಾಲು ನೋವಾದಾಗ ನನ್ನ ಪೆಟ್ಟಿಗೆಯಲ್ಲಿದ್ದ ಪಾವಾಣೆಗಳನ್ನು ಕೂಡಾ ಹೆಕ್ಕಿ ಕೊಟ್ಟಿದ್ದೇನೆ. ತಾವೇನಾದರೂ...."

"ಹ್ಹೊ! ಹ್ಹೊ! ನಾನೇ? ನನ್ನಿಂದೇನಾಗಬಹುದು? ಕ್ರಿಮಿನಲ್ ವ್ಯವಹರಣೆಯೆಂದರೆ ಸಾಮಾನ್ಯವೆ? ಅದೂ ಪೋಲೀಸರ ವಿರುದ್ಧ! ವಕೀಲರಿಗೆ ಎಷ್ಟು ಕೊಡಬೇಕು! ಸಾಕ್ಷಿಯವರಿಗೆ ಎಷ್ಟು ತಿನ್ನಿಸಬೇಕು! ಅಲ್ಲ, ನಿನಗೆ ಅವನನ್ನು ಬಿಡಿಸಬೇಕೆಂಬ ಆಸೆಯಿದ್ದರೆ ಸಾಧನೆ ಮಾಡೋಣ ಎಂದು ನಾನು ಹೇಳಿದೆ ಅಷ್ಟೆ. ಇಲ್ಲವಾದರೆ ಏನೂ ಇಲ್ಲ. ಜೈಲನ್ನನುಭವಿಸಿ ಬರುತ್ತಾನೆ. ಈಗ ಜೈಲಿನಲ್ಲೂ ಏನೂ ತೊಂದರೆಯಿಲ್ಲ."

ಹೊನ್ನಮ್ಮ ಬಿಕ್ಕಿ ಬಿಕ್ಕಿ ಅಳತೊಡಗಿದಳು

ಮತ್ತೆ ಅವರು ಮುಂದರಿಸಿದರು: "ಜೈಲಿಗೆ ಹೋದರೆ ಈಗಿನ

ಕಾಲದಲ್ಲಿ ಮರ್ಯಾದೆ ಹೋಗುವುದಿಲ್ಲ. ಈಗಿನ ನಮ್ಮ ಪ್ರಧಾನಿ ನೆಹರೂ ಕೂಡಾ ಏಳು ವರ್ಷ ಜೈಲಿನಲ್ಲಿದ್ದರು! ಆದರೆ ಕದಿಯಲಿಕ್ಕೆ ಯತ್ನಿಸಿ ಹೋದನೆಂದರೆ ಸ್ವಲ್ಪ ಮರ್ಯಾದೆ ಕಡಿಮೆಯಾಗುತ್ತದೆ. ಅಷ್ಟೆ. ಅದಿರಲಿ ಪೈರು ಹೇಗಿದೆ?"

"ಹೂ. ಸಾಧಾರಣವಿದೆ."

"ನೋಡು—ಚಿನ್ನಮ್ಮ, ಅಲ್ಲಲ್ಲ, ನಿನ್ನ ಹೆಸರು....ಹೊನ್ನಮ್ಮ ಅಲ್ಲವೇ? – ಹೊನ್ನಮ್ಮ, ಮಾತು ಮಾತು ಪ್ರಸಂಗೇಣ ಗೇಣಿ ಅಕ್ಕಿ ವಿಸ್ಮೃತಿ ಆಗಬಾರದು. ತನಿಯನದ್ದು ಹಿಂದಿನ ಬಾಕಿಯಿದೆ. ಈವರ್ಷ ಏಣೆಲಿನಲ್ಲಿ (ಮಳೆಗಾಲದ ಬೆಳೆ) ಅರ್ಧ ಗೇಣಿ ಕೂಡಾ ಅವನು ಕೊಡಲಿಲ್ಲ. ನೀನಂತೂ ಹೆಣ್ಣು ಹೆಂಗಸು. ಒಬ್ಬಳಿರುವವಳು. ನಿನ್ನಿಂದ ಪೈರು ಕಟಾವಿನ ಕೆಲಸ ಸರಿಯಾಗಲಿಕ್ಕಿಲ್ಲ. ಆದ್ದರಿಂದ ನಾನೇ ಮಾಡಿಸಿ ಬಿಡುತ್ತೇನೆ. ನಿನ್ನೆದುರಲ್ಲೇ ಭತ್ತ ಅಳೆಯಬಹುದು. ಮತ್ತೇನಾದರೂ ನಿನ್ನನ್ನು ಕಷ್ಟಕ್ಕೆ ಗುರಿ ಪಡಿಸಬೇಕೆಂದು ನಾನು ಇಚ್ಛಿಸುತ್ತಿಲ್ಲ."

ಹೊನ್ನಮ್ಮನಿಗೆ ತಂತ್ರಿಯವರ ಮಾತುಗಳನ್ನು ನಂಬಲಾಗಲಿಲ್ಲ. ಅವರು ಪೈರು ಕೊಯ್ಯುವುದು! ಗೇಣಿಯಲ್ಲಿ ಬಾಕಿಯಿರಬಹುದು ನಿಜ. ಆದರೆ ತನ್ನ ಗಂಡ ಬೆಳೆಸಿದ ಪೈರನ್ನು ಅವರು ಕೊಯ್ಯುವುದೆಂದರೆ! ಇದರಿಂದ ಅವರು ಲಾಭ ಪಡೆಯಲೆತ್ನಿಸುತ್ತಾರೆಂದು ಅವಳಿಗೆ ತೋರಿತು.

"ಹೇಗಾದರೂ ಬೆಳೆಯನ್ನು ನಾನೇ ಕಟಾವು ಮಾಡಿಸುತ್ತೇನೆ" ಅವಳೆಂದಳು. "ನಿಮ್ಮ ಗೇಣಿಯನ್ನೂ ಬಾಕಿಯನ್ನೂ ಅದರಿಂದ ಕೊಡದೆ ಇರಲಾರೆ."

ತಂತ್ರಿಯವರ ಸಮಾಧಾನ ಇದರಿಂದಾಗಿ ಇಳಿದುಹೋಯಿತು. ಅವರಿಗೆ ಮೊದಲೇ ಸಂಶಯವಿತ್ತು.

"ಓಹ್ಹೊ! ನಿನ್ನ ಕಡೆಯಲ್ಲಿ ಜನರಿದ್ದಾರೆ! ನಿನಗೆ ಹೇಳಿಕೊಡುವ

ಪರಿದ್ದಾರೆ. ನನಗೆ ಗೊತ್ತಿಲ್ಲವೆ, ಆ ವೆಂಕಪ್ಪನ ಮಗನನ್ನು ನೀನು ಮರುಳು ಮಾಡಿರುವುದು? ಮೊನ್ನೆ ನಮ್ಮ ಚೆನ್ನ ಅವನನ್ನು ನಿನ್ನ ಮನೆಯಲ್ಲಿ ಕಂಡನಂತೆ. ಚಿಂತಿಲ್ಲ. ನನ್ನ ಗೇಣಿ ನನ್ನ ಕೈಯೊಳಗೆ ಇದೆ, ತಿಳಿಯಿತೆ?" ಎಂದು ಅವರಾಗ ಒಮ್ಮೆಲೇ ಸಿಡಿದುಬಿದ್ದರು.

ಹೊನ್ನಮ್ಮ ಗಟ್ಟಿಯಾಗಿ ಕೂಗತೊಡಗಿದಳು. ತಂತ್ರಿಯುವರ ಮಕ್ಕಳು ಅಲ್ಲೇ ನಿಂತುಕೊಂಡು ನೋಡುತ್ತಿದ್ದುವು. ಸಣ್ಣ ಮಗುವು ಒಮ್ಮೆ ಅವಳ ಬಳಿಗೆ ಹೋದುದನ್ನು ಅವರ ಮಗಳು ಪುನಃ ಎತ್ತಿಕೊಂಡು ಒಳಗೆ ಹೋದಳು.

ಹೊನ್ನಮ್ಮ ಫಕ್ಕನೆ ತಂತ್ರಿಯುವರ ಬಳಿಗೆ ಹೋಗಿ ಅವರ ಕಾಲುಗಳನ್ನು ಹಿಡಿದುಕೊಂಡು ಅತ್ತಳು.

"ಅಯ್ಯೋ ಸ್ವಾಮಿ! ನಿಮಗೇ ಗೊತ್ತಿದೆ, ನಾನೆಂಥ ಕಷ್ಟದಲ್ಲಿ ಇದ್ದೇನೆಂದು. ನನ್ನನ್ನು ಇನ್ನು ಬೇಕಾದರೆ ನೀವು ಕೊಲ್ಲಿ. ಆದರೆ ಬೆಳೆ ಕೊಯ್ಯಬೇಡಿ. ನಮ್ಮ ಎತ್ತುಗಳು ಮತ್ತೆ ಏನು ತಿನ್ನಬೇಕು? ನಾನು ಮಾತು ಕೊಟ್ಟಂತೆ ನಿಮ್ಮ ಎಲ್ಲಾ ಬಾಕಿಯನ್ನೂ ನಾನು ಬೆಳೆ ಕೊಯ್ದ ಕೂಡಲೇ ಸಂದಾಯ ಮಾಡುತ್ತೇನೆ. ಬಡವರ ಮೇಲೆ ಪ್ರೀತಿಯಿಡಿ."

"ಎಲ್ಲಾ ನಿನ್ನ ನಾಟಕ ನನಗೆ ಗೊತ್ತಿದೆ ನಾಯಿ" ತಂತ್ರಿಯುವರು ಗರ್ಜಿಸಿದರು. "ಗಂಡನನ್ನು ಜೈಲಿನಿಂದ ಹಿಂದೆ ತರಿಸುವ ಅಗತ್ಯ ನಿನಗಿಲ್ಲ. ಅವನನ್ನು ಫಾಶೀ ಶಿಕ್ಷೆಗೊಳಪಡಿಸಿದರೂ ನಿನಗೆ ಸಂತೋಷವೇ, ಅಲ್ಲವೆ? ನಿನಗೆ ಊರಿನಲ್ಲಿ ಬೇಕಾದಷ್ಟು ಜನರಿದ್ದಾರೆ. ನಿನ್ನಲ್ಲಿ ಅವರನ್ನು ಮಂಕುಮಾಯ ಮಾಡುವಷ್ಟು ಚೈತನ್ಯವೂ ಇದೆ. ಆ ಮುದಿ ತನಿಯ ನಿನಗೆ ಮತ್ತೆ ಏಕೆ? ನನಗೆ ಈ ಕೆಟ್ಟ ಹೆಸರು ಬರುವುದು ಬೇಡ. ನನ್ನ ಒಕ್ಕಲಿನವರು ಈತನಕ ಯಾರೂ ಕಳ್ಳತನ ಮಾಡಿ ಜೈಲಿಗೆ ಹೋದುದಿಲ್ಲ."

"ಧನಿಯುವರೇ!" ಎಂದು ಹೊನ್ನಮ್ಮ ರೋದಿಸಿದಳು. "ತಾವು

ಾಗೆಲ್ಲ ಹೇಳಬೇಡಿ. ನನಗೆ ಯಾರೂ ಹೇಳಿಕೊಡುವವರಿಲ್ಲ. ತಾವು ೇಳಿದಂತೆಯೇ ಆಗಲಿ. ಆದರೆ ಹೀಗೆ ನನ್ನ ಮೇಲೆ ಅಪವಾದಗಳನ್ನು ೇಳಬೇಡಿ. ಮಾರಪ್ಪ ಇಂದು ನಿನ್ನೆಯಿಂದಲ್ಲ ನಮ್ಮ ಮನೆಗೆ ಬರು ತ್ತಿರುವುದು. ಲಂಗೋಟಿ ಹುಡುಗನಾಗಿದ್ದಾಗಿನಿಂದಲೂ ಬರುತ್ತಿದ್ದಾನೆ. ಾನು ಅವನನ್ನು ನನ್ನ ಮಗನೆಂದೇ ಭಾವಿಸಿದ್ದೇನೆ ವಿನಾ ಬೇರೇನಿಲ್ಲ."

"ನೀನು ಅವನನ್ನು ಹೇಗೆಂದು ಭಾವಿಸಿದರೂ ನನಗೆ ನಷ್ಟವಿಲ್ಲ. ಏನಾದರೆ ನನಗೇನು? ನನ್ನ ಗೇಣಿ ಸಂದಾಯವಾದರೆ ಸಾಕು. ೀನು ಹೆಣ್ಣು ಹೆಂಗಸು. ಯಾರನ್ನು ಕೆಲಸಕ್ಕೆ ನೇಮಿಸಿಕೊಳ್ಳಬಲ್ಲೆ? ೀನು ಕರೆದರೆ ಯಾರು ಬಂದಾರು? ಇಲ್ಲಿ ನಾನೊಮ್ಮೆ ಎಲ್ಲ ಒಕ್ಕಲಿ ಗರೊಡನೆ ಹೇಳಿದರೆ ಒಂದೇ ದಿನದಲ್ಲಿ ಕಟಾವು ಮುಗಿದುಹೋಗು ತ್ತದೆ. ನನಗೆ ಬರಬೇಕಾದ್ದಕ್ಕಿಂತ ಹೆಚ್ಚಿಗೆ ಒಂದು ಕಾಳು ಅಕ್ಕಿಯೂ ೇಡ, ತಿಳಿಯಿತೆ?"

ಹೊನ್ನಮ್ಮ ಕಣ್ಣೀರನ್ನು ಒರೆಸಿಕೊಂಡು 'ಹೂಂ' ಎಂದಿಷ್ಟೇ ಂದಳು. ಅವಳಿಗೆ ತಂತ್ರಿಯವರ ಬಹುಮುಖವಾದ ಮಾತಿನ ಬಲೆ ಯಿಂದ ಪಾರಾಗಲಾಗಲಿಲ್ಲ.

ಅವರ ಮನೆಯಿಂದ ಆಕೆ ಹೊರಬಿದ್ದಳು. ತನಗೊಬ್ಬ ಮಗನಿರುತ್ತಿದ್ದರೆ ಹೀಗೆ ಎಲ್ಲರೂ ತನ್ನನ್ನು ಹಂಗಿಸಲಿಕ್ಕಿತ್ತೇ? ಎಂದು ಮರುಗಿದಳು. ಆಗ ಅವಳಿಗೆ ತನ್ನ ಗಂಡನೊಡನೆ ತಾನು ಅಂದು ಹರಿಕಥೆ ಕೇಳಲು ಬಂದುದು ನೆನಪಾಯಿತು. ಹಿಂತಿರುಗುವಾಗ ಮಾರಪ್ಪನು ಸಾವಿತ್ರಿಯ ಕಥೆಯನ್ನೆಂದುದರ ಜ್ಞಾಪಕವೂ ಬಂತು. ಆದರೆ ಆ ಸಾವಿತ್ರಿ ಎಲ್ಲಿ, ಅವಳ ತಾಯಿಯೆಲ್ಲಿ, ನಾನೆಲ್ಲಿ ಎಂದು ಆಕೆಗೆ ತೋರಿತು. ಅಂಥ ತಪಸ್ಸು, ಅಂಥ ಪೂಜೆ, ಅಂಥ ಯತ್ನ— ಇವೆಲ್ಲ ತನಗೆ ಸಾಧ್ಯವೆ?

ತಾನು ಆ ಘಳಿಗೆಯಲ್ಲಿ ನಿರ್ಗತಿಕಳು, ಕೇಳುವವರಿಲ್ಲದವಳು ಎಂದು ಆಕೆಗೆ ಹೊಳೆಯಿತು, ತನ್ನ ಮನೆಯ ಒಳಹೊಕ್ಕಾಗ.

೯

ತನಿಯನಿಗೆ ಸೆರೆಮನೆಯ ವಾಸ ಮೊದಲು ಅಷ್ಟೊಂದ
ಮೆಚ್ಚುಗೆಯಾಗಲಿಲ್ಲ. ಆದರೆ ಅದು ಪೋಲೀಸರ ಕೋಣೆಗಿಂ
ಎಷ್ಟೋ ಪಾಲು ಒಳ್ಳೆಯದಿತ್ತು. ಇಲ್ಲಿ ಘಳಿಗೆ ಘಳಿಗೆ ಅವನನ್ನು
ಬಲಾತ್ಕರಿಸುವವರು ಇಲ್ಲವೇ ಕೆಣಕುವವರು ಇರಲಿಲ್ಲ. ಹೊಟ್ಟೆ
ಕೊಡುತ್ತಿದ್ದ ಆಹಾರ ಸಾಕಷ್ಟಿರದಿದ್ದರೂ ಅವನಿಗೆ ಕೆಲಸವು
ಅಷ್ಟೊಂದು ಹೆಚ್ಚಿಗೆ ಇರಲಿಲ್ಲ. ಅವನಿಗೆ ದಿನಾಲೂ ಏನಾದರೂ ಅಲ್ಪ
ಸ್ವಲ್ಪ ಸೆರೆಮನೆಯೊಳಗಿನ ಕೆಲಸ ಮಾತ್ರ ಇರುತ್ತಿತ್ತು. ಅದ
ದಿನಾಲೂ ಬೆಳಗಿನಿಂದ ಸಂಜೆಯತನಕ ಕಲ್ಲನ್ನು ಪುಡಿಮಾಡುವ ಕೆಲಸ
ಕ್ಕಿಂತಲೂ ಎಷ್ಟೋ ಪಾಲು ಲಘುವಾಗಿತ್ತು. ಏನಾದರೂ ಒಮ್ಮೊಮ್ಮೆ
ಜೈಲರನಿಂದ ಬೈಗಳನ್ನು ಕೇಳಬೇಕಿತ್ತು. ಒಮ್ಮೊಮ್ಮೆ ಪೆಟ್ಟು ಬೀಳುವ
ದಿತ್ತು. ಆದರೆ ಇಲ್ಲಿಯ ಜೀವನದಲ್ಲಿ ವಿಶೇಷವಾದ ವ್ಯಥೆ ಇರಲಿಲ್ಲ
ಅವನನ್ನು ಗುರುತಿಸುವವರು, ಅವನನ್ನು ನಿಂದಿಸುವವರು – ಯಾರೂ
ಇರಲಿಲ್ಲ. ಇರುವ ಅಧಿಕಾರಿಗಳ ಹೊರತಾಗಿ ಉಳಿದವರೆಲ್ಲ ಒಂದಲ್ಲ
ಒಂದು ವಿಧದ ಅಪರಾಧವನ್ನು ಮಾಡಿದ್ದವರೇ ಆಗಿದ್ದರು. ತಮ್ಮ
ತಪ್ಪನ್ನಡಗಿಸಿಕೊಳ್ಳುವ ಹವ್ಯಾಸ ಅವರಿಗೆ ಇದ್ದೇ ಇಲ್ಲ. ಕೆಲವರು ತಾವು
ಮಾಡಿದ ಅಪರಾಧಗಳ ಕುರಿತು ಉಳಿದವರೊಡನೆ ಜಂಭ ಕೊಚ್ಚಿ

ಿಳ್ಳುತ್ತಿದ್ದರು. ಕೆಲವರು ತಾವು ನಿರಪರಾಧಿಗಳಾಗಿದ್ದರೂ ಈ ಃಗೆ ಬಂದೆವಲ್ಲ ಎಂದು ದಿನವಿಡೀ ಕೊರಗುತ್ತಿದ್ದರು. ಕೆಲವರು ್ವು ಇನ್ನು ಸೆರೆಮನೆಯಿಂದ ಹೊರಬೀಳುವ ದಿನಗಳನ್ನು ಎಣಿಕೆ ುಕುತ್ತಿದ್ದರು. ಮತ್ತೆ ಕೆಲವರು ಸೆರೆಮನೆಯು ತಮ್ಮ ತವರೂರೆಂದೂ ೀದಸರಿದ್ದರು. ಅವರಿಗೆ ಜೈಲಿನಲ್ಲಿ ಸಾಕಷ್ಟು ಅನುಕೂಲತೆಗಳು ೂರೆಯುತ್ತಿದ್ದುವು. ಸೇದಲಿಕ್ಕೆ ಬೀಡಿ, ಒಮ್ಮೊಮ್ಮೆ ಒಂದು ಕಪ್ಪು ಿ ಚಹ, ಉಣ್ಣಲು ಹೆಚ್ಚಿಗೆ ಆಹಾರ ಇವನ್ನೆಲ್ಲ ಅವರು ಹೇಗಾದರೂ ಾಡಿ ದೊರಕಿಸಿಕೊಳ್ಳುತ್ತಿದ್ದರು. ಮತ್ತೆ ಅಡುಗೆ ಮನೆಯಲ್ಲಿ ಲಸ ಮಾಡುವ ಹಳೆಯ ಕೈದಿಗಳಿಗಂತೂ ಸೆರೆಮನೆಯನ್ನು ಬಿಟ್ಟು ೂರಡುವ ಮನಸ್ಸೇ ಇರಲಿಲ್ಲ.

ಅದೂ ದಿನಾಲೂ ಕೆಲವು ಜನ ಬರುತ್ತಿದ್ದರು, ಕೆಲವು ಜನ ೂರಗೆ ಬಿಡುಗಡೆ ಹೊಂದಿ ಹೋಗುತ್ತಿದ್ದರು. ಒಳಗೆ ಬರುವ ೂನಬರಿಗೆ ಹಳೆಯವರು ಬುದ್ಧಿ ಹೇಳುವರು. ತಮ್ಮ ಮನೆಯ ಮಾಪದವರಾಗಿದ್ದರೆ, ಊರಿನ ಸ್ಥಿತಿಗತಿಗಳನ್ನು ಕೇಳುವರು. ಮತ್ತೆ ಲವರು ದೊಡ್ಡ ತಕ್ಸೀರುಗಳ ವಿಚಾರಣೆಗಾಗಿ ಅಲ್ಲಿ ಬಂದವರು. ಂಥವರಿಗೆ ಉಳಿದವರೊಡನೆ ಹೆಚ್ಚಿಗೆ ಸಂಪರ್ಕ ಬೆಳೆಯದು.

ಅಲ್ಲಿ ತಸಿಯುವಷ್ಟು ಕಡಿಮೆ ಬುದ್ಧಿ ಶಕ್ತಿಯುಳ್ಳವರು ಹೆಚ್ಚು ಂದಿಯಿರಲಿಲ್ಲ. ಒಬ್ಬ ಹತ್ತನೇ ಬಾರಿ ಜೈಲಿಗೆ ಬಂದವನಂತೆ. ಸ್ನೊಬ್ಬ ಮೂವತ್ತು ಬಾರಿ ಕದ್ದಿದ್ದರೂ ಇದು ಎರಡನೆಯ ಸಲ ಕ್ಷೆಗೊಳಗಾದವನಂತೆ. ಮತ್ತೊಬ್ಬ ಕೇವಲ ಹದಿನೈದು ವರ್ಷದ ಎಳೆ ಡುಗ. ಅವನು ಆಗಲೇ ನಾಲ್ಕು ಸಲ ಜೈಲಿಗೆ ಬಂದಾಗಿತ್ತಂತೆ! ೈಲಿನ ಹೊರಗೆ ಅವನಿಗೆ ಕೆಲಸ ಸಿಗದಂತೆ. ಮನೆಯಲ್ಲಿ ಉಣ್ಣಲಿಕ್ಕೆ ಲ್ಲವಂತೆ. ಹೆಂಗಸರ ಕೈಚೀಲಗಳನ್ನು ಕದಿಯುವುದರಲ್ಲಿ ಅವನು ಸ್ಸೀಮನಂತೆ. ಅವನ ಗೆಳೆಯನೊಬ್ಬನಿಗೆ ಹದಿಮೂರು ಕೈಗಡಿಯಾರ ಳನ್ನು ಕದ್ದು ಕೊಟ್ಟಿದ್ದಾನಂತೆ. ಅವನೊಡನೆ ಮನೆಯಲ್ಲಿ ಎಷ್ಟೋ

ಹಣದ ಚೀಲಗಳಿವೆಯಂತೆ.

"ನೀನೇನು ಹೆಣಗಳ ಕಿಸೆಯಿಂದ ಹೀಗೆ ಕದ್ದಿದ್ದೀಯಾ?"
ಎಂದು ತನಿಯನೊಮ್ಮೆ ಆಶ್ಚರ್ಯದಲ್ಲಿ ಕೇಳಿದ್ದ.

"ಇಲ್ಲ ಅಣ್ಣ" ಅವನು ಉತ್ತರಿಸಿದ್ದ. "ನೋಡು, ನಾನ ಮನೆಗೆ ಹೋದರೆ ಅಲ್ಲಿ ತಂದೆ ಅನ್ನ ಹಾಕಲಾರ. ಗದ್ದೆ ಉ ಬೇಕೆನ್ನುವ. ಹುಲ್ಲು ಕೊಯ್ಯಬೇಕೆನ್ನುವ. ಪೇಟೆಗೆ ಬಂದು ಒಂದ ಹೊಟೇಲಿನಲ್ಲಿ ನಿಂತೆ. ಅಲ್ಲಿ ನನಗೆ ಸಿಕ್ಕುವ ಸಂಬಳವೆಲ್ಲ ಗ್ಲಾಸ ಗಳು ಒಡೆದುದಕ್ಕೆ ಮತ್ತು ಬೀಡಿ ಸೇದಲಿಕ್ಕೆ ಮಾತ್ರ ಸಾಕಾಗುತ್ತಿತ್ತು. ಮತ್ತೆ ಸಿನೇಮಾ ನೋಡಲು ಹೋಗಬೇಕಾದರೆ, ಒಂದು ಹೊ ಅಂಗಿ ಬೇಕಾದರೆ, ಏನಾದರೂ ಕದಿಯಬೇಕು ವಿನಃ ಬೇರೆ ಉಪಾಯ ವಿಲ್ಲ. ಹಾಗಾಗಿ ಹೊಟೇಲಿನ ಕೆಲಸವೂ ಹೋಯಿತು. ಆ ಬಳಿ ಮೋಟರ್ ಆಫೀಸಿನಲ್ಲಿ ಮತ್ತು ರೈಲಿನ ಆಫೀಸಿನಲ್ಲಿ ಸುತ್ತಾಡಿಕೊಂ ಗಿದೆ. ಕೆಲವು ಸಲ ರೈಲು ಪಯಣವನ್ನೂ ಮಾಡಿದೆ. ಒಮ್ಮೆ ಬೊಂಬಾಯಿವರೆಗೂ ಹೋದೆ – ಆದರೆ ಅಲ್ಲಿಯೂ ಜೈಲಿಗೇ ಹೋಗ ಬೇಕಾಯಿತು. ಈಗ ನನಗೇನೂ ಹೆದರಿಕೆಯಿಲ್ಲ. ನನಗೆ ಸಿಕ್ಕಿದು ವೆಲ್ಲ ನನ್ನ ಗೆಳೆಯನೊಡನೆ ಇದೆ. ಇನ್ನು ಹೊರಗೆ ಹೋದವ ಆದನ್ನೆಲ್ಲ ಮಾರಿ ಜೀವಿಸುತ್ತೇನೆ. ಮತ್ತೆ ಪುನಃ ಅನುಕೂಲ ಕಡಿಮೆಯಾದಾಗ ಈ ವೃತ್ತಿಯನ್ನೇ ಆರಂಭಿಸಿದರಾಯಿತು. ಏನು ಪೋಲೀಸರು ಎರಡು ಹೊಡೆದಾರು ಅಷ್ಟೆ. ಅದೂ ಸಿಕ್ಕಿಬಿದ್ದ ಮಾತ್ರ. ಈಗ ನಾನು ಕಿಸೆಯಿಂದ ಕದಿಯುವ ವಿದ್ಯೆಯನ್ನು ಸಾಕಷ್ಟು ಕಲಿತಿದ್ದೇನೆ. ಯಾರ್ಯಾರನ್ನು ಹೇಗೆ ಮರುಳುಗೊಳಿ ಬೇಕೆಂಬುದರ ಕುರಿತು ಬಹಳ ಸಂಶೋಧನೆ ಮಾಡಿದ್ದೇನೆ."

"ಏನೋ ಮಹರಾಯಾ!" ತನಿಯ ಆಕಳಿಸಿದ. "ನಮ್ಮೂರಲ್ಲಿ ಜೈಲಿಗೆ ಹೋಗುವುದೆಂದರೆ ದೊಡ್ಡ ನಾಚಿಕೆಕೇಡು. ಈಗ ನಾನ ಹಿಂತಿರುಗಿದ ಮೇಲೆ ನನ್ನವಸ್ಥೆ ಏನಾಗುವುದೋ ಎಂದು ಹೆದರಿ

ಯಾಗುವುದು."

"ಛೆ! ಅದೇ ನಾಚಿಕೆ – ಮರ್ಯಾದೆ – ಏನಣ್ಣ ಇದೆಲ್ಲ! ಮರ್ಯಾದೆ ಬೇಕಾದ್ದು ದೊಡ್ಡ ಹಣವಂತರಿಗೆ. ಅವರಿಗಾದರೆ ಜೈಲಿಗೆ ಹೋದರೆ ತಮ್ಮ ಪ್ರತಿಷ್ಠೆ ಕುಂದೀತು, ತಮ್ಮ ವ್ಯಾಪಾರ ಹಾಳಾದೀತು, ತಮ್ಮ ಮಕ್ಕಳಿಗೆ ಮದುವೆಯಾಗಲಿಕ್ಕಿಲ್ಲ ಇತ್ಯಾದಿ ಹೆದರಿಕೆಗಳಿರುವುದು ಸ್ವಾಭಾವಿಕ. ಮತ್ತೆ ನಮ್ಮಂಥವರಿಗೇನು? ನಮ್ಮ ಜೀವನವೇ ಜೈಲಿನಿಂದಾಗಿ ನಡೆಯುವುದೆಂದ ಬಳಿಕ ನಮಗೆ ನಾಚಿಕೆ ಏನು? ಹಣವಿಲ್ಲದ ನಮಗೆ ಮರ್ಯಾದೆ ಇದ್ದರೂ ಇಲ್ಲದಂತೆಯೇ! ನೀನೊಮ್ಮೆ ಒಂದು ಹೊಟೇಲಿಗೆ ಹೋಗಿ ನಾನು ಬಡವ, ಪಾಪದವ, ಕದಿಯದವ, ಸುಳ್ಳು ಹೇಳದವ, ಮರ್ಯಾದಸ್ಥ, ನನ್ನೊಡನೆ ಹಣವಿಲ್ಲ, ನನಗೆ ಒಂದಿಷ್ಟು ಕಾಫಿ ಬೇಕೆಂದರೆ, ನಿನ್ನನ್ನು ಕೂಡಲೇ ಕುತ್ತಿಗೆಗೆ ಕೈಹಾಕಿ ಹೊರಗೆ ದಬ್ಬಿಸುತ್ತಾರೆ. ನಾನು ಮೊದಲು ಬಂದಾಗ ಹಸಿವು ತಡೆಯದೆ ಒಂದು ದೊಡ್ಡ ಹೊಟೇಲಿನಲ್ಲಿ ಒಂದಿಷ್ಟು ಅವಲಕ್ಕಿ ಮತ್ತು ಕಾಫಿ ತೆಗೆದು ತಿಂದು ಹೊರಗೆ ಬಂದಾಗ ಹಣವಿಲ್ಲವೆಂದೆ. ಕೂಡಲೇ ನನ್ನ ಕುತ್ತಿಗೆ ಹಿಡಿದು ಬೆನ್ನಿಗೆ ಎರಡು ಏಟುಗಳನ್ನಿಟ್ಟು ಹೊಟೇಲಿನ ಬಾವಿಯ ಬಳಿ ಕಳಿಸಿದರು. ಅಲ್ಲಿ ಎರಡು ಮಣ ನೀರು ಹಿಡಿಯುವ ಕೊಡದಲ್ಲಿ ಐವತ್ತು ಸಲ ನಾನು ಹೊಟೇಲಿಗೆ ನೀರು ಹೊರಬೇಕಾಯಿತು. ಅದರ ಪರಿಣಾಮವಾಗಿ ಎರಡು ದಿನ ನನಗೆ ಒಂದು ಜಗಲಿಯನ್ನು ಬಿಟ್ಟು ಅತ್ತಿತ್ತ ಹೋಗಲಾಗಲಿಲ್ಲ. ಆಮೇಲೆ ಮತ್ತೊಬ್ಬ ಮನುಷ್ಯ ಹೋಗುತ್ತಿದ್ದಾಗ ಅವನ ಕಿಸೆಯಿಂದ ಒಂದು ಕರವಸ್ತ್ರ ಕೆಳಗೆ ಬಿದ್ದುದನ್ನು ಅವನಿಗೆ ಹೆಕ್ಕಿ ಕೊಟ್ಟೆ. ಕೂಡಲೇ ಆ ಮನುಷ್ಯ ನನ್ನನ್ನು ಕಿಸೆಗಳ್ಳನೆಂದು ಪೋಲೀಸರ ವಶಕ್ಕೆ ಕೊಟ್ಟುಬಿಟ್ಟ! ಆ ಸಲ ಆರು ತಿಂಗಳು ಈ ಮನೆಯ ಸುಖವನ್ನನುಭವಿಸಿದೆ. ಆಗ ಆ ದೊಡ್ಡ ಹೊಟೇಲಿನ ಮ್ಹಾಲಕನೂ ಇಲ್ಲಿಗೆ ಬಂದ. ಅವನು ಹೆಚ್ಚು ಕ್ರಯಕ್ಕೆ ಸಕ್ಕರೆಯನ್ನು

ಮಾರಿದ್ದನಂತೆ. ಅದಕ್ಕೆ ಐನೂರು ರೂಪಾಯಿ ಜುಲುಮಾನೆ ಇಲ್ಲವೇ ಎರಡು ತಿಂಗಳು ಶಿಕ್ಷೆ ಎಂದು ವಿಧಿಸಿದ್ದಕ್ಕೆ ಅವನು ಶಿಕ್ಷೆಯನ್ನೇ ಅನುಭವಿಸಲಿಕ್ಕೆಂದು ಬಂದ. ಅವನ ಆರೇಳು ಹೋಟೇಲುಗಳ ಮೇಲ್ವಿಚಾರಣೆಗೆ ಅವನ ಜನರು ಇದ್ದಾರೆ. ಅವನ ಮರ್ಯಾದೆ ಏನಾದರೂ ಹೋಯಿತೇ? ಇಲ್ಲಿಂದ ಮರಳಿದವನೇ ಮತ್ತೂ ಎರಡು ಹೋಟೇಲುಗಳನ್ನು ತೆರೆದ. ಈಗ ಅವನು ದೊಡ್ಡ ಧರ್ಮಿಷ್ಠ, ದೇವಭಕ್ತನೆಂದು ಹೆಸರಾಗಿದ್ದಾನೆ. ಅವನ ಗಾಂಧೀ ಟೋಪಿಯನ್ನು ನೋಡಿವರೆ ಯಾರೂ ಹೆದರಬೇಕಣ್ಣಾ! ಅಂದಮೇಲೆ ನಮಗೆ ಮರ್ಯಾದೆ ಹೋಗುವುದಂತೆ! ಏನಣ್ಣಾ ನಿನ್ನ ಮಾತು? ನೀನೇನು ಕದ್ದಿದ್ದೀ? ಅಲ್ಲ ಯಾರಿಗಾದರೂ ಚೂರಿ ಹಾಕಿದೆಯಾ? ಇಲ್ಲವೇ ಕದ್ದು ಶರಾಬು ಮಾಡಿದೆಯಾ?"

"ಹೂಂ. ನನ್ನ ಗ್ರಹಚಾರ. ನಾನು ಅಷ್ಟೊಂದನ್ನೂ ಮಾಡಿಲ್ಲ. ಬರೀ ತಮಾಷೆಗೆ ಜುಗಾರಿ ಆಡಿದೆ ಅಷ್ಟೆ. ಪೋಲೀಸಿನವರು ಕದ್ದೆನೆಂದು ಫಿರ್ಯಾದು ಮಾಡಿದರು. ಹಾಗೆ ನನಗೆ ಶಿಕ್ಷೆಯಾಯಿತು." ತನಿಯ ಸಾವಧಾನವಾಗಿ ಉತ್ತರಿಸಿದ.

ಅವನಿಗೆ ಈ ಹುಡುಗನ ಚಾತುರ್ಯದ ಮಾತುಗಳನ್ನು ಕೇಳಿ ತುಂಬಾ ಆಶ್ಚರ್ಯವಾಗಿತ್ತು. ಈ ಹುಡುಗನಿಗೆ ಏನೊಂದೂ ಆಸೆಯಿಲ್ಲ. ಇವನಿಗೆ ಒಂದಿಷ್ಟೂ ಸಂಕೋಚವಿಲ್ಲ. ಮರ್ಯಾದೆಯ ಬೆಲೆಯನ್ನು ಈಗಾಗಲೇ ಕಂಡುಹಿಡಿದಿದ್ದಾನೆ—ಇದನ್ನೆಲ್ಲ ಭಾವಿಸು ವಾಗ ತನಿಯನಿಗೆ ತಾನೇನೂ ಈ ದುಃಸ್ಥಿತಿಗಾಗಿ ಮರುಗಬೇಕಾಗಿಲ್ಲ ವೆಂದು ಹೊಳೆಯಿತು.

"ಛೆ! ನೀನು ಕದಿಯಬೇಕಿತ್ತು!" ಹುಡುಗ ನಕ್ಕ. "ಹಾಗಾದರೆ ಪೋಲೀಸರು ನಿನ್ನನ್ನು ಹಿಡಿಯುತ್ತಿದ್ದಿಲ್ಲ. ಹಿಡಿದರೂ ನಿನಗೆ ಇಷ್ಟು ಶಿಕ್ಷೆಯಾಗುತ್ತಿದ್ದಿಲ್ಲ. ನೀನು ಶುದ್ಧ ಹೆಬಗ, ಶುದ್ಧ ಹೆಡ್ಡ, ಒಂದು ವೇಳೆ ಕದ್ದೇ ಜೈಲಾದರೂ ನಮಗೇನೂ ನಷ್ಟವಿಲ್ಲ.

ಕದ್ದುದನ್ನು ಮನೆಯುವರು ಮಾರುತ್ತಾರೆ. ನಮ್ಮ ಜೀವನ ಇಲ್ಲಿ ಹೋಗುತ್ತದೆ. ಅಪರಾಧಕ್ಕೆ ತಕ್ಕ ಶಿಕ್ಷೆಯಾಗುವುದು ಇಲ್ಲಿ ಕಡಿಮೆ. ಆದ್ದರಿಂದ ನಾವು ಮೊದಲೇ ಶಿಕ್ಷೆಗೆ ತಕ್ಕ ಅಪರಾಧವನ್ನು ಮಾಡಿ ಬಿಟ್ಟರಾಯಿತು. ಇದೊಂದು ನಮ್ಮ ವೃತ್ತಿ, ಜೀವನೋಪಾಯ."

"ನನಗೇಕೆ ಇದೆಲ್ಲ ಮಹರಾಯಾ? ನಾನು ನಿಜವಾಗಿ ನಿನಗೆ ಹೇಳುತ್ತೇನೆ: ನಾನು ಶುದ್ಧ ಹಳ್ಳಿಗ. ಈ ವಿಚಾರಗಳೆಲ್ಲ ನನಗೆ ತಿಳಿಯವು. ನನ್ನ ಕರ್ತವ್ಯಧರ್ಮ ದುಡಿಯುವುದೊಂದೇ. ದುಡಿಯುವುದು, ಇದ್ದುದನ್ನು ಉಣ್ಣುವುದು, ಕಾಲ ಕಳೆಯುವುದು ಇವಕ್ಕಿಂತ ಹೆಚ್ಚಾದ ಜೀವನ ನನಗೆ ತಿಳಿಯದು. ಆದ್ದರಿಂದ ನೀನು ಹೇಳುವುದು ನನಗೆ ತುಂಬಾ ಚೋದ್ಯವೆನಿಸುತ್ತದೆ. ನಾನೀತನಕ ಕದಿಯಲೂ ಇಲ್ಲ, ಜೈಲಿಗೆ ಹೋಗಿದ್ದೂ ಇಲ್ಲ."

ಹೀಗೆನ್ನುವಾಗ ಅವರ ಅಧಿಕಾರಿ ಬಂದು ಇಬ್ಬರಿಗೂ ಕಣ್ಣರಳಿಸಿ ಗದರಿಸಿ ಸುಮ್ಮನಿರಲು ಹೇಳಿದ.

ತನಿಯನಿಗೆ ಅಂದು ರಾತ್ರಿ ನಿದ್ದೆ ಹತ್ತಲಿಲ್ಲ. ಈ ಹುಡುಗನ ವಿಚಿತ್ರವಾದ ವಾಕ್ಸರಣಿ ಅವನನ್ನು ಮಂಕುಗೊಳಿಸಿತ್ತು. ಅವನಿಗೆ ತನ್ನ ವಯಸ್ಸಿನ ಅರ್ಧದಷ್ಟಾದೀತು. ಆದರೂ ಎಷ್ಟು ಹುಶಾರಿದ್ದಾನೆ ಅವನು! ಅವನಂಥ ಮಗನೊಬ್ಬ ತನಗಿರುತ್ತಿದ್ದರೆ, ಈ ಜೈಲುವಾಸದ ಪ್ರಸಂಗವೇ ತನಗೆ ಬಹುಶಃ ಒದಗುತ್ತಿದ್ದಿಲ್ಲ. ಇಲ್ಲ, ಈ ಹೊನ್ನಮ್ಮ ಇನ್ನು ಮಕ್ಕಳನ್ನು ಹೆರಲಿಕ್ಕಿಲ್ಲ. ಅವಳು ಬನವಿ....

ಜೈಲಿನಲ್ಲಿ ಗಂಟೆ ಬಡಿಯುತ್ತಲೇ ಇತ್ತು. ಹತ್ತೂವರೆ, ಹನ್ನೊಂದು, ಹನ್ನೊಂದುವರೆ, ಹನ್ನೆರಡು.......

ಫಕ್ಕನೆ ಅವನಿಗೆ ಆಗ ತನ್ನ ಏಕಾಕಿತನ ಹೊಳೆಯುವುದು. ಹೆಚ್ಚಿನ ಕೈದಿಗಳೆಲ್ಲ ನಿದ್ರಿಸಿ ಗೊರಕೆ ಹೊಡೆಯುತ್ತಿದ್ದಾರೆ. ಕೆಲವರು ಕುಳಿತುಕೊಂಡೇ ಕಣ್ಣು ಕೂರುತ್ತಿದ್ದಾರೆ. ಒಬ್ಬಿಬ್ಬರು ಮೌನವಾಗಿ ಯೋಚಿಸುತ್ತಿದ್ದಾರೆ. ತನಿಯ ಒಮ್ಮೆ ಎಲ್ಲರನ್ನೂ ನೋಡಿದ.

'ಇಲ್ಲ, ಹೊನ್ನಮ್ಮನನ್ನು ಬಿಟ್ಟು ತನಗೆ ಅನ್ಯ ಜೀವನವಿಲ್ಲ. ಅವಳು ತನ್ನ ಜೀವನದ ಝಂಝಾವಾತದಲ್ಲಿ ಎಡರು - ತಡರುಗಳಲ್ಲಿ ಎಡವುತ್ತ ತಡವುತ್ತ ಜೀವನದ ಬಹು ಭಾಗವನ್ನು ರಸಮಯ ವನ್ನಾಗಿ ಮಾಡಿದವಳು. ಅಂಥವಳ ವಿರುದ್ಧವಾಗಿ ತಾನು ಈಗ ನೆನೆಯುವುದೆಂದರೆ ಮಹಾ ದ್ರೋಹ, ಮಹಾ ಪಾಪ. ಈಗ ಅವಳು ಒಬ್ಬಂಟಿಗಳಾಗಿ ಹೇಗೆ ಕಷ್ಟದಲ್ಲಿ ಜೀವನ ನಡೆಸುತ್ತಿರುವಳೋ, ತನಗಾಗಿ ಎಷ್ಟು ದುಡಿಯುತ್ತಿರುವಳೋ, ಏನೋ ! ತನ್ನ ಒಡ ನಾಟವನ್ನು ಅವಳು ಎಷ್ಟು ಬಯಸುತ್ತಿರುವಳೋ ಏನೋ ! ಅವಳಿಗೆ ತನ್ನ ಈ ಶಿಕ್ಷೆಯ ಸಮಾಚಾರ ತಲುಪಿದೆಯೋ ಇಲ್ಲವೋ !....

'....ತಲುಪಿರಲೂ ಬಹುದೆನ್ನೋಣ. ಆದರೆ ಆಕೆ ಬರೇ ಹೆಂಗಸು. ಅವಳೇನು ಮಾಡಬಲ್ಲಳು ? ಆ ಸೊಟ್ಟಮೂತಿಯ ಶೀನನಾಯ್ಕ ಊರಲ್ಲಿ, ಮುಖ್ಯವಾಗಿ ಅವಳೊಡನೆ ಏನೆಲ್ಲ ಅಪವಾದ ಗಳನ್ನು ಹರಡಿ ಬಿಟ್ಟಿದ್ದಾನೋ ಏನೋ ! ಮನೆಯ ಬೆಳೆಯೇನಾ ಯಿತೋ ! ಹೆಂಗಸಾದ ಆಕೆ ಕೆಲಸಕ್ಕೆ ಜನರನ್ನು ಕರೆದರೆ ಜನರು ಬರುವರೆ ? ಆಚೆ ಕಡೆಯಿಂದ ಧನಿಯರು ಏನು ಮಾಡಿದರೋ, ತಿಳಿಯದು. ಅವರೇನಾದರೂ ಸಾಧಾರಣ ಮನುಷ್ಯರಲ್ಲ. ಗೇಣಿಗಾಗಿ ಈಗ ವ್ಯಾಜ್ಯ ಮಾಡಿರಲೂಬಹುದು. ಜಫ್ತಿ ಮಾಡಿಸಿರಲೂ ಬಹುದು........'

ಗಂಟೆ ಎರಡು ಹೊಡೆಯಿತು. ಜೈಲಿನ ಬಳಿಯಲ್ಲಿದ್ದ ಮರಗಳಲ್ಲಿ ಕುಳಿತುಕೊಂಡಿದ್ದ ಕಾಗೆಗಳೂ ಬಾವಲಿಗಳೂ ಕೇ ಕೇ ಹಾಕುತ್ತ ಹಾರತೊಡಗಿದುವು.

'....ಇನ್ನೂ ಇಪ್ಪತ್ತೈದು ದಿನಗಳಿವೆ. ಇಂದು ಶನಿವಾರ ಅಲ್ಲ—ಶುಕ್ರವಾರವೇ ? ಹೊಂ ? ನಾನು ಜೈಲಿಗೆ ಬಂದುದು ಗುರುವಾರ. ಗುರುವಾರ ಗುರುವಾರ ಎಂಟು, ಮೂರು ಗುರುವಾರ ಗಳಿಗೆ ಇಪ್ಪತ್ತನಾಲ್ಕು, ಇಪ್ಪತ್ತನಾಲ್ಕು - ಎಂಟು - ಮೂವತ್ತೆರಡು

ಶುಕ್ರವಾರ ಮೂವತ್ತಮೂರು, ಶನಿವಾರ ಮೂವತ್ತನಾಲ್ಕು, ಆದಿತ್ಯವಾರ ಮೂವತ್ತೈದು........ತಿಂಗಳಿಗೊಂದು ದಿನ ರಿಯಾಯಿತಿ. ಅಂತೂ ಇಪ್ಪತ್ತೈದು ದಿನ ಈ ತಗಣೆ ಸೊಳ್ಳೆಗಳ ಮಧ್ಯೆ, ಈ ಒರಟು ನೆಲದ ಮೇಲೆಯೇ ಮಲಗಬೇಕು....ಅಯ್ಯೋ ದೇವರೇ... ....'

* * *

ಮರುದಿನ ಜೈಲಿಗೆ ಒಬ್ಬ ಹೊಸ ಕೈದಿಯನ್ನು ತಂದರು. ಒಳಗೆ ಬರುವಾಗ ಅವನ ಮೈಯಲ್ಲೆಲ್ಲ ಗಾಯಗಳಿದ್ದುವು. ಗಡ್ಡ ಬೆಳೆದಿತ್ತು. ಒಂದು ಕೈಗೆ ವಸ್ತ್ರ ಕಟ್ಟಿದ್ದರು. ಜೈಲರನೂ ಅವನಿಗೆ ಒಂದು ಏಟನ್ನಿತ್ತ.

ತನಿಯಸಿಗೆ ಆ ವ್ಯಕ್ತಿಯ ಗುರುತು ಸಿಕ್ಕಿತು. ಅದು ಅವನೊಡನೆ ಇಸ್ಪೀಟು ಆಡುತ್ತಿದ್ದ ಮಮ್ಮದೆ. ಮಮ್ಮದೆಗೂ ಅವನ ಗುರುತು ಸಿಕ್ಕಿತು.

ತನಿಯಸಿಗೆ ಈಗ ಮಮ್ಮದೆಯ ಹೆದರಿಕೆಯಿರಲಿಲ್ಲ. ಈಗ ಅವರಿಬ್ಬರೂ ಒಂದೇ ಸ್ಥಾನದಲ್ಲಿದ್ದರು. ಮಮ್ಮದೆ ಈಗ ಹಿಂದಿನಂತೆ ಕೋಪದಲ್ಲಿ ಯಾರನ್ನಾದರೂ ಹೊಡೆಯಲಾರ. ಯಾರಿಗೂ ಬಯ್ಯಲಾರ. ಅವನ ಜೊತೆಯಲ್ಲಿ ಯಾವಾಗಲೂ ಇರುತ್ತಿದ್ದ ಪುಂಡರು ಈಗ ಇಲ್ಲ. ಅವನ ಸೊಂಟದಲ್ಲಿ ಸದಾ ಇರುತ್ತಿದ್ದ ಶೆಳುವಾದ ಉದ್ದದ ತಲವಾರು ಮಾಯವಾಗಿದೆ. ಈಗ ಅವನಿಂದ ಯಾರನ್ನಾದರೂ ಓಡಿಸಲಿಕ್ಕೆ ಸಾಧ್ಯವಿಲ್ಲ. ಬಲಾತ್ಕರಿಸಲಿಕ್ಕೆ ಎಡೆಯಿಲ್ಲ. ಇಲ್ಲಿ ಉಳಿದವರಂತೆ ಅವನೂ ಸೆರೆಮನೆಯ ಉಡುಪನ್ನೇ ತೊಡಬೇಕು. ಅವರು ಹೇಳಿದ ಕೆಲಸ ಮಾಡಬೇಕು, ಇಲ್ಲವೇ ಅಧಿಕಾರಿಗಳು ಕೊಡುವ ಪೆಟ್ಟುಗಳನ್ನು ಸಹಿಸಬೇಕು. ಮತ್ತೆ ಆ ಆಡಿನ ಬಿರಿಯಾಣಿ, ಕೋಳಿಯ ಮೇಲೋಗರ, ದಿಲ್ ಪುಕಾರ್ ಬೀಡಿಗಳ ಸುಳಿವೇ ಇಲ್ಲಿ ಇಲ್ಲ. ಇಲ್ಲಿ ಅವನೂ ಎಲ್ಲರಂತೆ ಸಾಧುವಾದ ಅನಾಸಕ್ತ ಮಾನವ ಪಶು.

ಮಮ್ಮದೆಯನ್ನು ಜೈಲರ್ ಅಲ್ಲಿ ಬಿಟ್ಟು ಹೋಗುವಾಗ ಸೆರೆ

ಮನೆಯ ತೋಟದಲ್ಲಿ ಮಣ್ಣು ಅಗೆಯಬೇಕೆಂದು ಗದರಿಸಿದ್ದ. ಆದರೆ ಮಮ್ಮದೆ ಸುಮ್ಮನೆ ಕುಳಿತುಕೊಂಡ.

ಮತ್ತೊಮ್ಮೆ ಜೈಲರ ಬಂದವ, ಮಮ್ಮದೆಗೆ ಇನ್ನೊಂದೇಟನ್ನಿತ್ತ. ಮಮ್ಮದೆ ಕೂಡಲೇ ತೋಟಕ್ಕೆ ಹೋಗಿ ಅಗೆಯ ತೊಡಗಿದ.

ತಸಿಯನಿಗೆ ಇದನ್ನು ನೋಡಿ ಒಂದು ದೊಡ್ಡ ನಗು ಬಂತು. ಅದು ತಡೆಯಲಾರದ ನಗು. ಅವನು ಗಟ್ಟಿಯಾಗಿ ಗಹಗಹಿಸಿ ನಕ್ಕ.

* * *

ಮಮ್ಮದೆ ಏನಾದರೂ ಸಿರಿವಂತರ ಕುಟುಂಬದಲ್ಲಿ ಹುಟ್ಟಿದವನಲ್ಲ. ಅವನ ತಂದೆ ಒಣಮೀನನ್ನು ಹೊತ್ತುಕೊಂಡು ಮನೆ ಮನೆಗೆ ಹೋಗಿ ಮಾರುತ್ತಿದ್ದವ. ಮಮ್ಮದೆಗೆ ಹುಡುಗನಾಗಿದ್ದಾಗಲೇ ಬೀಡಿ ಕಟ್ಟುವ ಕೆಲಸ ದೊರಕಿತು. ಆಗ ಏನೂ ಹಣ ದೊರೆಯುತ್ತಿದ್ದಿಲ್ಲ. ಬೀಡಿ ಮಾರಿ ಬಂದ ಹಣವೆಲ್ಲ ತಂದೆಯ ಜೊಕ್ಕಸಕ್ಕೆ ಹೋಗುತ್ತಿತ್ತು. ಮಮ್ಮದೆಗೆ ದಿನಕ್ಕೊಮ್ಮೆ ಚಹ ಕುಡಿಯಲು ಕೂಡಾ ಬಹಳ ಕಷ್ಟವಾಗುತ್ತಿತ್ತು. ಆದರೂ ಅವನು ದಿನಕ್ಕೆ ಒಂದು ಸಾವಿರದ ವರೆಗೂ ಬೀಡಿಗಳನ್ನು ಕಟ್ಟುತ್ತಿದ್ದ. ಊರಿನವರು ಅವನ ಬೀಡಿಗಳನ್ನು ತುಂಬಾ ಮೆಚ್ಚುತ್ತಿದ್ದರು.

ಮಮ್ಮದೆ ಯುವಕನಾಗುವಾಗ ಅವನ ತಂದೆ ತೀರಿಹೋದ. ಮೀನಿನ ವ್ಯಾಪಾರವೂ ಅಲ್ಲಿಗೆ ನಿಂತಿತು. ಮಮ್ಮದೆಯ ಅಂಗಡಿ ಸ್ವಲ್ಪ ದೊಡ್ಡದಾಯಿತು. ಬಾಡಿಗೆಗೆ ಒಂದೆರಡು ಸೈಕಲುಗಳನ್ನು ತಂದಿರಿಸಿಕೊಂಡ. ಕೆಲಸಕ್ಕೆ ಒಬ್ಬ ಹುಡುಗನನ್ನು ನೇಮಿಸಿದ. ಅವನಿಗೆ ಒಂದು ಮದುವೆಯೂ ಆಯಿತು.

ಆಗ ಅವನ ಸ್ನೇಹಿತರ ಬಳಗವೂ ಹೆಚ್ಚುತ್ತಿತ್ತು. ಮೇಸ್ತ್ರಿ ವೀರಪ್ಪ ಅವನ ಮೆಚ್ಚುಗೆಯ ಸ್ನೇಹಿತನಾದ. ವೀರಪ್ಪನಿಗೆ ತೆಂಗಿನ ಕಾಯಿ, ಅಡಿಕೆ ಮತ್ತು ಬಾಳೆಗೊನೆಗಳನ್ನು ರಾತ್ರಿ ಕದ್ದು ಹಗಲಲ್ಲಿ ಮಾರಾಟ ಮಾಡುವ ವ್ಯಾಪಾರವಿತ್ತು. ಅವರಿಬ್ಬರ ಸ್ನೇಹ ಹೆಚ್ಚಿದಂತೆ

ಆ ವ್ಯಾಪಾರ ಮುಮ್ಮದೆಗೆ ಬರತೊಡಗಿತು. ಇಬ್ಬರೂ ಸ್ವತಃ ಕಳ್ಳತನಕ್ಕೆ ಹೋಗುತ್ತಿದ್ದಿಲ್ಲ. ಅವರು ಊರಲ್ಲಿದ್ದ ಪುಂಡರಿಗೆ ಪ್ರೋತ್ಸಾಹ ಕೊಡುತ್ತಿದ್ದರು ಅಷ್ಟೆ. ವೀರಪ್ಪ ಮುಮ್ಮದೆಗೆ ಜುಗಾರಿ ಆಟವನ್ನು ಕಲಿಸಿದ.

ಒಂದೆರಡು ವರ್ಷಗಳಲ್ಲೇ ಮುಮ್ಮದೆಯ ಅಂಗಡಿ ಊರಲ್ಲೆಲ್ಲಾ ತುಂಬಾ ಪ್ರಖ್ಯಾತಿಯನ್ನು ಪಡೆಯಿತು. ಯಾವಾಗ ನೋಡಿದರೂ ಅಲ್ಲಿ ಇಸ್ಪೀಟು ಆಡುವವರ ತಂಡ ಇದ್ದೇ ಇರುತ್ತಿತ್ತು. ಮುಮ್ಮದೆ ಅವರ ಮುಂದಾಳು. ಆಗ ಅವನು ಒಂದು ಸಣ್ಣ ಚಹದ ಅಂಗಡಿಯನ್ನು ತೆರೆದ. ಕೈಯಲ್ಲಿ ಹಣ ಹೆಚ್ಚು ನಲಿಯುತೊಡಗಿತು. ಮತ್ತೆ ಇನ್ನೊಂದು ಮದುವೆಯಾದ.

ಆಗ ಅವನಿಗೂ ಪಟೇಲ ಭೋಜರಾಜರಿಗೂ ಒಂದು ವಿವಾದ ಎದ್ದಿತು. ಮೊದಲು ಅವನು ಅವರೊಡನೆ ಒಂದು ಹಲಸಿನ ಮರವನ್ನು ಕೇಳಿದ್ದನಂತೆ. ಅವರು ಕೊಡುವೆನೆಂದರು. ಆದರೆ ಮರ ಕಡಿಯಲು ಬಂದಾಗ ಅದರ ಬೆಲೆಯನ್ನೀಯಬೇಕೆಂದರಂತೆ. ಮುಮ್ಮದೆ ಒಪ್ಪಲಿಲ್ಲ. ನಾಲ್ಕೈದು ದಿನಗಳಲ್ಲೇ ಅವನು ರಾತ್ರೋರಾತ್ರಿ ಆ ಮರವನ್ನು ಕದ್ದು ಕಡಿಸಿ ಅಲ್ಲಿಂದ ಸಾಗಿಸಿಬಿಟ್ಟ. ಸರಿ. ಪಟೇಲ ಭೋಜರಾಜರು ಕೂಡಲೇ ಫಿರ್ಯಾದು ಕೊಟ್ಟರು. ಮುಮ್ಮದೆ ತಪ್ಪಿಸಿಕೊಂಡ. ಒಂದೆರಡು ಬಾರಿ ಅವನು ಪೋಲೀಸರ ಕೈಯ್ಯಲ್ಲಿ ಸಿಕ್ಕಿದರೂ ಅವರಿಗೆ ಕೈತುಂಬಾ ಹಣ ಕೊಟ್ಟು ಕೋರ್ಟಿಗೆ ಹಾಜರಾಗಲಿಲ್ಲ.

ತನ್ಮಧ್ಯೆ ಮುಮ್ಮದೆ ಭೋಜರಾಜರ ಮನೆಗೆ ಕನ್ನ ಹಾಕಿದನೆಂದು ಊರಲ್ಲೆಲ್ಲ ಗಲಾಟೆಯಾಯಿತು. ಪೋಲೀಸರು ಮನೆ ಮನೆ ತಿರುಗತೊಡಗಿದರು. ಕೊನೆಗೆ ಮುಮ್ಮದೆ ಎಲ್ಲೋ ಒಂದೆಡೆ ಸಿಕ್ಕಿ ಬಿದ್ದ. ಪೋಲಿಸರು ಹೊಡೆದು ಅವನ ಒಂದು ಕಾಲನ್ನು ತುಂಬ ಜಖಂ ಮಾಡಿದರು. ವರ್ಷಗಟ್ಟಲೆ ತಕ್ಷೀರಿನ ವಿಚಾರಣೆ ನಡೆಯಿತು. ಮುಮ್ಮದೆಗೆ ಎರಡು ವರ್ಷ ಶಿಕ್ಷೆಯಾಯಿತು.

ಅಷ್ಟರಲ್ಲೇ ಅವನ ಅಂಗಡಿ ಮುಚ್ಚಿತ್ತು. ಮನೆಮಾರು ಮಾರಿಹೋಗಿತ್ತು. ಅವನು ಜೈಲಿನಿಂದ ಹೊರ ಬರುವಾಗ ಅವನ ಇಬ್ಬರು ಹೆಂಡಂದಿರೂ ಬೇರೆ ಕಡೆಯಲ್ಲಿ ದುಡಿದು ಉಣ್ಣುತ್ತಿದ್ದರು. ಮುಮ್ಮಡಿ ಮತ್ತೊಂದು ಅಂಗಡಿ ಮಾಡಿದ. ಸ್ವಲ್ಪ ವ್ಯಾಪಾರವನ್ನೂ ನಡೆಯಿಸಿದ. ಆದರೆ ಕಳ್ಳತನ ಮತ್ತು ಜುಗಾರಿ ಆಟಗಳು ಅವನ ಬೆನ್ನು ಬಿಡಲಿಲ್ಲ. ಸಾಮಾನ್ಯರಿಂದ ಅವನು ಅಕ್ಕಿ ಭತ್ತ ಮುಂತಾದು ವನ್ನು ಗದರಿಸಿಯೇ ಪಡೆಯುವನು ಮತ್ತೆ ಸ್ವಲ್ಪ ದೊಡ್ಡವರ ಮನೆಯಿಂದ ರಾತ್ರಿಯೇ ಕದಿಯುವನು. ಜುಗಾರಿ ಆಟದಲ್ಲಿ ಬೇರೆಯವರಿಗೆ ಹಣ ಸಿಕ್ಕಿದರೆ ಅವನದನ್ನು ಕಸಿದುಕೊಳ್ಳುವನು. ರಾತ್ರಿಯಲ್ಲಿ ಒಬ್ಬಂಟಿಗ ರಾಗಿ ಹೋಗುವ ಪ್ರಯಾಣಿಕರನ್ನು ಮತ್ತು ಗಾಡಿಗಳನ್ನು ನಿಲ್ಲಿಸಿ ಅವರೊಡನಿದ್ದುದನ್ನೆಲ್ಲ ಸುಲಿಯುವನು.

ರಾತ್ರಿಯಲ್ಲಿ ಹೋಗುತ್ತಿದ್ದ ಲಾರಿಗಳನ್ನು ನಿಲ್ಲಿಸಲಿಕ್ಕೆ ಅವನದೇ ಆದ ವಿಶಿಷ್ಟ ತಂತ್ರವೊಂದಿತ್ತು. ರಾತ್ರೆ ನಡುರಸ್ತೆಯಲ್ಲಿ ಬಿಳಿಯ ವಸ್ತ್ರವನ್ನು ಹೊದ್ದುಕೊಂಡು ಮಲಗುವನು. ಆಗ ಲಾರಿಯವರು ಇದೇನೆಂದು ವಿಸ್ಮಯದಿಂದ ಲಾರಿಯನ್ನು ನಿಲ್ಲಿಸಿ ಕೆಳಗಿಳಿಯುವರು. ಕೂಡಲೇ ಅವನ ಕಡೆಯವರು ಲಾರಿಯ ಸಾಮಾನುಗಳನ್ನೆಲ್ಲ ಖಾಲಿ ಮಾಡುವರು. ಮತ್ತೆ ಲಾರಿಯವರು ಬರೇ ಲಾರಿಯನ್ನು ಮಾತ್ರ ಕೊಂಡು ಹೋಗಬೇಕಷ್ಟೆ. ಈ ತರಹದ ಸುಲಿಗೆಗಳು ದಿನ ನಿತ್ಯವೂ ನಡೆಯುತ್ತಿದ್ದುವು. ಆದರೆ ಊರವರಿಗೆ ಇದೊಂದೂ ತಿಳಿಯದು.

ಮತ್ತೊಮ್ಮೆ ಮುಮ್ಮಡಿ ಸಿಕ್ಕಿ ಬಿದ್ದನ ಮೂರು ವರ್ಷಗಳ ಶಿಕ್ಷೆಯನ್ನನುಭವಿಸಿ ಮರಳಿದ. ಆಗ ಅವನು ಎಂಟು ದಿನಗಳಿ ಗೊಮ್ಮೆ ಪೋಲೀಸು ಠಾಣೆಯಲ್ಲಿ ಹಾಜರಾಗಬೇಕಾಗಿತ್ತು.

ಈಗ ಅವನಿಗೆ ಮನೆ ಮಠಗಳಿಲ್ಲ. ಅವನ ಹಿಂದೆ ಹತ್ತಾರು ಪುಂಡರು ಅವನ ಆಜ್ಞಾನುವರ್ತಿಗಳಾಗಿ ತಿರುಗಾಡುತ್ತಿದ್ದರು.

ಚಿಕ್ಕ ಚಿಕ್ಕ ಕಳವುಗಳು, ಸುಲಿಗೆಗಳು, ದರೋಡೆ ಅವರ ಮೂಲಕ ಆಗಾಗ್ಗೆ ನಡೆಯುತ್ತಿದ್ದುವು. ಅವುಗಳಲ್ಲಿ ಕೆಲವು ಪೋಲೀಸರ ಗಮನಕ್ಕೂ ಬರುತ್ತಿದ್ದುವು. ಕೊನೆಗೆ ಮಮ್ಮದೆ ತಲೆತಪ್ಪಿಸಿಕೊಂಡ. ಊರಲ್ಲಿ ಅವನ ಉಪಟಳ ಹೆಚ್ಚಾಗ ತೊಡಗಿತು. ಪೋಲೀಸರೇನೋ ಆಗಾಗ ಸಂಶಯಾಸ್ಪದ ಮನೆಗಳನ್ನು ಧಾಳಿಮಾಡುತ್ತಿದ್ದರು. ಆದರೆ ಅವನು ಫಕ್ಕನೆ ಸಿಗಲಿಲ್ಲ.

ಕಾಫಿ ಹೊಟೇಲಿನ ಶೀನನಾಯ್ಕರು ಮಮ್ಮದೆಯ ಮಹಾ ಮಿತ್ರರಲ್ಲೊಬ್ಬರು. ಅವನು ಹೆಚ್ಚಾಗಿ ಉಳಕೊಳ್ಳುತ್ತಿದ್ದುದು ಮತ್ತೆ ಮತ್ತೆ ಅವರಲ್ಲೇ. ಅಲ್ಲಿಗೆ ಬರುವ ಜುಗಾರಿ ಖೋರರೊಡನೆ ಅವನು ಅಲ್ಲಿ ಗುಪ್ತವಾಗಿ ಯಾವಾಗಲೂ ಜುಗಾರಿ ಆಡಿ, ಸ್ವಲ್ಪ ಹಣವನ್ನು ಶೀನನಾಯ್ಕರಿಗೂ ಕೊಡುತ್ತಿದ್ದ. ಅವರು ಅವನಿಗೆ ಊಟವನ್ನು ಹಾಕುತ್ತಿದ್ದರು. ಅವರಿಗೆ ಪಲ್ಯಕ್ಕೆ ಬೇಕಾದ ಸೌತೆಕಾಯಿ, ಕುಂಬಳ ಕಾಯಿ, ಚೀನಿಕಾಯಿಗಳಿಗೆ ಮಮ್ಮದೆಯ ಪ್ರಭಾವದಿಂದ ಏನೂ ಕಡಿಮೆಯಿರಲಿಲ್ಲ. ಕೆಲವೊಮ್ಮೆ ಅಕ್ಕಿಯ ಮುಡಿಗಳೂ ಅವರಿಗೆ ಅವನಿಂದ ಸಿಗುವುದಿತ್ತು.

ಅಂಥ ಸಂದರ್ಭದಲ್ಲೇ ಮಮ್ಮದೆ ಅಂದು ತನಿಯನೊಡನೆ ಇಸ್ಪೀಟು ಆಡುತ್ತಿದ್ದುದು. ಪೋಲೀಸರ ಕೈಯಿಂದ ಪಾರಾಗಲು ಅವನು ನಾಯ್ಕರ ಮನೆಯ ಯಾವ ಮೂಲೆಗೂ ಹೋಗಲು ನಾಯ್ಕರ ಅಡ್ಡಿಯಿರಲಿಲ್ಲ. ಅಂತೆಯೇ ಅಂದು ತನಿಯ ಸಿಕ್ಕಿಬಿದ್ದಾಗ ಮಮ್ಮದೆ ಮತ್ತು ಅವನ ಬಳಗದವರು ಓಡಿಹೋಗಿ ಬಚ್ಚಲ ಮನೆಯಲ್ಲಿ ಅವಿತು ಕುಳಿತಿದ್ದರು.

ತನಿಯನ ಮೇಲೆ ಮೊಕದಮೆಯಾಗಿ ಅವನು ಜೈಲಿಗೆ ಹೋದ ಸುದ್ದಿ ಮಮ್ಮದೆಗೆ ಮೊದಲೇ ತಿಳಿದಿತ್ತು. ಆದರೆ ಒಂದು ದಿನ ಅವನು ನಾಯ್ಕರ ಮಗಳೊಡನೆ ಏನೋ ಅಪಹಾಸ್ಯದ ಮಾತುಗಳ ನ್ನಾಡಿದ್ದಕ್ಕಾಗಿ ನಾಯ್ಕರು ಉರಿದು ಬಿದ್ದರು. ಅವರ ಸಿಟ್ಟು ಮಾತ್ರ

ಅವನಿಗೆ ತಿಳಿಯಲಿಲ್ಲ. ಅವರೂ ಅವನಿಗೆ ತಿಳಿಯಗೊಡಿಸಲಿಲ್ಲ. ಈ ಸುಪ್ತ ಕೋಪವು ನಾಯ್ಕರ ಮನಸಿನಿಂದ ವೆಂಕಪ್ಪನಿಗೆ ಹರಿಯಿತು. ಸರಿ. ಒಂದು ದಿನ ಮಮ್ಮದೆ ಜುಗಾರಿ ಆಡುತ್ತಿದ್ದಂತೆಯೇ ನಾಯ್ಕರ ಹೊಟೇಲನ್ನು ಪೋಲೀಸರು ಸುತ್ತಲೂ ಮುತ್ತಿದರು. ಮಮ್ಮದೆ ಮೂರನೆಯ ಬಾರಿ ಸಿಕ್ಕಿ ಬಿದ್ದ.

* * *

ತನಿಯ ಅಂದು ರಾತ್ರೆ ಮಮ್ಮದೆಯೊಡನೆ ಮಾತನಾಡಿದ. ಮಮ್ಮದೆ ಮೊದಮೊದಲು ಅವನ ಗುರುತಿಲ್ಲದವನಂತೆ ನಟಿಸಿದ ನಾದರೂ ಮತ್ತೆ ಎಲ್ಲವನ್ನೂ ಸವಿಸ್ತಾರವಾಗಿ ಹೇಳಿದ.

ತನಿಯ ಮೊದಲಾಗಿ ತನ್ನ ಮನೆಯ ಸಮಾಚಾರವನ್ನು ಅವ ನೊಡನೆ ಕೇಳಿದ. ಮಮ್ಮದೆ ಆಗ ಹೀಗೆಂದು ಹೇಳಿದ:

" ನೀನು ಲಾಕಪ್ಪಿನಲ್ಲಿದ್ದಾಗಲೇ ನಾನು ನಿನ್ನ ಮನೆಗೆಂದು ಒಂದೆರಡು ಸಲ ಹೋಗಿದ್ದೆ. ನಿನ್ನ ಹೆಂಡತಿಗೆ ನನ್ನ ಗುರುತು ಸಿಗದೆ ಒಮ್ಮೆ ಚೀರಿ ಒಳಗೆ ಹೋಗಿ ಬಾಗಿಲು ಮುಚ್ಚಿಕೊಂಡಳು. ನಾನು ಹೊರಗಿನಿಂದ ಎಷ್ಟುಸಲ ಹೇಳಿದರೂ ಅವಳು ಬಾಗಿಲು ತೆಗೆಯಲಿಲ್ಲ. ಆದರೆ ಮತ್ತೊಮ್ಮೆ ಸಂಜೆಗೆ ಹೋದಾಗ ಅಲ್ಲಿ ಅವಳೂ ವೆಂಕಪ್ಪನ ಮಗ ಮಾರಪ್ಪನೂ ಕುಳಿತುಕೊಂಡು ಮಾತಾಡುತ್ತಿದ್ದರು. ನಾನು ಅವಳಿಗೆ ಹೆದರಬೇಡವೆಂದು ಧೈರ್ಯ ಹೇಳಿದೆ. ಆದರೆ ಅವಳು ಅತ್ತಳು ವಿನಃ ಬೇರೇನೂ ಹೇಳಲಿಲ್ಲ.

"ಮತ್ತೆ ನಿನಗೆ ಶಿಕ್ಷೆಯಾದ ಸಮಾಚಾರ ದೊರೆತೊಡನೆ ಪುನಃ ಒಮ್ಮೆ ರಾತ್ರೆ ಹೋದೆ. ಆಗಲೂ ಆ ಮಾರಪ್ಪ ಮನೆಯಲ್ಲಿದ್ದ. ನನ್ನ ಧ್ವನಿ ಕೇಳಿ ಮನೆಯೊಳಗಿಂದ ಹೊರಬಂದು ಓಡಿಹೋಗಿಬಿಟ್ಟ. ನನಗೆ ಒಂದೂ ಅರ್ಥವಾಗಿಲ್ಲ. ಇಲ್ಲವಾದರೆ ಅವನಿಗೆ ನನ್ನನ್ನು ನೋಡಿ ಹೆದರಿಕೆಯಾಗಬೇಕಾಗಿರಲಿಲ್ಲ. ಅವಳೊಡನೆ ಈ ಶಿಕ್ಷೆಯಾದ ವಿಚಾರ ವನ್ನು ಹೇಳಿ, ಖರ್ಚಿಗೆ ಬೇಕಾದರೆ ನಾನು ಹಣಕೊಡುತ್ತೇನೆಂದೆ.

ಆದರೆ ಅವಳು ಬೇಡವೆಂದಳು.

"ಮತ್ತೆ ನನಗೆ ನಿನ್ನ ಧನಿ ತಂತ್ರಿಯವರು ಬೆಳೆಯನ್ನು ಜಪ್ತಿ ಮಾಡಿಸುವರೆಂಬ ಸುದ್ದಿ ಸಿಕ್ಕಿತ್ತು. ಅವಳೇ ಅದಕ್ಕೆ ಒಪ್ಪಿದ್ದಳಂತೆ. ಈಒಳಗೆ ಜಪ್ತಿಮಾಡಿ ಆಗಿರಬಹುದು. ಆದರೆ ನಿನ್ನ ಧನಿಗೊಮ್ಮೆ ಬುದ್ಧಿಗಲಿಸಬೇಕೆಂದು ನಾನು ಬಯಸಿದ್ದೆ. ಅಷ್ಟರಲ್ಲೇ ಹೀಗೆಲ್ಲಾ ಆಯಿತು."

ತನಿಯ ಉಸುರೆತ್ತಲಿಲ್ಲ. ಅವನ ಮನಸಿನಲ್ಲಿ ಮತ್ತೆ ಊಟ ಮಾಡುವಾಗ ಅನೇಕ ಯೋಚನೆಗಳು ಮೂಡಿದುವು. ಮುಮ್ಮದೆ ತನ್ನ ಮನೆಗೆ ಏಕಾಗಿ ಹೋದನೆಂಬುದೂ ಅವನಿಗೊಂದು ಸಮಸ್ಯೆಯೇ. ಅವನು ಹೋಗಿದ್ದರೂ ಮುಮ್ಮದೆ ಅವನು ಹೇಳುವಂತೆ ಒಂದಿರುಗಿ ಬಂದಿರಬಹುದೆ? ಅದೂ ಒಮ್ಮೆಯಲ್ಲ, ನಾಲ್ಕೈದು ಸಲ ಹೋಗಿದ್ದನವ. ತನಿಯನಿರುವಾಗ ಅವನು ಅಲ್ಲಿಗೆ ಬರುವ ವಾಡಿಕೆಯೇ ಇರಲಿಲ್ಲ.

ಅದೂ ಮುಮ್ಮದೆ ಹೆಂಗಸರ ಹುಚ್ಚ. ಊರವರು ಮೊದಲೇ ಹೇಳುತ್ತಿದ್ದರು, ಮುಮ್ಮದೆಯನ್ನು ಸೆರೆಹಿಡಿಯಬಲ್ಲ ಬೋನೆಂದರೆ ಹೆಂಗಸೊಂದೇ ಎಂದು. ಆಮೂ ಅವನು ಯಾವುದಕ್ಕೂ ಹಿಂಜರಿಯ ದವ. ಯಾವ ವಿಧದ ಬಲಪ್ರಯೋಗವನ್ನೂ ಮಾಡಬಲ್ಲ. ಹೊನ್ನಮ್ಮ ನಾದರೂ ಅವನಂಥ ಅಮಾನುಷ ಶಕ್ತಿವಂತನ ಮುಂದೆ ಏನೂ ಮಾಡ ಲಾರಳು. ಅದೂ ಅವನು ಖರ್ಚಿಗೆ ಬೇಕಾದರೂ ಕೊಡುವೆನೆಂದಿದ್ದ ನಂತೆ. ಮುಮ್ಮದೆ ಅಂಥ ಧರ್ಮಿಷ್ಠನಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿಯೇ. ಬಹುಶಃ ಅವನು ತನ್ನ ಹೆಂಡತಿಯನ್ನು ಬಯಸಿ ಹೋಗಿರಲೂಬಹುದು, ಆಕೆ ಅವನನ್ನು ನಿರಾಕರಿಸಿರಲೂ ಬಹುದು, ಬಹುಶಃ.

ಅವಳಾಗಿ ಅವನನ್ನು ಬಯಸಲಿಕ್ಕಿಲ್ಲ. ಈ ತನಕ ಇಪ್ಪತ್ತು ವರ್ಷ ಗಳಲ್ಲಿ ಅವಳು ಅಂಥ ಸಾಹಸ ನಡೆಸಿದ್ದಿಲ್ಲ. ಏನೋ ಒಂದೆರಡು ಸಲ ಅವಳು ಸ್ವಲ್ಪ ಅಡ್ಡದಾರಿಯನ್ನು ಹಿಡಿಯುವ ಸೂಚನೆಗಳು ಅವನಿಗೆ

ಕಂಡುಬಂದಿದ್ದರೂ ಅವನ್ನು ಅವನು ಮೊಳಕೆಯಲ್ಲೇ ಕಿತ್ತುಹಾಕಿದ್ದ. (ಅಥವಾ ಹಾಗೆಂದು ನಂಬಿದ್ದ). ಅದೂ ತನ್ನ ಧನಿಗಳ ಹೆದರಿಕೆಯಿಂದಾಗಿ ಮಮ್ಮದೆಗೆ ಧೈರ್ಯವಿದ್ದಿರಲಿಕ್ಕಿಲ್ಲ. ಮತ್ತೆ ಮಮ್ಮದೆಯೇನಾದರೂ ಅಂಥ ಸುಂದರ ರೂಪದವನಲ್ಲ. ಅವನನ್ನು ಕಂಡರೆ ಯಾರಿಗಾದರೂ ಜಿಗುಪ್ಸೆ ಹುಟ್ಟೀತಲ್ಲದೆ, ಪ್ರೇಮ ಹುಟ್ಟಲಿಕ್ಕಿಲ್ಲ.

ಮತ್ತೆ ಈ ಹುಡುಗ ಮಾರಪ್ಪ. ಕೆಲ ತಿಂಗಳಿನಿಂದ ಅವನಿಗೆ ತನ್ನ ಮೇಲೆ ಹೆಚ್ಚು ಆಸಕ್ತಿಯುಂಟಾಗಿದೆ ನಿಜ. ಆದರೆ ಅವನು ಹೆಚ್ಚಾಗಿ ಮನೆಗೆ ತಾನಿರುವಾಗ ಮಾತ್ರ ಬರುತ್ತಿದ್ದ. ಹೊನ್ನಮ್ಮನೊಡನೆ ಹೆಚ್ಚೊಂದು ಮಾತುಕತೆ ನಡೆಸುತ್ತಿದ್ದಿಲ್ಲ. ಅದೂ ಅವನು ತೀರ ಸಾಧು ಹುಡುಗ. ಅವನ ತಂದೆಯಂಥ ವಿಪರೀತ ಬುದ್ಧಿಯವನಲ್ಲ. ಅವನು ತನ್ನ ಮೇಲಿನ ಪ್ರೀತಿಯಿಂದ ಬಹುಶಃ ಹೊನ್ನಮ್ಮನಿಗೆ ಧೈರ್ಯ ಹೇಳಲು ಬಂದಿರಬಹುದು. ಅದೂ ಅವನು ರಾತ್ರಿಯೇ ಬರಬೇಕೆ ? ಇವನು ಹೋಗುವಾಗ, ಏಕಾಗಿ ಅವನು ಓಡಿ ಹೋಗಬೇಕು ?

ಇನು ಧನಿ ತಂತ್ರಿಯವರು. ಅವರು ಒಂದಿಷ್ಟು ಗೇಣಿ ಬಾಕಿಗೆ ಬೆಳೆಯನ್ನೇ ವಶಪಡಿಸಿಕೊಂಡರಲ್ಲ ? ತಾನು ಅವರ ಸತ್ಯನಿಷ್ಠ, ಪಾರಂಪರ್ಯದ ಒಕ್ಕಲು. ತಾನು ನಿಷ್ಕಾರಣವಾಗಿ ಶಿಕ್ಷೆಗೊಳಗಾಗಿದ್ದಕ್ಕೆ ಅವರಿಗೆ ಒಂದಿಷ್ಟು ಕರುಣೆ ಇಲ್ಲವೇ ಸಂತಾಪ ಕೂಡಾ ಇಲ್ಲವಲ್ಲ ! ತಾನು ದುಡಿದು, ಬೆವರಿಳಿಸಿ ಅವರಿಗೆ ಒಡೆಯರೆಂದು ಎಷ್ಟು ವರ್ಷಗಳಿಂದ ಗೇಣಿ ಸಲ್ಲಿಸುತ್ತಿದ್ದೇನೆ ! ಅವರ ಮನೆಯಲ್ಲಿ ಬಿಟ್ಟಿ ಬೇಗಾರಿ ಮಾಡಿದುದು ಎಷ್ಟಾಗಿರಬಹುದು ! ಆದರೆ ಅವರು ತಾನು ಅವರಿಗೆ ಸಲ್ಲಿಸಿದ ಒಂದು ಘಳಿಗೆಯ ಸೇವೆಯನ್ನೂ ಎಣಿಸಲಿಲ್ಲ. ಜೈಲಿನಲ್ಲಿದ್ದ ತನಗೆ ಸಹಾಯ ನೀಡುವುದಂತಿರಲಿ. ಅವರು ತನ್ನ ಬೆಳೆಯನ್ನಾದರೂ ಸುರಕ್ಷಿತವಾಗಿ ಬಿಟ್ಟು ಬಿಡಬಹುದಿತ್ತು. ಇನ್ನು ತಾನು ಜೈಲಿನಿಂದ ಹೊರ ಹೊರಟು ಊರಿನಲ್ಲಿ ಏನು ಮಾಡಬೇಕು ?

ಮಳೆಗಾಲದ ಬೆಳೆಗೆ ಗದ್ದೆಗಳನ್ನು ಬಿತ್ತಿದ್ದಾರೋ ಇಲ್ಲವೋ! ಯಾರು ಉಳುವುದು, ಯಾರು ಬೀಜ ಹಾಕುವುದು? ತಾನು ಇಲ್ಲಿಂದ ಹೋದರೂ ಮಳೆಗಾಲದ ಊಟಕ್ಕೆ ಏನು ಮಾಡುವುದು? ತಾನು ಜೈಲಿಗೆ ಹೋದವನೆಂದು ತನಗೆ ಸಾಲವನ್ನೂ ಯಾರೂ ಕೊಡಲಿಕ್ಕಿಲ್ಲ. ಮತ್ತೆ ಹೊನ್ನಮ್ಮನ ಕುತ್ತಿಗೆಯಲ್ಲಿದ್ದ ಕರಿಮಣಿಯನ್ನು ಕಿವಿಯ ಬೆಂಡೋಲೆಗಳನ್ನು ತೆಗೆದು ಮಾರಬೇಕಾದೀತು ವಿನಃ ಅನುಕೂಲವಾದ ಬೇರೊಂದು ಜೀವನ ಮಾರ್ಗವೂ ಉಳಿಯದು.

ತನಿಯನಿಗೆ ಊಟದ ಮಧ್ಯೆ ಇವೆಲ್ಲ ಯೋಚನೆಗಳು ಹೊಳೆದು ಮಾಯವಾದುವು. ಅಂತೂ ತಾನು ಊರಿಗೆ ಹಿಂದಿರುಗುವಾಗ ಪೂರ್ಣವಾಗಿ ಬದಲಿದ ಮನುಷ್ಯನಾಗುತ್ತೇನೆಂದು ಅವನಿಗೆ ಹಿಂದೆಯೇ ತೋರಿತ್ತು.

ಮಮ್ಮದೆ ಮತ್ತೆ ತನ್ನ ಕುರಿತಾಗಿ ಅವನೊಡನೆ ಹೇಳಿದ:

“ಇಗೋ ತನಿಯಣ್ಣ, ನನಗೆ ಈಗ ಏನಾದರೂ ಎರಡು ವರ್ಷಗಳೊಳಗೆ ಮರಳುವಂತಾಗಬಹುದು. ಆದರೆ ಹಿಂದೆ ಹೋದವ, ಈ ಜೀವವಿದ್ದರೆ ಸುಮ್ಮನೆ ಕುಳಿತುಕೊಳ್ಳಲಾರೆ. ಆ ಘಟಿಂಗ ನಾಯ್ಕನ ಹಲ್ಲನ್ನೆಲ್ಲ ಉದುರಿಸದಿರಲಾರೆ. ಅವನು ನಿನಗೆ ವಿಶ್ವಾಸ ಘಾತಕ ಮಾಡಿದ್ದು ನಿನಗೇ ಗೊತ್ತಿದೆ. ಆದರೆ ಅವನು ನನಗೆ ಎಂಥ ಆಟ ಹೂಡಿಬಿಟ್ಟ! ಮೂರುಕಾಸಿನವ, ಅಮೇಧ್ಯದಲ್ಲಿದ್ದ ಹಣಕ್ಕೂ ನಾಲಿಗೆ ನೀಡುವವನು ಅತ! ನಾನು ಅವನ ಮಗಳನ್ನು ಹೀಗೆ ನೋಡಿಬಿಟ್ಟೆನಂತೆ. ಅದಕ್ಕೆ ವೆಂಕಪ್ಪನೊಡಗೂಡಿ ನನ್ನ ಕುತ್ತಿಗೆ ಕೊಯಿದು ಬಿಟ್ಟ. ಆ ವೆಂಕಪ್ಪ ಈಗ ನನಗಿಂತ ಒಳ್ಳೆಯವ, ಏಕೆಂದರೆ ಅವನು ಕದಿಯುವುದರಿಂದಾಗಿ ಶ್ರೀಮಂತನಾದ, ನಾನು ಕದ್ದು ಬಡವನಾದೆ. ನಾಯ್ಕ ಆದಕ್ಕಾಗಿಯೇ ಅವನ ಬಾಲ ಹಿಡಿದಿದ್ದಾನೆ. ಎಲ್ಲ ಬಿಟ್ಟು ತನಿಯಣ್ಣ, ನೀನು ನಂಬಲಾರೆ. ನಾಯ್ಕ ತನ್ನ ಮನೆಯ ಆಡಳಿತೆಯನ್ನು ಕೂಡಾ ವೆಂಕಪ್ಪನಿಗೆ ಬಿಟ್ಟು

ಕೊಟ್ಟಿದ್ದಾನೆ! ನಾಯ್ಕನ ಹೆಂಡತಿ ವೆಂಕಪ್ಪ ಬಂದೊಡನೆ ಗೆಜ್ಜೆ ಮಣಿ ಕಟ್ಟಿ ಕುಣಿಯುತ್ತಾಳೆ. ನಾನು ನಾಯ್ಕನಲ್ಲಿ ಉಳಕೊಂಡಿದ್ದರೂ ನನ್ನಿಂದಾಗಿ ಅವನ ಜೀವನ ನಡೆಯುವಂತಾಗಿತ್ತು. ಇನ್ನು ಮುಂದೆ ಅವನು ನಾನು ಕೊಟ್ಟುದನ್ನೆಲ್ಲ ನೆನೆಯಬೇಕಷ್ಟೆ."

"ನಾಯ್ಕರು ಹಾಗಾದರೆ ಖದೀಮ ಆಸಾಮಿ!" ಎನ್ನುತ್ತ ತನಿಯ ತನ್ನ ಮೂಗಿನ ತುದಿಗೆ ಬೆರಳನ್ನಿಟ್ಟ.

"ಮತ್ತೇನು ತನಿಯಣ್ಣ? ನಿನ್ನನ್ನು ಅಂದು ಪೋಲೀಸರು ಹಿಡಿಯಲೂ ಅವನೇ ಕಾರಣ. ಮತ್ತೆ ನನ್ನನ್ನುಳಿಸಲಿಕ್ಕಾಗಿ ಹಾಗೆ ಮಾಡಿದೆ ಎಂದ. ಆದರೆ ನಿಜವಾಗಿ ನೋಡಿದರೆ ಆ ವೆಂಕಪ್ಪನ ಮಗನನ್ನುಳಿಸಲಿಕ್ಕಾಗಿ ಹಾಗೆ ಮಾಡಿದ. ಆ ಹುಡುಗ ಈಗ ಅವನ ಹೊಟೇಲಿನ ಕಾಯಂ ಗಿರಾಕಿಯಾಗಿದ್ದಾನೆ. ನಾಯ್ಕನ ಒಬ್ಬ ಮಗಳಿಗೂ ನಾಲಿಗೆ ನೀಡುತ್ತಿದ್ದಾನೆ. ಮತ್ತೆ ನಿನ್ನನ್ನು ಸುಳ್ಳು ಸಾಕ್ಷಿ ಹೇಳಿ ನಾಯ್ಕ ಜೈಲಿಗೆ ಕಳಿಸಿದನೆಂದು ತಿಳಿದು ನನಗೆ ತುಂಬಾ ದುಃಖವಾಯಿತು. ಆ ಕಿಲಾಡಿ ಈತನಕ ಹೀಗೆಯೇ ಎಷ್ಟು ಜನರನ್ನು ಮಾಡಿದ್ದಾನೋ ತಿಳಿಯದು. ಯಾವುದಕ್ಕೂ ನಾನೊಮ್ಮೆ ಹಿಂತಿರುಗುತ್ತೇನೆ. ಮತ್ತೆ ನೋಡು. ನನಗೆ ಅಂತೂ ಜೀವದಲ್ಲಿ ಆಸೆಯಿಲ್ಲ. ಸಾಕಲು ಹೆಂಡತಿ ಮಕ್ಕಳಿಲ್ಲ. ಆದರೆ ಈ ಹಗಲುಗತ್ತಲೆ ವಂಚಕರ ಬೆನ್ನಿನ ಚರ್ಮವನ್ನೊಮ್ಮೆ ಸುಲಿಯದೆ ಬಿಡಲಾರೆ."

"ಅದೆಲ್ಲ ಇಲ್ಲಿ ನಮಗೆ ಹಾಗೆಯೇ ತೋರುತ್ತದೆ" ತನಿಯನ ಗೆಳೆಯನಾದ ಹುಡುಗ ಮುಮ್ಮದೆಗೆ ಹೇಳಿದ. "ನಾನೂ ನಾಲ್ಕು ಸಲ ಜೈಲಿನಿಂದ ಹೊರ ಹೋದೊಡನೆ ಲೋಕವನ್ನೇ ಧ್ವಂಸಮಾಡಬೇಕೆಂದು ಬಯಸಿದ್ದೆ. ಆದರೆ ಅಲ್ಲಿ ಹೋದ ಮೇಲೆ ಯೋಚನೆ ಬೇರೆಯೇ! ಆಗ, ತಾನಿನ್ನು ಜೈಲಿಗೆ ಹೋಗಬಾರದು, ಇತರರಂತೆ ಸಭ್ಯನಾಗಿ ಬಾಳಬೇಕು, ಹಣ ಮಾಡಬೇಕು, ಜೀವನವನ್ನು ಸುಖವಾಗಿ ನಡೆಸಬೇಕು — ಇತ್ಯಾದಿ ಭಾವನೆಗಳೇ ತಲೆಗೆ ಬರುವುವು. ಆ

ಭಾವನೆಗಳಿಂದಾಗಿಯೋ ಪುನಃ ಜೈಲು ಸೇರಬೇಕಾಗುವುದು ಎಂಬುದು ನನ್ನ ಅನುಭವದ ಮಾತು."

"ಥೂ! ನಿನ್ನ ಹುಡುಗನ ಅನುಭವ ಏನು, ನನ್ನ ಅನುಭವ ವೇನು! ಪ್ಚ! ನಾನು ಮಾಡಿದ್ದನ್ನು ನೀನು ಈ ಜನ್ಮದಲ್ಲಿ ಮಾಡಲಿಕ್ಕೆ...."

ಎಂದು ಮುಮ್ಮದೆ ಹೇಳುವಷ್ಟರಲ್ಲಿ ಹಿಂದಿನಿಂದ ಅವನ ಬೆನ್ನಿಗೆ ಒಂದು ಹೊಡೆತ ಬಿತ್ತು. ಮೂವರೂ ಕಕ್ಕಾಬಿಕ್ಕಿಯಾಗಿ ನೋಡು ವಾಗ ಜೈಲರ ಅವರ ಮುಂದೆ ನಿಂತುಕೊಂಡು ಮೀಸೆಯನ್ನು ಹುರಿ ಮಾಡುತ್ತಿದ್ದ.

"ಏನು ಸಾಹುಕಾರರೇ!" ಅವನು ಮೂದಲಿಸಿದ. "ನಿಮ್ಮ ಗಂಧ ಸರಕನ್ನು ಇದರೊಳಗೂ ಮಾರಾಟ ಮಾಡುತ್ತಿದ್ದಿಯಾ, ನಾಯಿ?"

ಮುಮ್ಮದೆ ಉತ್ತರವಾಗಿ ಹಲ್ಲುಕಡೆಯುವುದು ತನಿಯುನಿಗೂ ಕೇಳಿತು.

ಆದರೆ ಮೂವರ ಮುಖದಲ್ಲೂ ದೈನ್ಯತೆ ಹೊರಸೂಸುತ್ತಿತ್ತು.

## ೧೦

ತನಿಯನನ್ನು ಜೈಲಿನಿಂದ ಬಿಟ್ಟೊಡನೆ ಊರಿಗೆ ತೆರಳುವುದು ಹೇಗೆ ಎಂದು ಅವನಿಗೆ ತಿಳಿಯದಾಯಿತು. ಅವನ ಕೈಯಲ್ಲಿ ಒಂದು ಚಿಕ್ಕಾಸೂ ಇರಲಿಲ್ಲ. ಮತ್ತೆ ವಸ್ತ್ರವಂತೂ ಒಂದು ಸಣ್ಣವಸ್ತ್ರ ಮಾತ್ರ. ಅದನ್ನು ಅಂದು ಪೋಲೀಸರು ಸೆರೆಹಿಡಿಯುವಾಗ ಸ್ವಲ್ಪ ಹರಿದು ಹಾಕಿದ್ದರು.

ಜೈಲಿನಿಂದ ಹೊರಡುವ ಮುಂಚಿನ ದಿನ ಮುಮ್ಮದೆ ತನಿಯನಿಗೆ ಎಷ್ಟೋ ಹೇಳಿಕೊಟ್ಟಿದ್ದ. ಮೊದಲಾಗಿ ಊರನ್ನು ಸೇರಿದೊಡನೆ ನಾಯ್ಕರ ಮನೆಗೆ ಬೆಂಕಿ ಹಾಕಬೇಕು! ಜೈಲಿಗೆ ಹೆದರಬಾರದು, ಅದರಲ್ಲಿರುವ ಸೌಕರ್ಯಗಳು ಊರಲ್ಲಿ ದೊರೆಯವು, ಸೆರೆಮನೆವಾಸ ವೆಂದರೆ ಅರಸರ ಆತಿಥ್ಯವೆಂದು ಪ್ರಸಿದ್ಧಿಹೊಂದಿದೆ ಎಂದೂ ಮುಮ್ಮದೆ ವಾದಿಸಿದ. ಇಲ್ಲವಾದರೆ ನಾಯ್ಕರು ಇನ್ನೂ ಏನಾದರೂ ಪೀಕಲಾಟ ಮಾಡದಿರಲಿಕ್ಕಿಲ್ಲವಂತೆ. ನಾಯ್ಕರಿಗೆ ಬುದ್ಧಿ ಕಲಿಸಿದ ಬಳಿಕ ವೆಂಕಪ್ಪ ನನ್ನು ಹಿಡಿಯಬೇಕಂತೆ. ಅವನ ಕದ್ದ ಹಣದ ಪರಾಕ್ರಮವನ್ನು ನೋಡಬೇಕಂತೆ. ಹೀಗೆ ಅನೇಕ ಪೌರುಷದ, ಪರಾಕ್ರಮದ ಮಾತು ಗಳನ್ನು ಮುಮ್ಮದೆ ಹೇಳಿ ತನಿಯನನ್ನು ಸ್ವಲ್ಪ ಉದ್ರೇಕಿಸಿದ್ದ.

ಆದರೆ ತನಿಯನಿಗೆ ಜೈಲಿನ ಹೊರಗೆ ಕಾಲಿಡುವಾಗ ತಾನು

ಹೊರಗೆ ಬಂದುದೇ ದೊಡ್ಡ ಪುಣ್ಯವೆಂದು ತೋರಿತು. ಈಗ ತಾನು ಏನನ್ನು ಮಾಡಲೂ ಸ್ವತಂತ್ರ. ಇನ್ನು ಜುಗಾರಿ ಆಡುವುದು ಒಂದನ್ನು ಬಿಟ್ಟುಬಿಟ್ಟರೆ ಜೈಲಿನ ಸುಖವನ್ನು ಅನುಭವಿಸುವ ಸಂದರ್ಭ ಇಡೀ ಜೀವನದಲ್ಲೇ ತನಗೆ ದೊರಕಲಿಕ್ಕಿಲ್ಲವೆಂದು ನೆನೆದು ಅವನೊಮ್ಮೆ ಉಲ್ಲಸಿತನಾದ. ಆದರೆ ವೇಗವಾಗಿ ನಡೆಯಲು ಮೈಯಲ್ಲಿ ತ್ರಾಣವಿಲ್ಲ. ಒಂದಿಷ್ಟು ಆಹಾರವನ್ನಾದರೂ ತಿಂದೇನೆಂದರೆ ಕೈಯಲ್ಲಿ ಕಾಸಿಲ್ಲ.

ಪೇಟೆಯಲ್ಲೇ ಎಲ್ಲಾದರೂ ಒಂದೆರಡು ದಿನಗಳ ಮಟ್ಟಿಗೆ ಚಾಕರಿ ಕೆಲಸ ಸಿಗಬಹುದೇ ಎಂದು ಅವನು ಯೋಚಿಸುತ್ತ, ಒಂದೆರಡು ಮನೆಗಳಲ್ಲಿ ಕೆಲಸಕ್ಕೆ ಜನ ಬೇಕೇ ಎಂದು ಕೇಳಿದ. ಅವರು ಅವನ ವಿಕಾರ ರೂಪವನ್ನು ನೋಡಿ ನಕ್ಕರು ವಿನಹ ಕೆಲಸ ಕೊಡಲಿಲ್ಲ. ಇನ್ನು ಸಾಮಾನು ಹೊರಲಿಕ್ಕೆ ಅಂಗಡಿಗಳಲ್ಲೇನಾದರೂ ಸಿಗುವುದೆ ಎಂದು ವಿಚಾರಿಸಿದ. ಅಲ್ಲಿಯೂ ಬೇಕಾದಷ್ಟು ಜನರಿದ್ದರು. ಅದೂ ತೀರ ಅಪರಿಚಿತನಿಗೆ ಅವರೊಡನೆ ಯಾವ ಕೆಲಸವೂ ಇಲ್ಲ. ಕೊನೆಗೆ ತನಗೆ ಉಣ್ಣಲಿಕ್ಕೆ ತಕ್ಕಷ್ಟು ಬೇಡುವುದೆಂದು ನಿಶ್ಚಯಿಸಿದ.

ಹಾಗೆಯೇ ಒಬ್ಬರ ಬಳಿ ಬರಲೂ ಬಂದ. ಅಂಜುತ್ತಂಜುತ್ತ ಅವರ ಮುಂದೆ ಕೈಚಾಚಿದ. ಅವರು ಅವನನ್ನು ಮೊದಲು ನೋಡಲೇ ಇಲ್ಲ. ಮತ್ತೆ "ಸ್ವಾಮಿ" ಎಂದ.

ಅವರು ಕಣ್ಣನ್ನು ತಿರುಗಿಸಿ ಅವನನ್ನೇ ತಿವಿಯುವ ಕಣ್ಣುಗಳಿಂದ ನೋಡಿದರು.

"ಸ್ವಾಮೀ, ಹಸಿವಾಗುತ್ತದೆ" ಎಂದು ಮೆಲ್ಲು ಬಿಟ್ಟ.

"ನಡೆಯಾಚೆ. ನಿನ್ನ ಕೈಕಾಲುಗಳು ಕಲ್ಲಿನಂತಿವೆ! ಬೇಡಲಿಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೆ?" ಎನ್ನುತ್ತ ಅವರು ತಮ್ಮ ಅಂಗಿಯ ಜೇಬಿನೊಳಗೆ ಕೈಹಾಕಿದರು.

"ಅಲ್ಲ ಸ್ವಾಮೀ", ತನಿಯ ಉತ್ತರಿಸಿದ. "ನಾ ಬೇಡುವವನಲ್ಲ. ನನ್ನ ದುರದೃಷ್ಟದಿಂದ ನಾನು ಜೈಲಿಗೆ ಹೋದೆ. ಇಂದುತಾನೇ

ಬಿಟ್ಟರು. ಈಗ ಊರಿಗೆ ಹೋಗಲಿಕ್ಕೆ ಕೂಡಾ ನನ್ನಲ್ಲಿ ಕಾಸಿಲ್ಲ."

ಆ ಮನುಷ್ಯ ತನಿಯನನ್ನೇ ನೋಡುತ್ತಿದ್ದ.

"ನಿನ್ನ ಊರಾವುದು ?" ಎಂದು ಕೇಳಿದನವ.

"ಹಲಸಿನಕಟ್ಟೆ ಸ್ವಾಮಿ." ತನಿಯನೆಂದ.

"ಇಲ್ಲಿಂದ ಎಷ್ಟು ದೂರ ?"

"ಇಪ್ಪತ್ತು ಇಪ್ಪತ್ತೈದು ಮೈಲುಗಳು."

"ಅಲ್ಲಿ ನಿನ್ನ ಕಸಬು ?

"ಬೇಸಾಯ. ಮತ್ತೆ ರಸ್ತೆಯಲ್ಲಿ ಕಲ್ಲುಹಾಕುವ ಕೆಲಸವನ್ನು ಮಾಡುತ್ತಿದ್ದೆ."

"ಈಗ ಮನೆಯಲ್ಲಿ ಯಾರಿದ್ದಾರೆ?"

"ನನ್ನ ಹೆಂಡತಿ ಮಾತ್ರ ಸ್ವಾಮಿ. "

"ನೀನು ಏಕೆ ಜೈಲಿಗೆ ಹೋದಿ ?"

"ಜುಗಾರಿ ಆಡಿದ್ದಕ್ಕೆ. ಮತ್ತೆ........"

"ಮತ್ತೆ ?"

"ನಾನು ಕಳ್ಳನೆಂದು ಪೋಲೀಸರು ಹೇಳಿದರು."

"ಓಹೋ ! ಈಗಲೂ ನೀನು ಸುಳ್ಳು ಹೇಳುವುದನ್ನು ಬಿಟ್ಟಿಲ್ಲವೆ ? ಇನ್ನೊಮ್ಮೆ ಕದಿಯು. ಆಗ ನಿನಗೆ ಬೇಕಾದಷ್ಟು ಸಿಗುವುದು. ಇಲ್ಲಿಂದ ನಡಿ."

"ಇಲ್ಲ ಸ್ವಾಮಿ, ನಾನೊಂದೂ ಕದ್ದವನಲ್ಲ."

"ಅಕೋ, ಅಲ್ಲಿ ಜನರಿದ್ದಾರೆ. ನನ್ನಿಂದ ನಿನಗೇನೂ ಸಿಗದು. ಕಳ್ಳ. ನಿನಗೆ ಕೆಲಸ ಮಾಡಿ ಜೀವಿಸಲಿಕ್ಕೆ ಅಷ್ಟು ಸಂಕಟ !"

"ಇಲ್ಲ ಸ್ವಾಮಿ ! ನನಗೆ ಹಸಿವು—"

"ನಡಿ ಇಲ್ಲಿಂದ. ಇಲ್ಲವಾದರೆ ಪೋಲೀಸರನ್ನು ಕರೆಯುತ್ತೇನೆ."

ತನಿಯ ದೂರ ಸರಿದ. ಆ ಮನುಷ್ಯ ಶ್ರೀಮಂತನಂತೆ ಕಾಣುತ್ತಿದ್ದ. ತಲೆಯಲ್ಲಿ ದೊಡ್ಡ ಮುಂಡಾಸಿತ್ತು. ಕೋಟಿನಲ್ಲಿ

ಭಂಗಾರದ ಗಡಿಯಾರದ ಸರಪಳಿ ನೇತಾಡುತ್ತಿತ್ತು. ಕಿವಿಗಳಲ್ಲಿ ವಜ್ರದ ಹರಳಿನ 'ಒಂಟಿ'ಗಳು ಹೊಳೆಯುತ್ತಿದ್ದುವು. ಕೈಯ ನಾಲ್ಕು ಬೆರಳುಗಳಲ್ಲೂ ಚಿನ್ನದ ಉಂಗುರಗಳಿದ್ದುವು. ಕೈಯಲ್ಲಿ ಬೆಳ್ಳಿ ಕಟ್ಟಿದ ಬೆತ್ತವಿತ್ತು. ಅವನು ಕೇಳಿದ ಪ್ರಶ್ನೆಗಳೂ ತನಿಯನಲ್ಲಿ ಆಶಾಭಾವ ವನ್ನು ಉಂಟುಮಾಡಿದ್ದುವು. ಆದರೆ ಕೊನೆಗೆ ಅವನಿಗೆ ಜೀವನದಲ್ಲೇ ಜಿಗುಪ್ಸೆ ಪಡುವ ರೀತಿಯಲ್ಲಿ ಮಾತನಾಡಿದ. ತನಿಯನಿಗೆ ಮತ್ತೆ ಅವನನ್ನು ಒತ್ತಾಯಿಸಲು ಮನಸ್ಸು ಬರಲಿಲ್ಲ.

'ಹೌದು. ನಾನು ಇನ್ನೂ ಕೆಲಸ ಮಾಡಬಲ್ಲೆ. ಕೈಕಾಲುಗಳು ಸರಿಯಾಗಿವೆ. ನಾನು ಬೇಡಬಾರದು. ನಾನು ಬೇಡುವವರಿಗೆ ಕೊಡುವವ. ಇಲ್ಲಿ ನನ್ನನ್ನು ಯಾರೂ ನಂಬುವವರಿಲ್ಲ. ನನಗೆ ಎಲ್ಲಿಯೂ ಆಶ್ರಯ ಸಿಗದು. ಅದೂ ಜೈಲಿನಿಂದ ಹೊರಬಂದವ ನೆಂಬುದು ನನ್ನನ್ನು ನೋಡುವಾಗಲೇ ಜನರಿಗೆ ಗೊತ್ತಾಗುತ್ತದೆ, ಬಹುಶಃ. ಇನ್ನು ಊರಿಗೆ ಹೋದರೂ ಇದೇ ಗತಿಯೋ ಏನೋ'

—ಎನ್ನುತ್ತ ಅವನು ಇನ್ನೂ ಮುಂದರಿದ.

ಆಗಲೇ ದಾರಿಯಲ್ಲಿ ಮೇಸ್ತ್ರಿ ದಾಸಪ್ಪ ಸಿಕ್ಕಿದ. ಅವನೊಡನೆ ಸಾಹುಕಾರರೂ ಇದ್ದರು. ತನಿಯ ಇಬ್ಬರಿಗೂ ನಮಸ್ಕರಿಸಿದ.

"ಯಾವಾಗ ಹೊರಗೆ ಬಂದಿ ತನಿಯ ?" ಎಂದು ಮೇಸ್ತ್ರಿ ವಿಚಾರಿಸಿದ.

"ಇಂದು. ನನಗೆ ಹೊಟ್ಟೆಗಿಲ್ಲದೆ ಹಸಿವಾಗುತ್ತದೆ. ಊರಿಗೆ ಹೋಗಲೂ ಹಣವಿಲ್ಲ" ಎಂದು ತನಿಯ ದೈನ್ಯದಿಂದ ಹೇಳಿದ.

"ಓಹ್ ! ಬಹಳ ಇಳಿದು ಹೋಗಿದ್ದೀಯಾ ! ನಿನ್ನ ಬದಲಿಗೆ ನಾವು ಪಾವುಲು ಸೋಜನನ್ನು ಕೆಲಸಕ್ಕೆ ನೇಮಿಸಿದ್ದೇವೆ."

"ಅದಿರಲಿ ಮೇಸ್ತ್ರಿಗಳೇ. ನನಗೆ ಈಗ ಒಂದು ಎಂಟಾಣೆ ಯನ್ನಾದರೂ ಕೊಡಿ. ಮತ್ತೆ ಲೆಕ್ಕ ನೋಡುವ."

"ಹಣ ? ನೀನೇ ನಮಗೆ ಕೊಡಬೇಕಾದ್ದಿದೆ. ಲೆಕ್ಕದ ಪುಸ್ತಕ

ಊರಲ್ಲಿದೆ. ನೋಡಿ ಹೇಳುತ್ತೇನೆ. ಈಗ ನಿನಗೆ ಏನೂ ಕೊಡ ಲಾಗುವುದಿಲ್ಲ" ದಾಸಪ್ಪನೆಂದ.

"ಏನೇ ಇರಲಿ. ನಾನು ಎಂಟಾಣೆಯನ್ನು ಹೇಗಾದರೂ ಸಂದಾಯ ಮಾಡದೆ ಬಿಡಲಿಕ್ಕಿಲ್ಲ" ಎಂದು ತನಿಯ ಅತ್ತ.

ಆಗ ಸಾಹುಕಾರರು ಮೇಸ್ತ್ರಿಯನ್ನು ನೋಡಿ "ನಡಿ" ಎನ್ನುತ್ತ ಮುಂದರಿದರು.

ತನಿಯ ನಿಂತುಕೊಂಡು ಅವರಿಬ್ಬರನ್ನೂ ನೋಡಿದ.

ಮೇಸ್ತ್ರಿಯ ಮಾತುಗಳು ನಿಜವಾಗಿಯೂ ಅವನಿಗೆ ವಿಸ್ಮಯ ವನ್ನುಂಟುಮಾಡಿದ್ದುವು. ಅವನಿಗೆ ಹತ್ತು ದಿನಗಳ ಸಂಬಳ ಮೇಸ್ತ್ರಿಯಿಂದ ಬರಬೇಕಾಗಿತ್ತು. ಆದರೆ ಈಗ ಅದನ್ನು ಕೊಡು ವುದಂತಿರಲಿ, ಎಂಟಾಣೆ ಸಾಲ ಕೂಡಾ ಕೊಡಲಿಕ್ಕೆ ಅವನು ನಂಬಲಿಲ್ಲ.

ಅದೇ ಮೇಸ್ತ್ರಿ ಪ್ರತಿವರುಷವೂ ತನ್ನಿಂದ ಆರೇಳು ರೂಪಾಯಿ ಗಳನ್ನು ಲಂಚವಾಗಿ ಪಡೆಯುತ್ತಿದ್ದ. ಹಿಂದೊಮ್ಮೆ ಅವನಿಗೆ ಸನ್ನಿಪಾತ ಜ್ವರ ಬಂದಾಗ ತಾನೇ ತನ್ನ ಮನೆಯಲ್ಲಿ ಅವನನ್ನು ಇಟ್ಟುಕೊಂಡು ಉಪಚಾರ ಮಾಡಿದ್ದೆ. ಎಷ್ಟೋ ಸಲ ನನ್ನೊಡನೆ ಅವನು ಶರಾಬು ಕುಡಿದಿದ್ದ! ಅನೇಕ ಬಾರಿ ತನ್ನ ಮನೆಗೆ ಬಂದು ಊಟಮಾಡಿದ್ದ! ಇವನ್ನೆಲ್ಲ ಇವನು ಇಷ್ಟು ಶೀಘ್ರವಾಗಿ ಮರೆತನಲ್ಲಾ ಎಂದ ತನಿಯನಿಗೆ ವಿಷಾದವಾಯಿತು. ಈಗ ಎಂಟಾಣೆಗಳನ್ನು ತನಗೆ ಕೊಡುತ್ತಿದ್ದರೆ ತಾನು ಬೇಕಾದರೆ ಎಂಟು ರೂಪಾಯಿಗಳನ್ನು ಅವನಿಗೆ ಹಿಂದೆ ಕೊಡುತ್ತಿದ್ದೆ. ತಾನು ಜೈಲಿಗೆ ಹೋದವನೆಂದು ಇವನಿಗೂ ಇಷ್ಟು ತಾತ್ಸಾರವಾಯಿತಲ್ಲಾ ಎಂದು ಮನಸ್ಸಿನಲ್ಲೇ ಪ್ರಲಾಪಿಸಿದ.

ಆದರೆ ಏನು ಮಾಡಬಹುದು? ಇದು ದೊಡ್ಡ ನಗರವೆಂಬುದು ನಿಜ. ಮೂರು ನಾಲ್ಕು ಮಾಳಿಗೆಯ ಕಟ್ಟಡಗಳು ಹಲವಿವೆ.

ಅಸಂಖ್ಯಾತ ಬೀದಿಗಳಿವೆ, ರಸ್ತೆಗಳಿವೆ. ಸಾವಿರಾರು ಮಂದಿ ವಾಸಿಸುತ್ತಿದ್ದಾರೆ. ನೂರಾರು ವಾಹನಗಳು ಚಲಿಸುತ್ತಿವೆ. ಬೇಕಾದ ತಿಂಡಿ ತಿನಸುಗಳನ್ನು ಒದಗಿಸುವ ವೈಭವಯುಕ್ತ ಹೊಟೇಲುಗಳಿವೆ. ಇಡೀ ಊರಿಗೆ ಬೇಕಾದಷ್ಟು ಬಟ್ಟೆ ಬರೆಗಳನ್ನು ಒದಗಿಸ ಬಲ್ಲ ದೊಡ್ಡ ದೊಡ್ಡ ಜವಳಿಯ ಮಳಿಗೆಗಳಿವೆ. ಒಂದೇ ಬಾರಿ ನೂರಾರು ಜನರಿಗೆ ಮನರಂಜನೆಯನ್ನೊದಗಿಸಬಲ್ಲ ಅಲಂಕಾರಮಯವಾದ ಚಲಚಿತ್ರ ಗೃಹಗಳಿವೆ. ಆದರೆ ಇವೆಲ್ಲಕ್ಕೂ ಹಣಬೇಕು. ಚೀಲ ಚೀಲ ಹಣಬೇಕು. ಹಳ್ಳಿಯಲ್ಲಾದರೆ ಹಣವಿಲ್ಲದಿದ್ದರೆ, ಗೆಡ್ಡೆ ಗೆಣಸುಗಳನ್ನಾದರೂ ತಿಂದು ಬದುಕಬಹುದು. ಆದರೆ ಇಲ್ಲಿ ಹಣ ವಿಲ್ಲದಿದ್ದರೆ, ಮಾರ್ಗದ ಬದಿಯ ಧೂಳೀ ಗತಿ. ಹಣವೊಂದು ಇಲ್ಲಿ ಇದ್ದರೆ ಮಾತ್ರ ಹುಲಿಯ ಹಾಲನ್ನು ಪಡೆಯಬಹುದು. ನೂರಾರು ಜನರನ್ನು ಕೆಲಸಕ್ಕೆ ನೇಮಿಸಿಕೊಳ್ಳಬಹುದು. ತನಿಯನಿಗೆ ಇದನ್ನೆಲ್ಲ ನೆನೆಯುವಾಗ ಒಮ್ಮೆ ನಗು ಬಂತು.

ಅಲ್ಲೇ ಒಂದು ಹೆಣದ ಗಾಡಿ ಹೋಗುತ್ತಿದೆ. ಅದನ್ನೆಷ್ಟು ಸಿಂಗರಿಸಿದ್ದಾರೆ! ಅದರ ಹಿಂದೆ ಮುಂದೆ ಎಷ್ಟು ಮಂದಿ ಜನರಿದ್ದಾರೆ. ಹಣವಿದ್ದರೆ ಹೆಣಕ್ಕೂ ಕೂಡಾ ಅಷ್ಟು ಮರ್ಯಾದೆ ಪಟ್ಟಣದಲ್ಲಿದೆ. ಇಲ್ಲಿ ತನ್ನಂಥವರು ಸತ್ತರೆ ನಾಯಿಗಳೇ ತಿನ್ನಬೇಕಾದೀತು ಎಂದು ಅವನಿಗೆ ಹೊಳೆಯಿತು.

ಹಾಗೆಯೇ ಸ್ವಲ್ಪ ದೂರ ಹೋಗಿ ಒಂದೆಡೆ ಕುಳಿತುಕೊಂಡ. ಅಲ್ಲಿದ್ದ ಜನರು ಅವರವರೊಳಗೇ ಮಾತನಾಡುತ್ತ ನಗುತ್ತಿದ್ದರಲ್ಲದೆ ಅವನೊಡನೆ ಒಂದು ಮಾತನ್ನು ಕೂಡಾ ಆಡಲಿಲ್ಲ. ಈರೀತಿಯ ಕಠಿನ ವರ್ತನೆ ಅವನಿಗೆ ತಿಳಿಯದು. ಅವನು ಬಡವನಾದರೂ, ಅವನ ಮನೆಗೆ ಬಂದ ಯಾರನ್ನಾದರೂ ಅವನು ಉಪಚರಿಸದಿರು ತ್ತಿದ್ದಿಲ್ಲ. ಮತ್ತೆ ಬೇಕಾದರೆ ಒಂದು ಮುಷ್ಟಿ ಅಕ್ಕಿಯನ್ನಾದರೂ ಬಂದವರಿಗೆ ಕೊಡುತ್ತಿದ್ದ. ಆದರೆ ಇಲ್ಲಿ ಅವನನ್ನು ವಿಚಾರಿಸುವವರಿಲ್ಲ.

ಅವನನ್ನು ಗಮನಿಸುವವರು ಕೂಡಾ ಇಲ್ಲ!

ಹಾಗೆ ಕುಳಿತಿದ್ದಾಗಲೇ ಒಂದು ಮೋಟರು ಬಂತು. ಹೌದು, ಅದು ಅವನ ಊರಿಗೆ ಹೋಗುವ ಮೋಟರು. ಅದರ ಡ್ರೈವರ ಮೋನಪ್ಪನದು ತನಿಯನಿಗೆ ಪರಿಚಯವಿದೆ. ಅದನ್ನು ನೋಡುತ್ತಿರುವಾಗಲೇ ಅದರ ಕಂಡಕ್ಟರ ಮ್ಯೊದಿನೆ ತನಿಯ ಕುಳಿತಿದ್ದ ಅಂಗಡಿಗೆ ಬಂದ. ತನಿಯ ಅವನನ್ನು ಕಂಡೂ ಕಾಣದವನಂತೆ ಅತ್ತ ನೋಡಿದ. ಮಾನವ ಕುಲದ ಮೇಲೆಯೇ ಅವನಿಗೆ ಆಗ ವಿರೋಧವುಂಟಾಗಿತ್ತು.

ಮ್ಯೊದಿನೆ ತನಿಯನನ್ನು ನೋಡಿದ. ಅವನಿಗೆ ಗುರುತು ಸಿಕ್ಕಿತು: ತನಿಯ ಅವನಿಗೆ ನಾಲ್ಕೈದು ಸಲ ಹಲಸಿನ ಹಣ್ಣುಗಳನ್ನು ಕೊಟ್ಟಿದ್ದ. ಅಲ್ಲದೆ ಒಮ್ಮೊಮ್ಮೆ ಕಳಿಲೆ, ಮಾವಿನ ಹಣ್ಣುಗಳನ್ನೂ ಕೊಟ್ಟಿದಿತ್ತು.

"ಏನು ತನಿಯಣ್ಣ? ಹೀಗೇಕೆ ಇಲ್ಲಿ ಬಂದೆ?" ಎಂದು ಕೇಳಿದನವ.

"ಹೊಂ ಹೀಗೆಯೇ" ತನಿಯನೆಂದ. "ನನ್ನ ಗುರುತು ನಿಮಗೆ ಸಿಕ್ಕಿತೆ? ನಾನು ತುಂಬಾ ಬದಲಿದ್ದೇನಲ್ಲ?"

"ಒಹ್ ಗುರುತು ಸಿಕ್ಕದೆ ಏನು? ಏನು ಇಲ್ಲಿ ಧನಿಗಳಲ್ಲಿ ಬಂದೆಯಾ?"

"ಇಲ್ಲಪ್ಪ" ಎಂದ ತನಿಯ.

"ಮತ್ತೆ ಊರಿಗೆ ಯಾವಾಗ?"

"ಯಾವಾಗಲಾದರೂ ಹೋದರಾಯಿತು."

"ಬಸ್ಸಿನಲ್ಲಿ ಬರುವೆಯಾ?"

"ನನ್ನೊಡನೆ ಹಣವಿಲ್ಲ."

"ಚಿಂತಿಲ್ಲ. ಬರುತ್ತೀಯಾದರೆ ಬಾ."

ತನಿಯನಿಗೆ ಹೋದ ಜೀವ ಮರಳಿದಂತಾಯಿತು. ಈ

ವ್ಯೊದಿನೆ ಹೇಗಾದರೂ ಕೊಂಡು ಹೋಗದಿರಲಾರನೆಂದು ಎಣಿಸುತ್ತ ಸಂಕೋಚದಿಂದ ಬಸ್ಸಿನ ಬಳಿಗೆ ಹೋದ.

" ಏನೋ ಬಹಳ ಮೆಲ್ಲಗೆ ಹೋಗುತ್ತೀಯಲ್ಲ ? ಹಲಸಿನಕಟ್ಟೆಗೆ ಬರುತ್ತೀಯಾ ?" ಎಂದ ಡ್ರೈವರ್ ಮೋನಪ್ಪ ನಗುತ್ತ.

ತನಿಯ ಬಸ್ಸನ್ನೇರಿ ಕುಳಿತುಕೊಂಡ.

ವ್ಯೊದಿನೆ ಮತ್ತೆ ಏನೋ ಎಲ್ಲ ಬರೆಯುವುದರಲ್ಲೇ ಮಗ್ನನಾದ. ತನಿಯ ಕುಳಿತವರನ್ನು ನೋಡುತ್ತಿದ್ದ. ಇಬ್ಬರು ಎಲೆಯಡಿಕೆ ಹಾಕುತ್ತಿದ್ದರು. ಅವರೊಡನೆ ಸ್ವಲ್ಪ ಅದನ್ನು ಕೇಳೋಣವೆಂದು ಅವನಿಗೊಮ್ಮೆ ತೋರಿತು. ಆದರೆ ಆಗ ಅವನ ಸ್ವಾಭಿಮಾನ ಉಕ್ಕಿ ಬಂತು. ಎಲೆಯಡಿಕೆ ಹಾಕದೆ ನಾಲ್ಕೈದು ತಿಂಗಳು ಕಳೆದಿದ್ದರೂ, ಇನ್ನು ಬೇಡಿ ಅದನ್ನು ತಿನ್ನಲಾರೆನೆಂದು ಮನಸ್ಸನ್ನು ಗಟ್ಟಿಮಾಡಿದ.

ಬಸ್ಸು ಒಂದೇ ಸಮನೆ ಮುಂದುವರೆಯುತ್ತಿತ್ತು. ಅಲ್ಲಲ್ಲಿ ಜನ ಹತ್ತುತ್ತಿದ್ದರು, ಇಳಿಯುತ್ತಿದ್ದರು. ವ್ಯೊದಿನೆ ತನಿಯನಿಗೆ ಟಿಕೇಟನ್ನು ಕೊಡಲಿಲ್ಲ. ಹಣವನ್ನು ಕೇಳಲಿಲ್ಲ.

ಒಂದೆಡೆ ಒಬ್ಬ ಬಸ್ಸಿನ ಮೇಲಧಿಕಾರಿ ಬಸ್ಸಿಗೆ ಹತ್ತಿದ. ಹತ್ತಿದವನೇ ತನಿಯನೊಡನೆ ಟಿಕೇಟು ಕೇಳಿದ. ತನಿಯ ಕಕ್ಕಾಬಿಕ್ಕಿಯಾಗಿ ನೋಡುತ್ತಿದ್ದಾಗ, ವ್ಯೊದಿನೆ ಟಿಕೇಟನ್ನು ತೋರಿಸಿದ. ತನಿಯನಿಗೆ ಆಗ ಸ್ವರ್ಗ ಮೂರೇ ಗೇಣು ದೂರದಲ್ಲಿ ತೋರಿತು.

ಮತ್ತೆ ಕಾಫಿ ಕುಡಿಯುವ ನಿಲ್ದಾಣ ಬಂತು. ಎಲ್ಲರೂ ಕಾಫಿ ಕುಡಿಯಲು ಬಸ್ಸಿನಿಂದ ಇಳಿದರು. ವ್ಯೊದಿನೆ ತನಿಯನನ್ನು ಕರೆದ. ತನಿಯ ತನಗೆ ಹಸಿವಿಲ್ಲ ಎಂದ. ವ್ಯೊದಿನೆ ಅಷ್ಟರಲ್ಲೇ ಬಿಡಲಿಲ್ಲ. ಅವನ ಕೈಯನ್ನು ಹಿಡಿದೆಳೆದು ಹೊಟೇಲಿನೊಳಗೆ ಕರೆದುಕೊಂಡು ಹೋಗಿ ನಾಲ್ಕು ಇಡ್ಲಿಗಳನ್ನು ಚಹವನ್ನು ಕೊಡಿಸಿದ. ಹೊರಗೆ ಬರುವಾಗ ನಾಲ್ಕು ಬೀಡಾಗಳನ್ನು ತೆಗೆಸಿಕೊಟ್ಟ.

ಆಮೇಲೆ ಪುನಃ ಬಸ್ಸು ಮುಂದರಿಯಿತು. ವ್ಯೊದಿನೆ ಮತ್ತೆ

ದೊಡ್ಡ ಮರುಸೆಯಾದ್ದರಿಂದ ಅದು ಸಿಂತು ಹೋಯಿತಂತೆ."

"ನಾಲಿಗೆ ನಾಯ್ಕರೆಂದು ನಿಮಗೆ ಹೆಸರಿಟ್ಟುದು ಒಳ್ಳೆಯದಾಗಿ ಒಪ್ಪುತ್ತದೆ" ಎಂದು ವೆಂಕಪ್ಪ ನಕ್ಕ.

"ಛೆ! ನಾನು ಸುಳ್ಳು ಹೇಳುವೆನೆ? ನನಗೆ ಅಲ್ಲಿ ನೋಡಿ ಬಂದ ಜನರೇ ಹೇಳಿದ್ದು. ನನಗೇನಾದರೂ ತನಿಯನನ್ನೋಲಿ ವೈರವಿದೆಯೆ?"

"ನಾಯ್ಕರಿಗೆ ವೈರವೇಕೆ? ಅವರ ಒಂದು ಸಾಕ್ಷಿಯುಲ್ಲದಿರುತ್ತಿದ್ದರೆ ತನಿಯ ಈ ಜನ್ಮದಲ್ಲೇ ಜೈಲು ಎಲ್ಲಿದೆ ಎಂದು ನೋಡುತ್ತಿದ್ದನೋ ಇಲ್ಲವೋ" ಎಂದರು ತಂತ್ರಿಯವರು.

"ಹ್ಹೊ! ನಾನೇನು ಮಾಡಿದೆ ಸ್ವಾಮಿಾ?" ನಾಯ್ಕರು ಕೇಳಿದರು. "ಪೋಲೀಸಿನವರು ಹೀಗೆಯೇ ಹೇಳಬೇಕೆಂದರು. ಅವರ ಚಿತ್ರವನ್ನೂ, ಬಿಗಿದ ಮುಷ್ಟಿಯನ್ನೂ ನೋಡಿ, ಅವರೆಂದುದಕ್ಕೆ ಒಪ್ಪದೆ ನಿರ್ವಾಹವಿರಲಿಲ್ಲ. ಹಾಗೆಯೇ ಸಾಕ್ಷಿ ಹೇಳಿದೆ."

"ಇದು ಒಳ್ಳೆಯ ಬುದ್ಧಿ ನಿಮ್ಮದು", ತಂತ್ರಿಯವರೆಂದರು. "ಈಗ ಅಂದು ತನಿಯನಿಗೆ ಸುಳ್ಳು ಹೇಳಿದಿರಿ. ನಾಳೆ ನಮಗೂ ಹಾಗೆಯೇ ಅಲ್ಲವೆ?"

"ಮತ್ತೆ ಪೋಲೀಸರ ಗುದ್ದು ತಿಂದು ಸಾಯಬೇಕೆಂದು ನೀವು ಹೇಳುವುದೇ? ಅವರು ಒಂದು ಸಾಕ್ಷಿಯನ್ನು ಹೇಳಿಸಲು ತೊಡೆಗೆ ಸೂಜಿಯಿಂದ ಕೂಡಾ ಚುಚ್ಚಬಹುದು. ರಾಮ ರಾಮಾ! ನನಗೆ ಅವರ ಸಹವಾಸ ಬೇಡಪ್ಪ!"

ಹೀಗೆಂದು ನಾಯ್ಕರು ಹೇಳುತ್ತಿರುವಾಗ ವೆಂಕಪ್ಪ ಎದ್ದು ಅವರ ಮನೆಯೊಳಗೆ ಹೋದ.

"ಏನು ನಾಯ್ಕರೆ?" ತಂತ್ರಿಯವರು ಕೇಳಿದರು. "ನಿಮ್ಮ ಮನೆಯೊಳಗೆ ಶೂದ್ರರೂ ಹೋಗಬಹುದೆ?"

"ಇಲ್ಲ ಸ್ವಾಮಿಾ, ಏನೋ ಬೀಡಿಗೆ ಬೆಂಕಿ ಹಚ್ಚಲಿಕ್ಕೆ ಹೋದನೋ ಏನೋ! ಅಂತೂ ನಮ್ಮ ಗಿರಾಕಿಗಳೆಂದರೆ ನಾವು

ಮಾತಾಡಲಿಕ್ಕಾಗುವುದಿಲ್ಲ."

"ನಿಮ್ಮ ಮನೆಯ ಹೆಂಗಸರೂ ಆಕ್ಷೇಪಿಸುವುದಿಲ್ಲವೆ? ನಮ್ಮಲ್ಲಿಯ ಹೆಂಗಸರು ನಮ್ಮ ತಲೆಗೆ ಬೆಂಕಿಯಿಟ್ಟಾರು."

"ಹೌದು ಸ್ವಾಮಿ. ನಿಮಗೆ ನಿಮ್ಮದೇ ಎಂಬ ಒಂದು ಮನೆಯಿದೆ. ನಿಮ್ಮದೇ ಅನ್ನವಿದೆ. ನನ್ನದು ಹಾಗಲ್ಲವಲ್ಲ? ಮನೆಯೂ ಇತರರದು, ಅನ್ನವೂ ಇತರರದು. ಅಷ್ಟಿಲ್ಲ ನನಗೆ ಪ್ರತಿಷ್ಠೆ ಇರುತ್ತಿದ್ದರೆ ನಾನು ಈ ಜನರ ಊಟದ ಎಂಜಲು ತೊಳೆಯುವ ಕೆಲಸಕ್ಕೆ ಕೈ ಹಾಕುತ್ತೇನೆಯೆ?"

"ಆದರೂ ನಮ್ಮ ನಕ್ಷತ್ರವು ಭೇದವಿದೆಯಲ್ಲ?"

"[illegible] ಎಲ್ಲ ಇದೆಯೆಂದು ಕೆಲವರು ಹೇಳುತ್ತಾರೆ. ಇಲ್ಲವೆಂದು ಕೆಲವರು ಹೇಳುತ್ತಾರೆ. ನನಗೆ ಜಾತಿ ಧರ್ಮಗಳೆಂದರೆ ಈ ಒಂದು ಯಜ್ಞೋಪವೀತ ಮಾತ್ರ ಗೊತ್ತು. ಅದನ್ನು ತುಂಡಾದರೂ ಹಾಕಿಕೊಳ್ಳುತ್ತೇನೆ. ನನ್ನ ಅಪ್ಪ ದೊಡ್ಡ ಧಾರ್ಮಿಕರಾಗಿದ್ದರಂತೆ. ನನ್ನ ಹೆಂಡತಿಯ ಅಣ್ಣ ಈಗಲೂ ದೇವಸ್ಥಾನದಲ್ಲಿ ಪೂಜೆಮಾಡುತ್ತಾರೆ."

"ಇದಕ್ಕೇ ಕಲಿಯುಗವೆನ್ನುವುದು ನಾಯ್ಕರೆ."

"ಕಲಿಯುಗವಾದರೂ ಸುವರ್ಣ ಯುಗವಾದರೂ, ನಾವು ಹೊಟ್ಟೆ ಹೊರೆಯುವುದಕ್ಕೆ ಬಹುವಿಧ ರೂಪಗಳನ್ನು ಧರಿಸಬೇಕಾಗುತ್ತದೆ ಸ್ವಾಮಿ. ಇಲ್ಲವಾದರೆ ಸಾವೇ ನೋಡಿ. ಈ ವೆಂಕಪ್ಪನಿದ್ದಾನೆ...."

"ಅವನೆಲ್ಲಾದರೂ ಬಂದು ಬಿಟ್ಟಾನು....!"

"ಇಲ್ಲ, ಅವನು ನಮ್ಮಲ್ಲಿ ಊಟಕ್ಕೆ ಹೋಗಿರಬೇಕು. ಅವನ ಸ್ಥಿತಿ ನಮಗೆ ಯಾರಿಗೆ ತಿಳಿದಿಲ್ಲ? ಎಷ್ಟು ಜನರಿಗೆ ವಿಶ್ವಾಸಘಾತಕ ಮಾಡಿದ್ದಾನೆ, ಎಷ್ಟು ಜನರನ್ನು ಬಲಾತ್ಕರಿಸಿ ಹಣ ಸೆಳೆದಿದ್ದಾನೆ, ಎಷ್ಟು ಮನೆಗಳಿಗೆ ಕನ್ನ ಹಾಕಿದ್ದಾನೆ ಅವನು! ಈಗ ಅವನು ಮಹಾಮರ್ಯಾದಸ್ಥ. ಅವನೊಡನೆ ನಾವು ಮಾತಾಡಲೇ ಸಾಧ್ಯವಿಲ್ಲ. ಈಗ ನಾವು ತನಿಯನ ವಿರುದ್ಧ ಸಾಕ್ಷಿ ಹೇಳಿದೆನೆಂದಿರಿ ನೀವು.

ವೆಂಕಪ್ಪ ಕಳ್ಳ ಮುಮ್ಮದೆಯೊಡನೆ ಎಷ್ಟು ಕಡೆ ಕದಿಯಲು ಹಿಂದೆ ಹೋಗಿರಲಿಲ್ಲ ? ಮುಮ್ಮದೆಯಿಂದ ಎಷ್ಟು ಚಿನ್ನಾಭರಣಗಳನ್ನು ಒಳಗೆ ಹಾಕಿಲ್ಲ ? ಅಂಥ ಮನುಷ್ಯನೇ ಮೊನ್ನೆ ಇಲ್ಲಿ ನನ್ನ ಹೊಟೇಲಿನಲ್ಲೇ ಮುಮ್ಮದೆಯನ್ನು ಪೋಲೀಸರಿಗೆ ಹಿಡಿಸಿಕೊಟ್ಟ !"

ತಂತ್ರಿಯವರಿಗೆ ನಾಯ್ಕರೆಂದುದು ಹಿಡಿಸಲಿಲ್ಲ. ನಾಯ್ಕರ ಮನೆಯಲ್ಲಿ ವೆಂಕಪ್ಪನಿಗೆ ಸರ್ವಾಧಿಕಾರವಿದೆಯೆಂಬುದು ಊರಲ್ಲಿ ಅನೇಕರಿಗೆ ತಿಳಿದ ವಿಷಯ. ಆದರೆ ತಂತ್ರಿಯವರು ಅದನ್ನು ಈತನಕ ಸಂಪೂರ್ಣವಾಗಿ ನಂಬಿರಲಿಲ್ಲ. ಎಷ್ಟೆಂದರೂ ನಾಯ್ಕರು ಉತ್ತಮ ಕುಲದವರು, ವೆಂಕಪ್ಪ ಹೀನ ಕುಲದವ. ಆದ್ದರಿಂದ ಅವರೊಳಗೆ ಹೆಚ್ಚು ಮೈತ್ರಿ ಇರಲಾರದೆಂದೇ ಅವರು ಭಾವಿಸಿದ್ದರು. ಆದರೆ ಈಗ ವೆಂಕಪ್ಪ ತಾನಾಗಿಯೇ ನಾಯ್ಕರ ಮನೆಯೊಳಗೆ ಊಟಕ್ಕೆ ಹೋದುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಮನೆಯ ಯಜಮಾನರಾದ ನಾಯ್ಕರು ಕೂಡಾ ತಮ್ಮ ಮನೆಯೊಳಗೆ ಅವನಷ್ಟು ಠೀವಿಯಿಂದ ಹೋಗಲಾರರೆಂದು ತಂತ್ರಿಯವರಿಗೆ ತೋರಿತು.

ಲೋಟದಲ್ಲಿ ಇನ್ನೂ ಸ್ವಲ್ಪ ಕಾಫಿ ಉಳಿದಿತ್ತು. ಅದನ್ನು ಅವರು ಹಾಗೆಯೇ ಬಿಟ್ಟರು. ಗಿರಾಕಿಗಳು ಒಬ್ಬೊಬ್ಬರಾಗಿಯೇ ಹೊಟೇಲಿನೊಳಗೆ ಬರುತ್ತಿದ್ದರು; ಹೋಗುತ್ತಿದ್ದರು. ನಾಯ್ಕರು ಎಲ್ಲರಿಗೂ ಬೇಕಾದಂತೆ ಕಾಫಿಯನ್ನೋ, ಚಹವನ್ನೋ, ತಿಂಡಿಯನ್ನೋ ತಯಾರಿಸಿ ಕೊಡುತ್ತಿದ್ದರು. ತಂತ್ರಿಯವರಿಗೆ ಅವರು ಒಂದು ಯಂತ್ರದಂತೆ ಕಂಡರು.

" ನಾಯ್ಕರೆ, ನೀವು ಹೊಲೆಯರನ್ನೂ ಹೊಟೇಲಿಗೆ ಬರಲು ಬಿಡುತ್ತೀರೋ ?" ಎಂದು ಕೇಳಿದರವರು.

" ಏನು ಮಾಡುವುದು ಸ್ವಾಮಿ ? ಹೊಲೆಯರೂ ಎಲ್ಲರಂತೆ ಮೊಹರು ಹಾಕಿದ ಹಣವನ್ನೇ ಕೊಡುತ್ತಾರೆ. ಮತ್ತೆ ಇತರರಂತೆ ಅವರು ಕಾಫಿಗೆ ನೀರು ಹೆಚ್ಚಾಯಿತು, ಸಕ್ಕರೆ ಕಡಿಮೆಯಾ

ಯಿತು, ಹುಡಿ ಹಾಕಲಿಲ್ಲ ಇತ್ಯಾದಿ ಟೀಕೆಗಳನ್ನು ಮಾಡುವುದಿಲ್ಲ. ಕೊಟ್ಟದ್ದನ್ನು ತೆಗೆದುಕೊಂಡು ಹೋಗುತ್ತಾರೆ. ಅವರು ಒಳ್ಳೆಯ ಗಿರಾಕಿಗಳು, ನಿಜವಾಗಿಯೂ."

"ಅಂತೂ ಹಣಕ್ಕಾಗಿ ನೀವೇನೂ ಮಾಡಬಲ್ಲಿರಿ."

"ಮತ್ತೇನು ಸ್ವಾಮಿ? ಜಾತಿಕೆಟ್ಟರೂ ಸುಖಪಡಬೇಕಂತೆ. ಮತ್ತೆ ಈಗಿನ ಗಾಂಧಿ ಕಾನೂನು ಪ್ರಕಾರ ಹೊಲೆಯನನ್ನು ಹೊಲೆಯ ನೆಂದರೆ ಜುಲುಮಾನೆ ಕೊಡಬೇಕೆಂಬುದು ನಿಮಗೆ ತಿಳಿದಿಲ್ಲವೆ? ಹಾಗೆಲ್ಲ ಮಡಿ ಮೈಲಿಗೆಗಳನ್ನು ಆಚರಿಸಲು ನಿಮ್ಮಂಥ ಶ್ರೀಮಂತರಿರ ಬೇಕು. ನನಗೆ ನನ್ನ ತಂದೆ ಸಾಯುವಾಗ ಈ ಕಾಫಿ ಕುದಿಸುವ ಪಾತ್ರೆಯನ್ನೂ ಈ ಸೌಟನ್ನೂ ಬಿಟ್ಟಿದ್ದಾರೆ. ಅದೇ ನನ್ನನ್ನು ಈತನಕ ನಡೆಸಿಕೊಂಡು ಬಂದಿದೆ."

"ಒಳ್ಳೆಯ ತತ್ವ ನಿಮ್ಮದು, ನಾಯ್ಕರೆ! ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮ ಕೂಡಾ ಹೀಗೆ ಹೇಳಿರಲಿಕ್ಕಿಲ್ಲ."

ನಾಯ್ಕರು ತುಸುಹೊತ್ತು ಸುಮ್ಮನಾದರು.

"ಏನು ನಾಯ್ಕರೆ? ಈಗ ವೆಂಕಪ್ಪ ಮರಳುವನೇ? ಅವ ನೊಡನೆ ಒಂದು ಕೆಂದಾಳಿ ತೆಂಗಿನ ಸಸಿ ಕೇಳಬೇಕೆಂದಿತ್ತು."

"ಹ್ಞೊ! ಬಾರೆದೆ ಏನು? ಆದರೆ ಅವನಿಗೆ ಸಮಯವಿದೆಯೋ ಇಲ್ಲವೋ! ಈಗ ಮಗನಿಗೆ ಮದುವೆ ನಿಶ್ಚಯ ಮಾಡಿದ್ದಾನೆ. ಅದರ ಗಲಾಟೆಯಲ್ಲೇ ಅವನು ಅನ್ನ ಕೂಡಾ ಸರಿಯಾಗಿ ತಿನ್ನುವುದಿಲ್ಲ."

"ಹಾಂ. ಆ ಹುಡುಗನಿಗೆ? ಎಲ್ಲಿಂದ ಹುಡುಗಿ?"

"ವಿಟ್ಲದಿಂದಂತೆ. ದೊಡ್ಡವರಂತೆ. ಇಲ್ಲಿ ಸಂಕುಮ್ಯೋಲಿ ತನ್ನ ಮಗಳನ್ನು ಕೊಡಬೇಕೆಂದು ವರ್ಷಗಟ್ಟಲೆ ಪ್ರಯತ್ನಿಸಿದ. ಆದರೆ ವೆಂಕಪ್ಪ ಕೇಳಬೇಕಲ್ಲ? ಈಗ ವಿಟ್ಲದ ಸಂಬಂಧ ಬಹಳ ಒಳ್ಳೆಯದಂತೆ."

"ಆ ಹುಡುಗನ ಹೆಸರೇನು ನಾಯ್ಕರೆ?"

"ಮಾ-ರಪ್ಪನೆಂದು."

"ಅವನಿಗೂ ನಮ್ಮ ತನಿಯನಿಗೂ ಬಹಳ ಸ್ನೇಹವಿದೆಯಂತೆ, ಅಲ್ಲವೆ ?"

"ಹಿಂದೆ ಒಂದೆರಡು ಸಲ ಅವರಿಬ್ಬರೂ ಕೂಡಿ ಇಲ್ಲಿ ಕಾಫಿ ಕುಡಿಯಲಿಕ್ಕೆ ಬಂದಿದ್ದರು. ಆದರೆ ತನಿಯ ಜೈಲಿನಿಂದ ಬಂದ ಬಳಿಕ, ಮಾರಪ್ಪ ಅವನೊಡನಿರುವುದನ್ನು ನಾನು ನೋಡಿಲ್ಲ."

"ಹಾಗಾದರೆ ತನಿಯ ಜೈಲಿಗೆ ಹೋದಾಗ ಅವನ ಮನೆಯನ್ನು ಕಾದು ಕುಳಿತವ ಮಾರಪ್ಪನೆಂಬುದು ನಿಮಗೆ ತಿಳಿದಿಲ್ಲ...."

"ಓಹೋ !"

ತಂತ್ರಿಯವರು ಮಾರಪ್ಪನು ತನಗೆ ಮುಖಭಂಗ ಮಾಡಿದು ದನ್ನು ಹೇಳಬೇಕೋ ಬೇಡವೋ ಎಂದು ಕ್ಷಣಕಾಲ ಯೋಚಿಸಿದರು. ಅವರಿಗೆ ಮತ್ತೊಂದು ಸಂಶಯವೆಂದರೆ ಆ ಸುದ್ದಿ ನಾಯ್ಕರಿಗೂ ತಿಳಿದಿರಬಹುದೆಂಬುದು. ಮಾರಪ್ಪ ವೆಂಕಪ್ಪನೊಡನೆ ಹೇಳಿರಲೂ ಬಹುದು. ವೆಂಕಪ್ಪ ಅದನ್ನು ಅವರೊಡನೆ ಹೇಳಿರಲೂಬಹುದು. ಆದರೆ ನಾಯ್ಕರು ಈಗ, ತಾನು ನೋಯಬಹುದೆಂದು ಅದನ್ನು ಪ್ರಸ್ತಾಪಿಸದಿರಬಹುದೆಂದು ಅವರು ನಂಬಿದರು.

"ಹುಡುಗ ಬಹಳ ಅಹಂಕಾರಿ ನಾಯ್ಕರೆ. ನಿಮಗೂ ಗೊತ್ತಿರ ಬೇಕು" ಎಂದರವರು ಮತ್ತೆ.

"ಆದರೆ ತಂದೆಗಿಂತ ಸ್ವಲ್ಪ ಒಳ್ಳೆಯವನು ತಂತ್ರಿಯವರೆ. ಏನೋ ಜನರೆಲ್ಲ ಹೇಳಿಕೊಳ್ಳುತ್ತಿದ್ದಾರೆ. ಆದರೆ ನಮಗೇಕೆ ಆ ಸುದ್ದಿ?"

"ಜನರು ಏನನ್ನು ಹೇಳುತ್ತಿದ್ದಾರೆ ?"

"ಆ ಹುಡುಗ ನಿಮ್ಮ ಮೇಲೂ ಕೈಮಾಡಿದನೆಂದು."

ತಂತ್ರಿಯವರ ಮುಖ ಇದ್ದಕ್ಕಿದ್ದಂತೆಯೇ ಕಪ್ಪಗಾಯಿತು.

"ನಾನು ಅವನನ್ನು ಹುಡುಗನೆಂದು ಬಿಟ್ಟುಬಿಟ್ಟೆ ನೋಡಿ. ಸುಮ್ಮನೆ ಸೆಗಣಿಯ ಹೊಂಡಕ್ಕೆ ಕಲ್ಲು ಹೊಡೆದರೆ ಅದು ನಮ್ಮ ಮುಖಕ್ಕೆ ಬೀಳುವುದಲ್ಲ? ಅದರಷ್ಟಕ್ಕೆ ಅದು ನಾರುತ್ತಿರುತ್ತದೆ,

ನಮಗೇನು ?

"ನೋಡಿ-ಬೇಕಾದರೆ" ನಾಯ್ಕರು ಪಿಸುಮಾತಿನಲ್ಲಿ ಹೇಳಿದರು. "ಆ ತನಿಯನೇ ಆ ಹುಡುಗನನ್ನು ಸೀಳಲಿಕ್ಕಿಲ್ಲವೆ ? ಪಾಪ ! ಅವನಿಗೆ ಇನ್ನೂ ಈ ಸುದ್ದಿ ಗೊತ್ತಾಗಿಲ್ಲ."

"ಸುದ್ದಿ ಗೊತ್ತಾಗಿಲ್ಲ ! ಎಲ್ಲಾ ಗೊತ್ತಾಗಿದೆ ನಾಯ್ಕರೆ. ಈ ಎರಡು ತಿಂಗಳಿಂದ ತನಿಯ ತನ್ನ ಹೆಂಡತಿಗೆ ಕೊಡುತ್ತಿದ್ದ ಕೋಟಲೆಯನ್ನು ಹೇಳತೀರದು. ಅವಳಿಗೆ ದಿನಾಲೂ ಹೊಡೆಯುತ್ತಿದ್ದನಂತೆ. ಒಮ್ಮೆ ಅವಳ ಸೀರೆಗೆ ಬೆಂಕಿ ಹಚ್ಚಿದನಂತೆ. ಇನ್ನೊಮ್ಮೆ ಅವಳು ಬಾವಿಯಿಂದ ನೀರು ತೆಗೆಯುತ್ತಿದ್ದಾಗ ಅವಳನ್ನು ಬಾವಿಗೆ ಹಿಂದಿನಿಂದ ದೂಡಿದನಂತೆ. ಎಲ್ಲ ಬಿಟ್ಟು, ಅವನು ತನಗೆ ಬೇಕಾದ ಅಡುಗೆಯನ್ನು ತಾನೇ ಮಾಡಿಕೊಳ್ಳುತ್ತಿದ್ದನಂತೆ. ಅವನ ಹೊಡೆತದಿಂದಾಗಿ ಹಲವು ಸಲ ಅವಳಿಗೆ ಮೂರ್ಛೆಹೋಗಿತ್ತಂತೆ. ಈ ಮಾರಪ್ಪನ ಆಟ ತಿಳಿದೇ ಅವನು ಬಂಗಾಡಿಯಲ್ಲಿ ಹೆಣ್ಣು ಹುಡುಕಲಿಕ್ಕೆ ಹೋದುದಂತೆ. ನಿನ್ನೆ ಅವನ ತಂಗಿ ಮನೆಗೆ ಬಂದವಳೇ ಹೇಳಿದಳು. ಅವಳು ಹಿಂದೊಮ್ಮೆ ಬಂದಿದ್ದಾಗ ಮಾರಪ್ಪನು ತನಿಯನ ಹೆಂಡತಿಯೊಡನಿದ್ದನಂತೆ."

"ಆ ಒಂದು ವಿಷಯದಲ್ಲಿ ಅವನು ತಂದೆಯನ್ನು ಬಿಟ್ಟಿಲ್ಲವೆಂದು ತೋರುತ್ತದೆ ತಂತ್ರಿಯವರೆ. ವೆಂಕಪ್ಪ ಏನೆಲ್ಲ ಮಾಡುತ್ತಿದ್ದನೆಂದು ನಿಮಗೆ ಗೊತ್ತಿದೆಯಲ್ಲ ?"

"ಅಂತು ಕಲಿಯುಗದ ಮಹಿಮೆ ಇದು. ಇಲ್ಲವಾದರೆ ತನಿಯನ ಹೆಂಡತಿ ಬಂಜೆಯೆಂಬುದು ಎಲ್ಲರಿಗೂ ತಿಳಿದಿದೆ. ಈಗ ಅವಳು ಮಗುವನ್ನು ಹೆತ್ತಳೆಂದರೆ ಏನೆನ್ನಬೇಕು ?"

"ಅವಳು ಹಿಂದೆಯೂ ಬಹಳ ಜೋರಿನವಳೇ ತಂತ್ರಿಗಳೆ! ಮಮ್ಮದೆ ಯಾವಾಗಲೂ ಅಲ್ಲೇ ಇರುತ್ತಿದ್ದ. ಅಲ್ಲದೆ ಸೋಮಪ್ಪ, ದೂಮ ಇನ್ನೂ ಅನೇಕ ಮಂದಿಯ ಸ್ನೇಹ ಅವಳಿಗಿತ್ತಂತೆ."

"ಅದೇನೋ ನನಗೆ ತಿಳಿಯದು. ನಾವು ಚೆನ್ನಾಗಿ ತಿಳಿಯದ್ದನ್ನು

ಆಡಬಾರದು. ಅಂತೂ ಈಗಿನ ಹುಡುಗರೇ ಹೀಗೆಂದು ಕಾಣುತ್ತದೆ. ಅವರಿಗೆ ಮದುವೆಯೆಂದರೆ ಒಂದು ಕೇವಲ ಸಂಸ್ಕಾರಮಾತ್ರ."

"ನಾವು ಸಣ್ಣವರಿರುವಾಗ ಇಂಥದೆಲ್ಲ ನಡೆಯುತ್ತಿತ್ತೆ? ನಾನು ಒಮ್ಮೆ ನನ್ನ ಹೆಂಡತಿಯೊಡನೆ ಬಹಿಷ್ಠೆಯಾದಾಗ ಮಾತಾಡಿದ್ದಕ್ಕೆ ನನ್ನ ತಂದೆ ನಾಲ್ಕೇಟು ಕೊಟ್ಟಿದ್ದರು ಸ್ವಾಮಿ."

"ಹೌದಪ್ಪ ಎಲ್ಲವೂ ಹೀಗೆಯೇ ಬದಲುತ್ತಿದೆ. ಅಂತೂ, ತನಿಯನಿಗೊಂದು ಮಗು ಬೇಕೆಂದಿತ್ತು. ಆ ಆಸೆ ತೀರಿತು."

"ಮಕ್ಕಳು ಹೇಗಾದರೆ ಏನು ಸ್ವಾಮಿ? ಎಲ್ಲವೂ ಏನೋ ಒಂದು ಆಸೆ."

"ಹೌದೌದು. ಆಸೆ........"

* * *

"ಅಯ್ಯೋ ಆ ಮಗುವನ್ನೊಮ್ಮೆ ಇಲ್ಲಿ ತನ್ನಿರಪ್ಪ. ನಾನೊಮ್ಮೆ ಹಿಡಿಯುತ್ತೇನೆ" ತನಿಯ ನರಳುತ್ತಿದ್ದಲ್ಲಿಂದಲೇ ಕೂಗಿದ.

ಸೀತು ಅದನ್ನು ಹಾಳೆಯಲ್ಲಿ ಮಲಗಿಸಿ ತಂದಳು. ತನಿಯ ಅದರ ಮುಖವನ್ನು ಸಂತೋಷದಿಂದ ಕಣ್ಣಾರಳಿಸಿ ನೋಡಿದ. ಅವನು ಕೈಗಳನ್ನು ಎತ್ತಲಾರ. ಅಲ್ಲಿಂದಲೇ ಹಾಳೆಗೆ ಬಾಗಿ ಮಗುವಿಗೆ ಮುದ್ದಿಟ್ಟ.

"ಹಾಯ್! ಮಗು ಹುಟ್ಟುವಾಗಲೇ ನನಗೆ ಹೀಗಾಗಬೇಕೆ? ಏನು ಗ್ರಹಚಾರವಪ್ಪ! ಈ ಮಗು ಕೆಲ ವರ್ಷಗಳ ಹಿಂದೆ ಹುಟ್ಟ ಬಾರದಿತ್ತೆ?...."

ಹೀಗೆನ್ನುತ್ತ ಅವನು ತುಸು ಚೇತರಿಸಿಕೊಂಡ.

"ಅಂತೂ ನಾನು ಸಾಯಲಿಕ್ಕಿಲ್ಲವೆಂದು ಡಾಕ್ಟರರು ಹೇಳಿದ್ದಾರೆ. ಆದರೆ ಒಂದು ಕೈ ಆಗಲಿಕ್ಕಿಲ್ಲವಂತೆ. ಇನ್ನು ರಸ್ತೆಯ ಕೆಲಸ ಮುಗಿದಂತೆಯೇ. ಇನ್ನೇನೂ ಕಠಿಣವಾದ ಕೆಲಸ ಮಾಡಬಾರ ದೆಂದಿದ್ದಾರೆ."

"ನೀನು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಣ್ಣ," ಸೀತು ಕಣ್ಣೀರ

ನ್ನೊರಸಿಕೊಳ್ಳುತ್ತ ಹೇಳಿದಳು.

"ಅವಳು ಈಗ ಹುಶಾರಿದ್ದಾಳೆಯೆ ?" ಅವನು ಕೇಳಿದ.

"ಹೂಂ. ಇನ್ನು ಒಂದು ವಾರದಲ್ಲಿ ಏಳಬಹುದು. ಔಷಧಿ ಮುಗಿಯುತ್ತ ಬಂತು. ನಾನು ದೀಪಾವಳಿಗೆ ಮನೆಗೆ ಹೋಗುತ್ತೀನೆ. ಅಲ್ಲಿಯೂ ಯಾರೂ ಇಲ್ಲವಲ್ಲ ?"

"ನಿನ್ನ ಗಂಡನ ತಂಗಿಯಿದ್ದಾಳಲ್ಲ ?"

"ಅವಳಿಗೆ ಮೊನ್ನೆ ಒಂದು ಕಡೆಯಿಂದ ಮಾತು ಬಂದಿತ್ತು. ಈಗ ಮದುವೆ ಮುಗಿದಿರಲೂಬಹುದು."

ತನಿಯ ಮಾತಾಡಲಿಲ್ಲ.

ಅಷ್ಟರಲ್ಲಿ ಹೊನ್ನಮ್ಮ ಮೆಲ್ಲನೆ ಅವನ ಬಳಿ ಬಂದಳು. ಅವನನ್ನು ಕಂಡು ಅತ್ತಳು.

"ಏಕೆ ಸುಮ್ಮನೆ ಅಳುತ್ತೀಯಾ ?" ಎಂದು ಕೇಳಿದನವ. ಅವಳು ಉತ್ತರಿಸಲಿಲ್ಲ.

"ಸೀತು ಇನ್ನೊಂದು ವಾರದಲ್ಲಿ ಹೋಗುವಳಂತೆ. ನಿನಗೆ ಆಗ ಏಳಲಾಗುವುದೆ ?"

ಅವಳು ಆಗ ಕಣ್ಣನ್ನೊರಸುತ್ತ, "ಅವರಿಗೆ ದೀಪಾವಳಿಗೆ ಹೋಗಬೇಕು, ಬಹುಶಃ ಇನ್ನು ಹತ್ತೇ ದಿನ ಉಳಿದಿದೆ" ಎಂದಳು.

"ಹತ್ತೇ ದಿನಗಳೆ ?"

"ಹೂಂ."

"ಸೀತು ಹೋಗುವುದರೊಳಗೆ ಮಗುವನ್ನು ತೊಟ್ಟಿಲಲ್ಲಿ ಹಾಕಬೇಕು."

"........"

"ಆಗಲಿಕ್ಕಿಲ್ಲವೇ ?"

"........"

"ಮಗುವನ್ನು ಈಗ ನಾನು ನೋಡಿದೆ. ಮುದ್ದಾಗಿದೆ. ಅಂತೂ

ಈಗ ದೇವರು ನಮ್ಮಿಬ್ಬರ ಮೇಲೆ ಕಣ್ಣು ಬಿಟ್ಟಂತೆ ತೋರುತ್ತದೆ."

ಹೊನ್ನಮ್ಮ ಉತ್ತರಿಸಲಿಲ್ಲ. ಅಳುವನ್ನು ನಿಲ್ಲಿಸಿದಳು.

"ನನ್ನೊಡನೆ ನೀನು ಈ ವರ್ತಮಾನವನ್ನೇ ಹೇಳಲಿಲ್ಲವಲ್ಲ ?"

"ಯಾವುದು ?"

"ನೀನು ಗರ್ಭಿಣಿ ಎಂಬುದನ್ನು ? ಅದಕ್ಕಾಗಿ ಇನ್ನೊಬ್ಬಳನ್ನು ತರುವುದೆಂದು ನೆನೆಸಿದೆ. ಅವಳಿಗೊಬ್ಬ ಮಗನೂ ಇದ್ದ. ಅದಕ್ಕೇ ದೇವರು ಈರೀತಿಯ ಪ್ರಾಯಶ್ಚಿತ್ತ ಕೊಟ್ಟರು."

"........"

"ನಮ್ಮಲ್ಲಿ ತೊಟ್ಟಿಲು ಇಲ್ಲ. ಎಲ್ಲಿಂದಾದರೂ ಪಡಕೊಳ್ಳಬೇಕು. ಹಣವೂ ಇಲ್ಲ."

"ಹೊಂ."

ಮತ್ತೆ ತುಸು ಹೊತ್ತು ತನಿಯ ಅವಳನ್ನೇ ನೋಡಿದ. ಅವಳಿಗೆ ಅವನ ಕಣ್ಣುಗಳನ್ನು ನೋಡಲಾಗಲಿಲ್ಲ. ಅವಳು ಒಮ್ಮೆಲೇ ಬಿಕ್ಕಿ ಬಿಕ್ಕಿ ಅಳ ತೊಡಗಿದಳು.

"ಛಿ ಹುಚ್ಚೀ !" ಅವನೆಂದ. "ಆದದ್ದು ಆಗಿಹೋಯಿತು. ನನಗೆ ಮಕ್ಕಳಾಗಲಿಕ್ಕಿಲ್ಲವೆಂದು ನಾನು ಮುಂಚೆಯೇ ತಿಳಿದಿದ್ದೆ. ಆಯಿತು. ಈಗ ನಿನ್ನ ಆಸೆ ನೆರವೇರಿತಲ್ಲ ! ನನಗೂ ಸಂತೋಷವೇ ಸೈ"

—ಹೀಗೆನ್ನುವಾಗ ಹೊನ್ನಮ್ಮ ತನಿಯನ ಕಾಲ ಮೇಲೆ ಬಿದ್ದಿದ್ದಳು. ಸೀತು ದೂರದಲ್ಲಿ ನಿಂತುಕೊಂಡಿದ್ದಳು.

"ಏಳು, ಏಳು ! ಹೆಚ್ಚು ಅಳಬೇಡ. ನಿನಗೆ ಮೊದಲೇ ನಿತ್ರಾಣವಾಗಿದೆ" ಎನ್ನುತ್ತ ತನಿಯ ಅವಳ ತಲೆಯನ್ನು ಸವರಿದ.

* * *

"ಏನು ಧನಿಗಳೇ ! ನೀವು ನನ್ನ ಮಗನ ಸುದ್ದಿಯನ್ನು ಮಾತಾಡುತ್ತಿದ್ದಿರಲ್ಲ ? ಅವನಿಗೆ ಈಗ ಮದುವೆ ಮಾಡಬೇಕೆಂದಿದ್ದೇನೆ. ದೀಪಾವಳಿ ಕಳೆದು ನಾಲ್ಕು ದಿನಗಳಲ್ಲಿ ಮುಹೂರ್ತವಿದೆ

ಯಂತೆ. ನಿಮ್ಮ ಹತ್ತಿರ, ನಕ್ಷತ್ರ ಒಳ್ಳೆಯದಿದೆಯೇ ಎಂದು ಕೇಳಬೇಕೆಂದಿದ್ದೆ."

"ಹೂಂ" ಎಂದರು ತಂತ್ರಿಗಳು ಬೆರಳುಗಳನ್ನು ಮಡಚಿ ಲೆಕ್ಕ ಹಾಕುತ್ತ. "ಅಂದು ರೋಹಿಣೀ ನಕ್ಷತ್ರ. ಮದುವೆಗೆ ಒಳ್ಳೆಯದೇ?"

"ಆದರೆ ಚೌತಿ, ಮದುವೆಗೆ ಒಳ್ಳೆಯದಲ್ಲವಂತೆ ಅಲ್ಲವೇ ?" ನಾಯ್ಕರು ಕೇಳಿದರು.

"ಹೊಂ. ನಮಗೇನು ಸ್ವಾಮಿ. ಮದುವೆ ಹೇಗಾದರೂ ಆಗು ವಾಗ ಆಗಿಯೇ ಆಗುತ್ತದೆ. ದಿನ ನೋಡುವುದು, ಘಳಿಗೆ ಲೆಕ್ಕ ಹಾಕುವುದು ಎಲ್ಲ ಸುಮ್ಮನೆ ಅಪನಂಬಿಕೆ."

"ಹಾಗೆನ್ನಬೇಡ ವೆಂಕಪ್ಪ !" ತಂತ್ರಿಗಳು ನುಡಿದರು. "ನನ್ನ ಮಗಳನ್ನು ಧನಿಷ್ಠಾ ನಕ್ಷತ್ರದಂದು ಮದುವೆ ಮಾಡಿಸಿದೆ. ಎಲ್ಲ ಜೋಯಿಸರೂ ಅಂದು ಆಗದೆಂದಿದ್ದರು. ಎರಡೇ ತಿಂಗಳಲ್ಲಿ ಅವಳ ಮಾವ ಸತ್ತುಹೋದರು !"

"ನಮಗೆ ಶೂದ್ರರಿಗೆ ಅದೆಲ್ಲ ಸರಿಯಾಗದು ಧನಿಗಳೇ. ಈಗ ಮಾಪಿಳ್ಳೆಯವರು, ಕ್ರೈಸ್ತರು ಎಲ್ಲ ಪಂಚಾಂಗ ನೋಡಿಯೇ ಮದುವೆ ಯಾಗುತ್ತಾರೆಯೆ ?"

"ಈಗಿನ ಹುಡುಗರೇ ತಮಗೆ ಬೇಕಾದ ಹುಡುಗಿಯರನ್ನು ಆರಿಸುತ್ತಾರೆ. ಎಲ್ಲ ರಿಜಿಸ್ಟ್ರಿ ಆಫೀಸಿನಲ್ಲಿ ಮುಗಿಯುತ್ತದೆ" ಎಂದು ನಾಯ್ಕರು ನಕ್ಕರು.

"ಅಷ್ಟೇ ! ಖರ್ಚಿಲ್ಲದೆ ಮದುವೆಯಾಗುತ್ತದೆ. ಮತ್ತೆ ಹುಡುಗರಿ ಗಾದರೂ ಇನ್ನೇನು ಬೇಕು ?" ವೆಂಕಪ್ಪನೆಂದ.

"ಆದರೆ ಮಾರಪ್ಪ ಒಳ್ಳೆಯ ಹುಡುಗ" ನಾಯ್ಕರೆಂದರು. "ಅವನು ಅದಕ್ಕೆಲ್ಲ ಒಪ್ಪಲಿಕ್ಕಿಲ್ಲ."

"ಹುಂ !" ವೆಂಕಪ್ಪ ಉದ್ಗರಿಸಿದ. "ನಾಯ್ಕರು ಯಾವಾಗಲೂ ಎಲ್ಲವನ್ನೂ ತಿಳಿದವರಂತೆ ಮಾತಾಡುತ್ತಿರುವರಲ್ಲ ! ಯಾರಿಗೆ

ಬೇಕಾದರೂ ಸರ್ಟಿಫಿಕೇಟು ಕೊಡುತ್ತಾರೆ. ನನ್ನ ಮಗನದು ನನಗೆ ಗೊತ್ತಲ್ಲದೆ ಮತ್ತೆ ಯಾರಿಗೆ ಗೊತ್ತು? ಅವನ ಕೃಪೆಯಿಂದ ತನಿಯನ ಸಂತಾನ ಬೆಳೆಯಿತು. ತನಿಯ ಜೈಲಿಗೆ ಹೋದ ಬಳಿಕ ಮಾರಪ್ಪ ರಾತ್ರಿ ಒಂದು ದಿನವೂ ನಮ್ಮ ಮನೆಯಲ್ಲಿರುತ್ತಿದ್ದಿಲ್ಲ."

ನಾಯ್ಕರು ಗಹಗಹಿಸಿ ನಕ್ಕರು. ತಂತ್ರಿಯವರು ಅವರ ಕುತಂತ್ರದ ಮುಗುಳು ನಗುವನ್ನು ಬೀರಿದರು.

"ಅದಕ್ಕಾಗಿಯೇ ನೋಡಿ ಧನಿಗಳೇ, ಅವನಿಗೆ ಬೇಗನೇ ಮದುವೆಯಾಗಬೇಕೆಂದು ನಿಶ್ಚಯಿಸಿದ್ದು. ಇಲ್ಲವಾದರೆ ಇನ್ನೂ ಒಂದೆರಡು ವರ್ಷ ಹೋಗಲಿ ಎಂದು ಗ್ರಹಿಸಿದ್ದೆ. ಆದರೆ ಅಷ್ಟರಲ್ಲಿ ಏನಾದೀತೆಂದು ಹೇಳಲು ಸಾಧ್ಯವಿಲ್ಲ."

"ನೀನು ಹೇಳಿದರೆ ಅವನು ಕೇಳುವುದಿಲ್ಲವೆ ?" ತಂತ್ರಿಯವರು ಕೇಳಿದರು.

"ಕೇಳುವುದೇನು ಸ್ವಾಮೀ ? ಈಗಿನ ಹುಡುಗರೇ ಹಾಗೆ. ನಾನು ನಾಯ್ಕರು ಹೇಳುವಂತೆ ನನ್ನ ಮಗ ಒಳ್ಳೆಯವನಾದಾನೆಂದು ಗ್ರಹಿಸಿದ್ದೆ. ಆದರೆ ಈಗ ಅವನೊಡನೆ ಇಲ್ಲದ ಮೋಳವಿಲ್ಲ. ಬೀಡಿ ದಿನಕ್ಕೆ ಇಪ್ಪತ್ತೈದಾದರೂಬೇಕು. ವಸ್ತ್ರಗಳನ್ನಂತೂ ಹೇಳಲು ಸಾಧ್ಯವಿಲ್ಲ. ಮತ್ತೆ ಈಗೀಗ ನಾಯ್ಕರ ಹೊಟೇಲಿನ ರುಚಿಯನ್ನೂ ಹಿಡಿದಿದ್ದಾನೆ...."

"ಇಲ್ಲಪ್ಪ ! ಇಲ್ಲಿಗೆ ಏನಾದರೂ ವಾರಕ್ಕೊಮ್ಮೆ ಬರುತ್ತಾನೆ, ಅಷ್ಟೆ" ನಾಯ್ಕರು ಒಮ್ಮೆಲೇ ನಿವೇದಿಸಿದರು.

"ಹೌದು ನಾಯ್ಕರೆ, ಎಲ್ಲವೂ ಹಾಗೆಯೇ," ವೆಂಕಪ್ಪನೆಂದ. "ಮೊದಲು ಎಲ್ಲವೂ ಒಂದರಿಂದ ಪ್ರಾರಂಭವಾಗುತ್ತದೆ. ಆಮೇಲೆ ಅದು ಯಾವ ರೂಪ ತಾಳುತ್ತದೆನ್ನಲು ಸಾಧ್ಯವಿಲ್ಲ. ಮತ್ತೆ ಪ್ರಾಯ ಬಂದ ಹುಡುಗರಿಗೆ ನಾವು ಏನನ್ನು ಹೇಳುವುದೂ ವ್ಯರ್ಥ. ಅವರನ್ನು ನಾವು ಉಪಾಯದಿಂದಲೇ ಸೋಲಿಸಬೇಕಷ್ಟೆ.."

"ಇಲ್ಲವಾದರೆ ಬೇರೆಯವರು ಬುದ್ಧಿ ಕಲಿಸುತ್ತಾರೆ" ಎಂದು ತಂತ್ರಿಯವರು ದನಿಗೂಡಿಸಿದರು.

"ಬೇರೆಯವರು ಕಲಿಸುವುದು ಹಾಗಿರಲಿ," ವೆಂಕಪ್ಪ ತಲೆ ಯಲ್ಲಾಡಿಸುತ್ತ ಹೇಳಿದ. "ನಮ್ಮ ಮಕ್ಕಳಿಗೆ ಬೇರೆಯವರು ಏನನ್ನು ಕಲಿಸಬಹುದು? ಅವರನ್ನು ನಾವು ನಡೆಸುವ ವಿಧಾನದಲ್ಲೇ ಎಲ್ಲವೂ ಇದೆ."

"ಹೂಂ. ಹೇಗಾದರೂ ಅವನಿಂದಾಗಿ ತನಿಯ ಭಾಗ್ಯವಂತ ನಾದ." ತಂತ್ರಿಯವರು ವ್ಯಂಗ್ಯವಾಗಿ ಹೇಳಿದರು.

"ಏನು ಸ್ವಾಮಿ ನೀವೆನ್ನುವುದು? ಈಗ ತನಿಯನ ಹೆಂಡತಿ ಅವಳಷ್ಟಕ್ಕೆ ಇರುತ್ತಿದ್ದರೆ ನನ್ನ ಮಗ ಏನು ಮಾಡಬಹುದಿತ್ತು? ಅವನ ವಯಸ್ಸಿನಲ್ಲಿರುವಾಗ ನಾವು ಏನೇನನ್ನೆಲ್ಲ ಮಾಡಿದ್ದೆವೋ ಎಂದು ಯಾರಿಗೆ ಗೊತ್ತು! ಈಗ ನಿಮ್ಮ ವಿಷಯವೇ ತೆಗೆದುಕೊಳ್ಳಿ ಧನಿಗಳೇ. ನಾವಿಬ್ಬರೂ ಕೂಡಿ ಆ ಕೋಟೆಯ ಹೆಂಡತಿಗೆ ಎಷ್ಟು ಉಪಟಳ ಕೊಟ್ಟದ್ದೆವು! ಆ ಜಾನಕಿಯನ್ನು ನೀವು ದೇವರೆಂದೇ ಪೂಜಿಸುತ್ತಿರಲಿಲ್ಲವೇ? ನಮ್ಮ ಬುದ್ಧಿಯೇ ನಮ್ಮ ಮಕ್ಕಳಲ್ಲೂ ಇದೆ. ಅದಕ್ಕೆ ನಾವು ಅವರನ್ನು ಏಕೆ ದೂರುವುದು? ನೀವೇ ಹೇಳಿ. ಮಾರಪ್ಪ ಈಗ ಆರೇಳು ತಿಂಗಳುಗಳಲ್ಲಿ ಗಾಣದ ಕೆಲಸ ಮಾಡಿದ ಕೂಲಿಯ ಪೈಕಿ ಒಂದು ಚಿಕ್ಕಾಸೂ ನನ್ನ ಕೈ ಸೇರಿಲ್ಲ. ಅದೆಲ್ಲ ಏನಾಯಿತೆಂದು ನನಗೆ ಕೇಳಲೂ ಧೈರ್ಯವಿಲ್ಲ. ಇನ್ನು ಹೀಗೆಯೇ ಬಿಟ್ಟರೆ ಮಾತ್ರ ಅವನು ಮನೆಯನ್ನು ಮಾರಿ ಬಿಟ್ಟಾನೆಂದೇ ಈ ಮದುವೆಯ ಕೆಲಸಕ್ಕೆ ಇಷ್ಟು ತ್ವರೆಯಲ್ಲಿ ಕೈ ಹಾಕಿದೆ, ಅಷ್ಟೆ."

ತಂತ್ರಿಯವರು ಮುಗುಳು ನಗುವಿನಲ್ಲೇ ವೆಂಕಪ್ಪನೆಂದುದನ್ನು ತಲೆಯಾಡಿಸುತ್ತ ಕೇಳಿದರು. ಅವನೊಡನೆ ಇನ್ನು ಮಾತಾಡಿ ಅವನನ್ನು ಕೆಣಕುವ ಮನಸ್ಸು ಅವರಿಗಿರಲಿಲ್ಲ. ಅದೂ ನಾಯ್ಕರ ಕಿವಿಗೆ ಈ ಮಾತುಗಳೆಲ್ಲ ಬಿದ್ದರೆ ತನ್ನ ಸ್ಥಾನ ಮಾನಗಳು ಎಲ್ಲಿ

ಉಳಿದಾವೆಂದು ಅವರಿಗೆ ತುಸು ಅಂಜಿಕೆಯಾಗದಿರಲಿಲ್ಲ.

"ವೆಂಕಪ್ಪ, ಈಗ ನನಗೆ ಹೋಗಬೇಕು. ಸಮಯವಾಯಿತು ನಿನ್ನಲ್ಲಿ ಕೆಂದಾಳಿ ತೆಂಗಿನ ಸಸಿಗಳಿವೆಯಂತೆ ಅಲ್ಲವೆ? ನನಗೆ ನಾಲ್ಕು ಸಸಿಗಳು ಬೇಕು ಕೊಡುವೆಯಾ?" ಎಂದು ಮತ್ತೆ ಅವರು ಕೇಳಿದರು.

"ಒಹ್! ಅದಕ್ಕೇನಡ್ಡಿ ಸ್ವಾಮಿಾ", ವೆಂಕಪ್ಪ ಠೀವಿಯಿಂದ ನಕ್ಕ. "ನಾಲ್ಕು ಸಸಿಯಲ್ಲ, ಇಡೀ ತೋಟವೇ ಬೇಕಾದರೂ ನಿಮಗೆ ನಾನು ಕೊಡದಿರುವವನೇ? ನಾಳೆಯೇ ಬೇಕಾದರೆ ಕಳಿಸುತ್ತೇನೆ."

"ಇಲ್ಲ, ನಾನು ಜನ ಕಳಿಸುತ್ತೇನೆ."

"ಬೇಡಪ್ಪ. ನಿಮ್ಮ ಜನ-ನನ್ನ ಜನವೆಂದು ನಮ್ಮಲ್ಲಿ ಭೇದ ವಿದೆಯೆ? ನೀವು ಆ ಕುರಿತು ಯೋಚಿಸಬೇಡಿ. ನಾಳೆ ಬೆಳಗ್ಗೆ ನಾಲ್ಕು ಸಸಿಗಳೂ ನಿಮ್ಮ ಮನೆ ಬಾಗಿಲಲ್ಲಿರುವಂತೆ ಮಾಡುತ್ತೇನೆ."

"ಆಯಿತಪ್ಪ!" ಎಂದು ತಂತ್ರಿಯವರು ಮೆಟ್ಟನ್ನು ಕಾಲಿಗೆ ಸಿಕ್ಕಿಸಿ ಹೊರಟರು.

"ಒಳ್ಳೆಯದು ಸ್ವಾಮಿಾ, ನಾನು ನಿಲ್ಲುತ್ತೇನೆ" ಎಂದು ವೆಂಕಪ್ಪ ಕುಳಿತುಕೊಂಡಲ್ಲಿಂದಲೇ ನಮಸ್ಕರಿಸಿದ. ತಂತ್ರಿಗಳೂ ಕೈಮುಗಿದರು.

ಅವರು ಹತ್ತುಮಾರು ದೂರ ಹೋಗುವಾಗ ಹೊಟೇಲಿನಿಂದ ಪುನಃ ಮಾತನಾಡುವುದು ಕೇಳಿತು. ಅವರು ಸ್ವಲ್ಪ ಮೆಲ್ಲಗೆ ಹೆಜ್ಜೆ ಹಾಕತೊಡಗಿದರು.

"ಮಾರಪ್ಪ ಇವರಿಗೆ ಬುದ್ಧಿ ಕಲಿಸಿದ್ದು ನಿನಗೆ ಗೊತ್ತಿಲ್ಲವೆ? ವೆಂಕಪ್ಪಣ್ಣ? ಈ ಹುಳಿಕಾಯಿ ಅಂದು ಅವನ ಕಾಲು ಹಿಡಿಯಿತಂತೆ" ನಾಯ್ಕರು ನಗುತ್ತ ಹೇಳುತ್ತಿದ್ದರು.

"ಅಬ್ಬಾ ನಾಯ್ಕರೆ!" ವೆಂಕಪ್ಪ ನಗುತ್ತ ಉದ್ಗರಿಸಿದ. "ನಿಮಗೆ ಸಿಕ್ಕದ ಸುದ್ದಿಯಿಲ್ಲವೆನ್ನುವುದು ಸುಳ್ಳಲ್ಲ ಹ್ಹ! ಹ್ಹ! ಹ್ಹ!"

ತಂತ್ರಿಯವರು ಮತ್ತೆ ವೇಗದಲ್ಲಿ ಮನೆಯ ಕಡೆ ನಡೆಯ